# ಬದಲಾಗುತ್ತಿರುವ ಸಮಾಜದಲ್ಲಿ ಹಕ್ಕಿಪಿಕ್ಕಿ ಸಮುದಾಯದ ಆರ್ಥಿಕ ಸ್ಥಿತಿಗತಿ

(ಬಿಂದು ಕಾಲೋನಿಯ ವಿಶಿಷ್ಟ ಅಧ್ಯಯನ)

ಅರ್ಥಶಾಸ್ತ್ರದಲ್ಲಿ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಪ್ರಬಂಧ


ಸಂಶೋಧಕ

ಸುದರ್ಶನ್‌ಕುಮಾರ್.ಎಂ

ಮಾರ್ಗದರ್ಶಕರು

ಡಾ. ಹಿ. ಚಿ. ಬೋರಲಿಂಗಯ್ಯ

ಪ್ರಾಧ್ಯಾಪಕರು

ಬುಡಕಟ್ಟು ಅಧ್ಯಯನ ವಿಭಾಗ





ಸಮಾಜ ವಿಜ್ಞಾನಗಳ ನಿಕಾಯ

ಬುಡಕಟ್ಟು ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ, ೫೮೩ ೨೭೬


೨೦೦೩



# ಬದಲಾಗುತ್ತಿರುವ ಸಮಾಜದಲ್ಲಿ ಹಕ್ಕಿಪಿಕ್ಕಿ ಸಮುದಾಯದ ಆರ್ಥಿಕ ಸ್ಥಿತಿಗತಿ

(ಒಂದು ಕಾಲೋನಿಯ ವಿಶಿಷ್ಟ ಅಧ್ಯಯನ)

ಅರ್ಥಶಾಸ್ತ್ರದಲ್ಲಿ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಪ್ರಬಂಧ


ಸಂಶೋಧಕ

ಸುದರ್ಶನ್‌ಕುಮಾರ್.ಎಂ

ಮಾರ್ಗದರ್ಶಕರು

ಡಾ.ಹಿ.ಚಿ.ಬೋರಲಿಂಗಯ್ಯ

ಪ್ರಾಧ್ಯಾಪಕರು

ಬುಡಕಟ್ಟು ಅಧ್ಯಯನ ವಿಭಾಗ







ಸಮಾಜ ವಿಜ್ಞಾನಗಳ ನಿಕಾಯ

ಬುಡಕಟ್ಟು ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೨




19

## ದೃಢೀಕರಣ ಪತ್ರ

ಶ್ರೀ ಎಂ. ಸುದರ್ಶನ್‌ಕುಮಾರ್ ಇವರು **'ಬದಲಾಗುತ್ತಿರುವ ಸಮಾಜದಲ್ಲಿ ಹಕ್ಕಿಪಿಕ್ಕಿ ಸಮುದಾಯದ ಆರ್ಥಿಕ ಸ್ಥಿತಿಗತಿ'** (ಒಂದು ಕಾಲೋನಿಯ ವಿಶಿಷ್ಟ ಅಧ್ಯಯನ) ಎಂಬ ಶೀರ್ಷಿಕೆಯ, ಈ ಸಂಶೋಧನಾ ಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಅರ್ಥಶಾಸ್ತ್ರದಲ್ಲಿ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಈ ಪ್ರಸ್ತುತ ಪ್ರಬಂಧವನ್ನು ಸಲ್ಲಿಸಲಾಗುತ್ತಿದೆ. ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಅಥವಾ ಇತರ ಉದ್ದೇಶಗಳಿಗಾಗಿ ಬಳಸಿಕೊಂಡಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : ೨೦. ೮. ೨೦೦೨

ಸ್ಥಳ : ವಿದ್ಯಾರಣ್ಯ

**ಡಾ. ಹಿ ಚಿ ಬೋರಲಿಂಗಯ್ಯ**
ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

## ಪ್ರಮಾಣ ಪತ್ರ

'ಬದಲಾಗುತ್ತಿರುವ ಸಮಾಜದಲ್ಲಿ ಹಕ್ಕಿಪಿಕ್ಕಿ ಸಮುದಾಯದ ಆರ್ಥಿಕ ಸ್ಥಿತಿಗತಿ' (ಒಂದು ಕಾಲೋನಿಯ ವಿಶಿಷ್ಟ ಅಧ್ಯಯನ) ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಅರ್ಥಶಾಸ್ತ್ರದಲ್ಲಿ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಯಲಕ್ಕೆ ಡಾ.ಹಿ.ಚಿ.ಬೋರಲಿಂಗಯ್ಯ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ಸಂಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ ಎಂದು ದೃಢೀಕರಿಸುತ್ತೇನೆ.

ದಿನಾಂಕ: ೨೦. ೪. ೨೦೦೨

ಸ್ಥಳ : ವಿದ್ಯಾರಣ್ಯ

**ಸುದರ್ಶನ್‌ಕುಮಾರ್.ಎಂ**
ಸಂಶೋಧನ ವಿದ್ಯಾರ್ಥಿ
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ನೆನಕೆಗಳು

ಕನ್ನಡ ವಿಶ್ವವಿದ್ಯಾಲಯದಲ್ಲಿ ಅಧ್ಯಯನ ಮಾಡಲು ಅವಕಾಶ ಕಲ್ಪಿಸಿಕೊಟ್ಟ ಕುಲಪತಿಗಳಾದ ಡಾ.ಎಚ್.ಜೆ.ಲಕ್ಕಪ್ಪಗೌಡ ಮತ್ತು ಮಾನ್ಯ ಕುಲಸಚಿವರಿಗೆ,

ಅಧ್ಯಯನ ಕ್ರಮವನ್ನು ಬೋಧಿಸಿ ಮಾರ್ಗದರ್ಶನ ಮಾಡಿ, ಪ್ರೋತ್ಸಾಹಿಸಿದ ಅಧ್ಯಯನಾಂಗದ ನಿರ್ದೇಶಕರು ಮತ್ತು ಬುಡಕಟ್ಟು ಅಧ್ಯಯನ ವಿಭಾಗದ ಮುಖ್ಯಸ್ಥರಾದ ಡಾ.ಹಿ.ಚಿ.ಬೋರಲಿಂಗಯ್ಯ ಸರ್ ಅವರಿಗೆ,

ಅಧ್ಯಯನದ ಅವಧಿಯಲ್ಲಿ ಚರ್ಚಿಸುತ್ತಾ ಸೂಕ್ತ ಸಲಹೆ, ಸಹಕಾರ ಮಾಹಿತಿ ನೀಡಿದ ಎ.ಎಸ್.ಪ್ರಭಾಕರ್, ಸಮುದಾಯಗಳ ಬಗ್ಗೆ ವಿಶೇಷವಾಗಿ ಚಿಂತಿಸುವ ಡಾ. ಕೆ.ಎಂ.ಮೈತ್ರಿ ಹಾಗೂ ಚಲುವರಾಜು ಗಂಗಾಧರ್ ದೈವಜ್ಞ, ಬುಡಕಟ್ಟು ಅಧ್ಯಯನ ವಿಭಾಗದ ಸಿಬ್ಬಂದಿ ವರ್ಗ ಮತ್ತು ಗ್ರಂಥಾಲಯ ಸಿಬ್ಬಂದಿ ವರ್ಗದವರಿಗೆ, ಓರೇಕೋರೆಗಳನ್ನು ಸರಿಪಡಿಸಿಕೊಳ್ಳಲು ಸಹಕಾರವಿತ್ತ ಡಾ.ಪುಟ್ಟಯ್ಯನವರಿಗೆ ಕ್ಷೇತ್ರಕಾರ್ಯದಲ್ಲಿ ಸಹಕಾರವಿತ್ತ ಹಕ್ಕಿಪಿಕ್ಕಿ ಕಾಲೋನಿಯ ಡಿವಿಜನ್, ವಿಷ್ಣು, ಚಂದ್ರು, ಶ್ರೀಕಾಂತ್ ಮತ್ತು ಕ್ಷೇತ್ರ ಕಾರ್ಯದಲ್ಲಿ ಜೊತೆಗಿದ್ದ ಭಾಸ್ಕರ, ಮಂಜು, ಶರವಣ, ಗೆಳೆಯ ಶಿವಶಂಕರ್‌ರವರಿಗೆ,

ನನ್ನ ಅನೇಕ ವಿಷಯಗಳಿಗೆ ಸಹಕಾರ ಸಲಹೆ ನೀಡಿ ಪ್ರೇರಪಿಸುತ್ತಿದ್ದ ಹಿರಿಯರಾದ ವಿ.ಸಿ.ಮಾರುತಿ ಶಿವಕುಮಾರ್, ಮುತ್ತು ಮತ್ತು ಸುಧೀಂದ್ರ. ಕುಶಾಲ್, ಜೊತೆಗೆ ನಿಂತ ಗೆಳೆಯ ಸುರೇಶ್, ಶ್ರೀಮತಿ ಭಾಗ್ಯಮ್ಮಪ್ರಭಾಕರ್‌ರವರಿಗೆ ಕರುಡುತಿದ್ದಿ ಸಹಕರಿಸಿದ ಜಾಜಿದೇವೇದ್ರಪ್ಪ ಶೋಭಾರಾಣಿಯವರಿಗೆ,

ಗುರುವಿನ ಹಾಗೆ ನನ್ನ ವಿಧ್ಯಾಭ್ಯಾಸಕ್ಕೆ ಕಾರಣರಾದ ತಾತ ಭೈರಪ್ಪ ಮತ್ತು ಚಿಕ್ಕಪ್ಪ ನಾ.ವೆಂಕಟಾಚಲಪತಿ ಹಾಗೂ ಯಶಸ್ಸಿನ ಒಂದು ಭಾಗವಾದ ಚಿಕ್ಕಮ್ಮಂದಿರಾದ ಸರಸ್ವತಿದೇವಿ ಮತ್ತು ಜಯಲಕ್ಷ್ಮಿ ಕುಟುಂಬದವರಿಗೆ,

ಅಕ್ಷರ ಜಗತ್ತಿನಲ್ಲಿ ಅಸಂಖ್ಯ ಕನಸುಗಳನ್ನು ಹೊತ್ತ ನನ್ನ ಅಭ್ಯಾಸಕ್ಕೆ ನಿರಂತರ ಒತ್ತಾಸೆಯಾಗಿರುವ ನನ್ನ ತಾಯಿ, ಕಿರಿಯ ವಯಸ್ಸಿನಲ್ಲಿ ಸರೀಕರ ಮುಂದೆ ಬದುಕಲು ಹೆಣಗಾಡುತ್ತಾ ನನ್ನ ಬದುಕನ್ನು ಎದುರು ನೋಡುತ್ತ ನನಗಾಗಿ ಕಷ್ಟಪಡುತ್ತಿರುವ ತಮ್ಮ ಮೋಹನ್ ಬಾಬು, ನವೀನ ಮತ್ತು ಸತೀಶರವರಿಗೆ,

ಈ ಪ್ರಬಂಧದ ಅಕ್ಷರ ಸಂಯೋಜನೆ ಮಾಡಿಕೊಟ್ಟ ಗೆಳಯರಾದ ಪತ್ರಕರ್ತ ಬಸವರಾಜು ಮತ್ತು ಬಸವರಾಜ್‌ರವರಿಗೆ,

ನನ್ನ ಕೃತಜ್ಞತೆಗಳು ಸಲ್ಲುತ್ತವೆ.

ಸುದರ್ಶನ್‌ಕುಮಾರ್.ಎಂ

# ಪರಿವಿಡಿ

ಅಧ್ಯಾಯ ೧

# ಅಧ್ಯಯನದ ಉದ್ದೇಶ, ಮಹತ್ವ, ವ್ಯಾಪ್ತಿ ಮತ್ತು ವಿಧಾನ

ಪ್ರಸ್ತಾವನೆ
ಅಧ್ಯಯನದ ಉದ್ದೇಶ
ಅಧ್ಯಯನದ ಮಹತ್ವ
ವ್ಯಾಪ್ತಿ
ಅಧ್ಯಯನದ ವಿಧಾನ

# ಅಧ್ಯಯನದ ಉದ್ದೇಶ, ಮಹತ್ವ, ವ್ಯಾಪ್ತಿ ಮತ್ತು ವಿಧಾನ

## ಪ್ರಸ್ತಾವನೆ

**ಸೃ**ಷ್ಟಿಯಲ್ಲಿ ಮಾನವ ನಿನ್ನೆ ಮೊನ್ನೆಯವನಲ್ಲ. ಕೆಲವು ಲಕ್ಷ ವರುಷಗಳಷ್ಟು ಹಳಬ. ಈತನ ಜೀವನ ವಿಧಾನವು ಒಂದೇ ತೆರನಾಗಿಲ್ಲ. ಬದುಕಿನ ಪದ್ಧತಿಯಲ್ಲಿ ಬದಲಾವಣೆಗಳು ತನ್ನ ಭಾವನೆಗಳಂತೆ ಬದಲಾವಣೆಗೊಳ್ಳುತ್ತಾ ಬಂದಿವೆ. ಇಂದು ಇದು ಪ್ರತಿಕ್ಷಣ ಕ್ಷಣವು ಬದಲಾವಣೆಯ ಯುಗವಾಗಿದೆ. ಹೀಗೆ ಬದಲಾಗುತ್ತಿರುವ ಜಾಗತೀಕರಣದ ಸಂದರ್ಭದಲ್ಲಿ, ಬಡತನ, ಅಜ್ಞಾನ, ಶೋಷಣೆಗಳು ಹೆಚ್ಚುತ್ತಲೇ ನಡೆದಿವೆ. ಶೋಷಣೆಯ ಸ್ವರೂಪ ಮಾತ್ರ ಬದಲಾಗಿದೆ. ಇದಕ್ಕೆ ಉತ್ತಮ ಮಟ್ಟವಲ್ಲದ ಆರ್ಥಿಕ ಸ್ಥಿತಿ, ಮೂಲಭೂತ ಸೌಲಭ್ಯಗಳು ಬಹುಮುಖ್ಯ ಕಾರಣವಾಗಿದೆ. ಇಂತಹ ಶೋಷಣೆಯಲ್ಲಿ ಬಹಳಷ್ಟು ಪಾಲು ಬುಡಕಟ್ಟು ಸಮುದಾಯಗಳಿಗೆ ಸೀಮಿತವಾದದ್ದು. ಭಾರತದಲ್ಲಿ ಸಾಮಾಜಿಕ ಅಸಮಾನತೆಗಳ ಮತ್ತು ಬಡತನ ರೇಖೆಗಿಂತ ಕೆಳಗಿನ ಸ್ತರದಲ್ಲಿ ಜೀವಿಸುತ್ತಿರುವ ಅಭಾಗ್ಯ ಬುಡಕಟ್ಟು ಸಮುದಾಯಗಳಲ್ಲಿ ಅಲೆಮಾರಿ ಹಕ್ಕಿಪಿಕ್ಕಿ ಸಮುದಾಯವು ಒಂದಾಗಿದೆ. ನಿಕೃಷ್ಟ ಜೀವನ ನಡೆಸುತ್ತಿರುವ ಈ ಸಮುದಾಯ ಇಂದು ಅನಿವಾರ್ಯವಾಗಿ ಇತರ ಸಮುದಾಯಗಳೊಂದಿಗೆ ಸಹಭಾಗಿತ್ವದಿಂದ ಜೀವಿಸಬೇಕಾಗಿದೆ. ಇಂದು ಅನಿವಾರ್ಯವು ಹೌದು. ಹೀಗಾಗಿ ಈ ಅಧ್ಯಯನ ಬದಲಾಗುತ್ತಿರುವ ಸಮಾಜದಲ್ಲಿ ಹಕ್ಕಿಪಿಕ್ಕಿಯರು ವ್ಯವಸ್ಥೆಗೊಳಿಸಿಕೊಂಡ ಆರ್ಥಿಕ ಸ್ಥಿತಿಯನ್ನು ಕುರಿತ ಅಧ್ಯಯನವಾಗಿದೆ. ಪಾರಂಪರಾಗತವಾಗಿ ಬಂದಿದ್ದ ಕಸಬುಗಳು, ಇಂದು ಸಾಕಷ್ಟು ಮಾಯವಾಗಿವೆ. ಬುಡಕಟ್ಟು ಸಮುದಾಯದ ಕಲ್ಯಾಣ ಕಾರ್ಯಕ್ರಮಗಳು ಪ್ರಾರಂಭಗೊಂಡ ನಂತರ ವಿಶೇಷವಾಗಿ ಪಂಚವಾರ್ಷಿಕ ಯೋಜನೆಗಳಲ್ಲಿ ಹಣಕಾಸು ಒದಗಿಸಲಾಗುತ್ತಿದೆ. ಸರಕಾರದಲ್ಲಿ ವಿಶೇಷವಾಗಿ ಬುಡಕಟ್ಟು ಅಭಿವೃದ್ಧಿಯ ಸಲುವಾಗಿ ಒಂದು ಇಲಾಖೆ ಕಾರ್ಯೋನ್ಮುಖವಾಗಿದ್ದರೂ ಅದು ಈ ಬಗೆಯ ಸಮುದಾಯಗಳನ್ನು ತಲುಪಲು ಸಾಧ್ಯವಾಗುತ್ತಿಲ್ಲ.

ಬದಲಾದ ಪರಿಸ್ಥಿತಿಯಲ್ಲಿ ಸಮುದಾಯದ ಒಟ್ಟು ಜೀವನ ಕ್ರಮದಲ್ಲಾದ ರೂಪಾಂತರಗಳನ್ನು, ಅದರಲ್ಲೂ ಆರ್ಥಿಕ ಚಟುವಟಿಕೆಗಳಲ್ಲಾದ ಸ್ಥಿತ್ಯಂತರಗಳನ್ನು ಅಧ್ಯಯನಕ್ಕೊಳಪಡಿಸುವುದು ನನ್ನ ಮುಖ್ಯ ಉದ್ದೇಶವಾಗಿದೆ.

ಇಂದು ನಿರಂತರ ಬದಲಾವಣೆಯನ್ನು ಕಾಣುತ್ತಿರುವ ಸಮಾಜ ಹಾಗು ದಿನ ದಿನ ಹೊಸ ಹೊಸ ಆವಿಷ್ಕಾರಗಳು, ಶೋಧನೆಗಳು ಜಗತ್ತನ್ನು ತಲ್ಲಣಗೊಳಿಸುತ್ತಿರುವ ವ್ಯವಸ್ಥೆಯಲ್ಲಿ ಬೆಂಗಳೂರಿನಂತಹ ಮಹಾನಗರದ ಸಮೀಪದಲ್ಲೇ ಜೀವಿಸುತ್ತಿರುವ ಹಕ್ಕಿಪಿಕ್ಕಿ ಸಮದಾಯದ ಆರ್ಥಿಕ ವ್ಯವಸ್ಥೆಯನ್ನು ಕುರಿತು ಅಧ್ಯಯನ ಮಾಡುವುದು ಅಗತ್ಯವಾಗಿದೆ. ಹೀಗಾಗಿ ಹಕ್ಕಿಪಿಕ್ಕಿಯರು ಬದಲಾದ ಸಮಾಜದೊಂದಿಗೆ ರೂಪಿಸಿಕೊಂಡು ಬಂದ ಅರ್ಥವ್ಯವಸ್ಥೆಯ ಮೂಲಾಂಶ ಹಾಗೂ ಪದ್ಧತಿಯನ್ನು ತಿಳಿಯುವ ಅಧ್ಯಯನವಿದು.

ಹಿಂದೆ ಸಮುದಾಯದ ಜನರಿಗೆ ವಿಶೇಷವಾದ ಜೀವನ ವಿಧಾನವಿದ್ದು, ಈಗ ಬದಲಾವಣೆಯ ಪರಿಸ್ಥಿತಿಗೆ ತಕ್ಕಂತೆ ವಿಭಿನ್ನ ಅಸ್ತಿತ್ವವನ್ನು ಪಡೆದುಕೊಂಡು ಜೀವಿಸುತ್ತಿದ್ದಾರೆ. ಅಂತಹವುಗಳನ್ನು ವರ್ತಮಾನದ ಆರ್ಥಿಕ ಚಟುವಟಿಕೆಗಳ ಸ್ಥಿತಿಗತಿಯನ್ನು ಬದಲಾವಣೆಯ ಮುಖಾಂತರ ಗುರುತಿಸಬಹುದಾಗಿದೆ. ಹೀಗೆ ಬದಲಾವಣೆಯೊಂದಿಗೆ ಪಾರಂಪರಿಕ ಉತ್ಪಾದನಾ ವಿಧಾನ, ಜೀವನಕ್ರಮ ಎಷ್ಟರ ಮಟ್ಟಿಗೆ ಬದಲಾವಣೆಗೊಂಡಿವೆ ಎನ್ನುವುದರ ಜೊತೆಗೆ, ಎಷ್ಟರ ಮಟ್ಟಿಗೆ ಸಮಯದಾಯ ಬದಲಾಗುತ್ತಿರುವ ಪರಿಸ್ಥಿತಿಯೊಂದಿಗೆ ಹೊಂದಿಕೊಂಡು ತನ್ನ ಆರ್ಥಿಕ ಸ್ಥಿತಿಯನ್ನು ಉತ್ತಮ ಪಡಿಸಿಕೊಂಡಿದೆ ಎನ್ನುವುದು ಮುಖ್ಯ. ಇದು ಜಾಗತೀಕರಣದ ಸಂದರ್ಭದಲ್ಲಿನ ಹಕ್ಕಿಪಿಕ್ಕಿಯರ ಆರ್ಥಿಕ ಚಟುವಟಿಕೆಗಳನ್ನು ಕುರಿತ ಅಧ್ಯಯನವೆಂದು ಹೇಳಬಹುದು. ಪರಿಸರದ ಜೊತೆಗಿನ ಸಂಬಂಧದೊಂದಿಗೆ ಸುತ್ತಲ ಸಮಾಜದೊಂದಿಗೆ ಬೆರೆತು ಅಲೆಮಾರಿ ಬದುಕಿನ ಅತಂತ್ರ ಸ್ಥಿತಿಯನ್ನು ಬಿಟ್ಟು ಜೀವಿಸುತ್ತಿರುವ ಸಮುದಾಯದ ಬದುಕಿನ ರೀತಿಯ ಆರ್ಥಿಕ ವ್ಯವಸ್ಥೆಯನ್ನು ವಿವರಿಸಲು ಇಲ್ಲಿ ಪ್ರಯತ್ನಿಸಲಾಗಿದೆ.

ಸಮಯದಾಯಕ್ಕೆ ವಿಶೇಷವಾಗಿ ಅದರದೇ ಆದ ಉತ್ಪಾದನಾ ವಿಧಾನವಿದೆ. ಸಮುದಾಯದ ಬೆಳವಣಿಗೆಯಲ್ಲಿ ಅವರುಗಳ ದೈಹಿಕ ಶ್ರಮ, ವಿವೇಚನಾಶಕ್ತಿ, ಕೌಶಲ್ಯ, ತಾಂತ್ರಿಕ ಪರಿಣತಿಗಳು ಮುಖ್ಯ ಕಾರಣವಾಗಿವೆ. ಇದು ಇಂದು ಹಂತ ಹಂತದ ಬೆಳವಣಿಗೆಯನ್ನು ಹೊಂದುತ್ತಿರುವುದು ಕಾಣಬಹುದು. ಅಭಿವೃದ್ಧಿಯ ಆವಿಷ್ಕಾರಗಳು ಹೆಚ್ಚುತ್ತಾ ಬಂದಂತೆ, ಜೀವಿಸುವ ಸಮುಯದಾಯದ ಜೀವನ ವಿಧಾನವೂ ಬದಲಾಗುತ್ತಾ ಬಂದಿದೆ. ಈ ಎಲ್ಲಾ ಬದಲಾವಣೆಗಳು ಅವರು ಜೀವಿಸುವ ವಿವಿಧ ಹೊಸ ಆಯಾಮಗಳನ್ನು ತೋರಿಸುತ್ತದೆ. ಹೀಗೆ ಅಲೆಮಾರಿಯಾದ ಹಕ್ಕಿಪಿಕ್ಕಿಯರು ಸ್ಥಿರವಾದ ನೆಲೆಯನ್ನು ಕಂಡರೂ ಸಹ ಅಲೆಮಾರಿತನವನ್ನು ಪೂರ್ತಿಯಾಗಿ ಬಿಟ್ಟುಕೊಡದೆ ಜೀವಿಸುತ್ತಿದ್ದಾರೆ. ಇಂತಹ ಸಂದರ್ಭದಲ್ಲಿ ನಾಗರಿಕ ಸಮಾಜವು ಇವರುಗಳನ್ನು ಶೋಷಿಸುತ್ತಿರುವುದು ಗಮನಿಸಬಹುದಾದ ವಿಷಯವಾಗಿದೆ.

ಸರಕಾರದ ಅಭಿವೃದ್ಧಿ ಕಾರ್ಯಕ್ರಮಗಳ ಮೂಲಕ ಹಕ್ಕಿಪಿಕ್ಕಿಯರು ಸ್ಥಿರ ಜೀವನದ ಆಸೆಯನ್ನು ಹೊಂದಿದ್ದಾರೆ. ಸರಕಾರದ ಆಲೋಚನೆಗಳು ಸಹ ಅಷ್ಟೇ, ಸ್ಥಿರತೆಯನ್ನು ಕಾಪಾಡಿಕೊಂಡು ಬಂದರೆ

ಅಭಿವೃದ್ಧಿಯಾದಂತೆ ಎಂದು ನಂಬಿದ್ದಾರೆ. ಹೀಗಾಗಿ ಮಾನವಾಭಿದ್ಧಿಯಲ್ಲಿ ಇನ್ನು ಬಡತನದ ಹಾದಿಯಲ್ಲಿಯೆ ಸಮುದಾಯ ಜೀವಿಸುತ್ತಿದೆ. ಇಂದು ಏನೆಲ್ಲಾ ಸಮಸ್ಯೆಗಳ ರಾಶಿಯಲ್ಲಿ ಇದೆಯೋ ಇದಕ್ಕೆ ಆಳುವ ವರ್ಗಗಳ ವ್ಯವಸ್ಥೆಯೇ ಮುಖ್ಯ ಕಾರಣವಾಗಿದೆ.

ಸಮುದಾಯದ ಆರ್ಥಿಕ ಸ್ಥಿತಿಗತಿಯ ಆಧಾರದ ಮೇಲೆ ಅವರ ಸಾಮಾಜಿಕ ವ್ಯವಸ್ಥೆಯು ಬದಲಾಗುತ್ತಿರುತ್ತದೆ. ಹೀಗೆ ಜೀವನ ವಿಧಾನದಲ್ಲಿ ಪರಿಸರ ಪ್ರಭಾವ ಮುಖ್ಯ ಪಾತ್ರವಹಿಸುತ್ತದೆ. ಭೌಗೋಳಿಕ ಲಕ್ಷಣಗಳು, ಮೂಲಭೂತ ಸೌಲಭ್ಯಗಳು ಸಮುದಾಯದ ಜೀವನ ವಿಧಾನವನ್ನು ರೂಪಿಸುತ್ತವೆ. ಹೀಗಾಗಿ ಇಂತಹ ವ್ಯವಸ್ಥೆಯಲ್ಲಿ ಪಕ್ಕಿಪಿಕ್ಕಿಯರು ಅಲೆಮಾರಿತನ ಬಿಟ್ಟು ಕೊಡದೆ, ಪೂರ್ತಿ ಅಲೆಮಾರಿಯೂ ಅಲ್ಲದೆ, ತನ್ನ ಪರಿಸರದಂತೆ ಸಾಮಾಜಿಕ ವ್ಯವಸ್ಥೆಯನ್ನು ರೂಪಿಸಿಕೊಂಡಿದ್ದಾರೆ. ಈ ಎಲ್ಲಾ ಸನ್ನಿವೇಶಗಳ ಕೇಂದ್ರ ಬಿಂದುವಾದ ಆರ್ಥಿಕ ವ್ಯವಸ್ಥೆಯು ಸಮುದಾಯದ ಬೆಳವಣಿಗೆಯ ದಾರಿಯನ್ನು ತೋರಿಸುವಂತಹ ಕೆಲಸ ನಿರ್ವಹಿಸುತ್ತಿರುವ ಪ್ರಸ್ತುತತೆಯು ಅಭ್ಯಾಸ ಯೋಗ್ಯವಾಗಿದೆ. ಇಂದಿನ ಬದಲಾವಣೆಯಲ್ಲಿ ಸಮುದಾಯದ ಜೀವನ ವಿಧಾನದಲ್ಲಿ ಹಲವಾರು ಸಮಸ್ಯೆಗಳನ್ನು ಗಮನದಲ್ಲಿಟ್ಟುಕೊಂಡು ಆ ಸಮುದಾಯದ ಮೂಲಭೂತ ಅವಶ್ಯಕತೆಗಳು ಎಷ್ಟರ ಮಟ್ಟಿಗೆ ದೊರೆತಿವೆ? ಎನ್ನುವುದರಿಂದ ಹಿಡಿದು ಅವರುಗಳ ಬದಲಾವಣೆಯ ವೇಗವನ್ನು ಗುರ್ತಿಸಬೇಕಾಗಿದೆ. ಆದ್ದರಿಂದ ಬದಲಾಗುತ್ತಿರುವ ಇಂದಿನ ಪರಿಸ್ಥಿತಿಯಲ್ಲಿ ಮಾನವನ ಬೆಳವಣಿಗೆಗಳು ಹೆಚ್ಚು ಹೆಚ್ಚು ಸಂಕೀರ್ಣವಾಗುತ್ತಿವೆ. ಹೀಗಾಗಿ ಪ್ರಸ್ತುತ ಬುಡಕಟ್ಟು ಸಮುದಾಯವಾದ ಹಕ್ಕಿಪಿಕ್ಕಿಯರು ಜೀವಿಸುತ್ತಿರುವ ಪದ್ಧತಿಯು ಒಟ್ಟಾರೆ ಉತ್ಪಾದನಾ ವಿಧಾನ, ಆರ್ಥಿಕತೆ, ಅನುಭೋಗವನ್ನು ಪ್ರತಿನಿಧಿಸುತ್ತಿರುತ್ತದೆ. ಈ ಎಲ್ಲಾ ವಿಧಾನಗಳು ಬದಲಾದ ಸಮಾಜದೊಂದಿಗ ಸಹಭಾಗಿಯಾಗಿ ನಡೆಯಬೇಕಾದ ಅವಶ್ಯಕತೆ ಇಂದು ಬಹಳಷ್ಟಿದೆ. ಹೀಗಾಗಿ ಆರ್ಥಿಕಾಭಿವೃದ್ಧಿಯು ಮನುಷ್ಯನ ಸ್ವಪ್ರಯತ್ನದಿಂದ ಆಗಬೇಕಾದ ಕ್ರಿಯೆಯಾಗಿದ್ದು, ಇದರಿಂದ ವಿವಿಧ ಉದ್ಯೋಗಗಳಲ್ಲಿ ತೊಡಗಿಸಿಕೊಳ್ಳುವುದು ಮುಖ್ಯವಾಗಿದೆ. ಇಂತಹ ಉದ್ಯೋಗಗಳು ಪ್ರಸ್ತುತ ಎಷ್ಟರ ಮಟ್ಟಿಗೆ ಉಪಯುಕ್ತವಾಗಿವೆ ಎನ್ನುವ ಹಲವು ಪ್ರಶ್ನೆಗಳನ್ನು ಇಲ್ಲಿ ಕೇಳಿಕೊಳ್ಳಲಾಗಿದೆ.

## ಅಧ್ಯಯನದ ಉದ್ದೇಶ

*'ಪ್ರಾಯಶಃ ಬುಡಕಟ್ಟು ಸಮುದಾಯಗಳಿಗಿರುವ ಅತಿದೊಡ್ಡ ಅಪಾಯ ಸಂಸ್ಕೃತಿಯ ವಿನಾಶವಲ್ಲ, ಆರ್ಥಿಕ ಶೋಷಣೆ'.*

❖ *ಗಾಂಧೀಜಿ*

ಬದಲಾಗುತ್ತಿರುವ ಮಾನವನ ಜೀನವದಲ್ಲಿ ಆರ್ಥಿಕ ವ್ಯವಸ್ಥೆಯು ಪ್ರಾಣವಾಯುವಿದ್ದ ಹಾಗೆ. ಜೀವನ ವಿಧಾನದಲ್ಲಿ ಹೋರಾಟ ನಡೆಸುತ್ತಲೇ ಬಂದಿರುವ ಸಮುದಾಯವಾದ ಹಕ್ಕಿಪಿಕ್ಕಿಯರ ಸಾಮಾಜಿಕ ಆರ್ಥಿಕ ಪ್ರಗತಿಯನ್ನು ಇಂದು ಗುರುತಿಸಬೇಕಾಗಿದೆ. ಅಭಿವೃದ್ಧಿಯ ಹೆಸರಿನಲ್ಲಿ ಸರಕಾರ ರೂಪಿಸಿದ ನೀತಿಗಳು, ಅರಣ್ಯ ಕಾಯಿದೆಗಳು, ಸಮುದಾಯದ ಸಂಸ್ಕೃತಿಯ ನಾಶದ ಕಡೆಗೆ ತಳ್ಳುತ್ತಿವೆ. ಅಭಿವೃದ್ಧಿಯ

ಹೆಸರಿನಲ್ಲಿ ಬಹು ಹಿಂದಿನಿಂದಲೂ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ ಶೋಷಣೆಗಳು ನಡೆಯುತ್ತಾ ಬಂದಿವೆ.

ಇಂದಿನ ತೀವ್ರಗತಿಯ ಆಧುನಿಕರಣದ ಮತ್ತು ಕೈಗಾರಿಕರಣದ ಫಲವಾಗಿ, ಅರಣ್ಯ ನಾಶ ಮಾಡುತ್ತಾ ಪ್ರಕೃತಿಯ ಮಡಿಲಲ್ಲಿ ಸ್ವಚ್ಛಂದವಾಗಿ ಜೀವನ ನಡೆಸುತ್ತಿದ್ದ ಸಮುದಾಯದ ಜನರ ಜೀವನೋಪಾಯಕ್ಕೆ ಅಪಾಯ ಬಂದಿದೆ. ಸಮುದಾಯಗಳು ಅರಣ್ಯನಾಶದಿಂದ ನಗರ ಮತ್ತು ಹಳ್ಳಿಗಳಲ್ಲಿ ಅಲೆಮಾರಿ ಜೀವನ ನಡೆಸುತ್ತಿರುವ ಪ್ರಸಂಗ ಬಂದಿದೆ. ಪ್ರಕೃತಿಯ ಮಡಿಲಲ್ಲಿ ಸರಳ ಜೀವನ ಕಂಡ ಹಕ್ಕಿಪಿಕ್ಕಿಯರು ರೂಪಿಸಿಕೊಂಡ ಉದ್ಯೋಗಗಳು ಸಾಕಷ್ಟು ಬದಲಾವಣೆಗೊಂಡಿದ್ದರೂ ಮೂಲ ವೃತ್ತಿಯಾದ ವ್ಯಾಪಾರವನ್ನು ತೊರೆಯದೆ ಜೀವಿಸುತ್ತಿದ್ದಾರೆ.

ಮೂಲತಃ ಹಕ್ಕಿಪಿಕ್ಕಿಯರು ವಲಸೆ ಪ್ರವೃತ್ತಿಯಿಂದ ಬೆಳೆದು ಬಂದ ಸಮುದಾಯ. ತಮ್ಮ ವ್ಯಾಪಾರದ ದೃಷ್ಟಿಯಿಂದ ದೂರದ ಪ್ರದೇಶಗಳಿಗೆ ಹೋಗಿ ವ್ಯಾಪಾರ ಮಾಡುವ ಪ್ರವೃತ್ತಿಯುಳ್ಳವರಾಗಿದ್ದಾರೆ. ಈ ಜನರು ನಗರ ಮತ್ತು ಹಳ್ಳಿಗಳ ಜನರಿಂದ ದೂರವೇ ಉಳಿಯುವಂತಹ ಜನರಾಗಿದ್ದರು. ಗಿರಿಜನ ಅಭಿವೃದ್ಧಿ ಯೋಜನೆ ಮತ್ತು ಪುನರ್ವಸತಿ ಯೋಜನೆಯ ಅನ್ವಯ ನೆಲೆ ನಿಂತಿರುವುದು ಪ್ರತ್ಯೇಕವಾದ ಕಾಲೋನಿಯಲ್ಲಿ. ಹೀಗಾಗಿ ಈ ಜನರು ೩೫೦ ಎಕರೆ ಭೂಮಿಯಲ್ಲಿ ಕೃಷಿಕರನ್ನಾಗಿ ಮಾಡಿದಾಗ ಅವರ ಆರ್ಥಿಕ ಸ್ಥಿತಿಗತಿ, ಸಂಪ್ರದಾಯ, ಪಾರಂಪರಿಕ ಉತ್ಪಾದನಾ ವಿಧಾನ, ಬದಲಾಗುತ್ತಿರುವ ಸಮಾಜದಲ್ಲಿ ಆಧುನೀಕರಣದ ಪ್ರಭಾವಕ್ಕೆ ಸಿಕ್ಕಿ ತನ್ನ ಉಳಿವಿಗಾಗಿ ನಡೆಸುತ್ತಿರುವ ಪ್ರಯತ್ನಗಳು ಇಲ್ಲಿನ ಚರ್ಚೆಗೆ ಗ್ರಾಸವಾಗಿವೆ.

ಪ್ರಸ್ತುತ ಅಧ್ಯಯನದ ಉದ್ದೇಶ ಬದಲಾಗುತ್ತಿರುವ ಸಮಾಜದಲ್ಲಿ ಹಕ್ಕಿಪಿಕ್ಕಿ ಸಮುದಾಯ ತಾನು ರೂಪಿಸಿಕೊಂಡ ಆರ್ಥಿಕ ಚಟುವಟಿಕೆಗಳಿಂದ ಸುತ್ತಲ ಸಮುದಾಯಗಳೊಂದಿಗೆ ಹೊಂದಿರುವ ಸಂಬಂಧ ಹಾಗು ಆದಾಯ ಮತ್ತು ಅನುಭೋಗವನ್ನು ಕುರಿತ ಅಧ್ಯಯನವಾಗಿದೆ.

ಆಧುನಿಕರಣದ ಮತ್ತು ಔದ್ಯೋಗಿಕರಣದ ಸಂದರ್ಭದಲ್ಲಿ ನಗರಗಳು ಹೆಚ್ಚು ಬೆಳವಣಿಯನ್ನು ಹೊಂದುತ್ತಿದ್ದು, ನಗರದ ಸುತ್ತಲಿನ ಭೂ ಪ್ರದೇಶಕ್ಕೆ ಹೆಚ್ಚಿನ ಬೇಡಿಕೆ ಇದೆ. ಹೀಗಾಗಿ ನಗರದಿಂದ ಸ್ವಲ್ಪವೇ ದೂರದಲ್ಲಿರುವ ಹಕ್ಕಿಪಿಕ್ಕಿಯರ ಭೂಮಿಯ ಮೇಲೆ ಎಲ್ಲರ ಕಣ್ಣು. ಇಂತಹ ಪರಿಸ್ಥಿತಿಯಲ್ಲಿ ಕಾಲೋನಿಯ ಜನರಿಗೆ ಯಾವುದೇ ಮೂಲಭೂತ ಸೌಲಭ್ಯಗಳು ದೊರೆಯದಂತೆ ಮಾಡಿ, ಆ ಪ್ರದೇಶದಿಂದ ಬೇರೆ ಕಡೆಗೆ ಕಳುಹಿಸುವ ಹಲವು ಗುಮಾನಿಗಳು ನಗರದಲ್ಲಿ ಹೆಚ್ಚುತ್ತಿರುವುದರಿಂದ ನೊಂದ ಹಕ್ಕಿಪಿಕ್ಕಿಯರು ಸಮಸ್ಯೆಗಳ ಜೊತೆಯಲ್ಲಿ ಬದುಕುತ್ತಿದ್ದಾರೆ. ಆದ್ದರಿಂದ ಕಾಲೋನಿಯ ಮೂಲಭೂತ ಸೌಲಭ್ಯಗಳಿಂದ ಹಿಡಿದು ಸಮುದಾಯದ ಚಾರಿತ್ರಿಕ ಬೆಳವಣಿಗೆಯನ್ನು ಗುರುತಿಸುವುದು ಮಹತ್ವದ ಸಂಗತಿಯೆಂದು ಭಾವಿಸಲಾಗಿದೆ. ಬದುಕಿನ ಹೋರಾಟದಲ್ಲಿ ಸ್ವಾತಂತ್ರ ನಂತರ ಸ್ಥಿತ್ಯಂತರಗಳು, ಭೂಮಿ, ಅರಣ್ಯ, ವ್ಯವಸಾಯ, ಭೂಹಿಡುವಳಿಯಿಂದ ದೊರೆಯುವ ಆದಾಯ ಮತ್ತು ವೆಚ್ಚಗಳು

ಸಮುದಾಯದ ಜನರನ್ನು ವರ್ತಮಾನದಲ್ಲಿ ಬದುಕಲು ಪ್ರೇರೇಪಿಸುವಂತ ನೀತಿಗಳನ್ನು ತಿಳಿಯುವುದು ಅಗತ್ಯವಾಗಿದೆ.

ಸಮುದಾಯ ಹೊಂದಿರುವ ಆರ್ಥಿಕ ಚಟುವಟಿಕೆಗಳು, ಮಾನವನ ಶ್ರಮ ಸಂಪತ್ತಿನ ಬಳಕೆ, ಸಂಪನ್ಮೂಲಗಳ ಪಾತ್ರ, ಜನಸಂಖ್ಯೆ, ಶಿಕ್ಷಣದ ಪಾತ್ರ, ಪ್ರಭಾವ ಕೌಟುಂಬಿಕ ಜೀವನದಲ್ಲಿನ ಅವರ್ತಗಳು, ಉದ್ಯೋಗಗಳ, ಹಂಚಿಕೆಯಿಂದ ಬದಲಾಗುತ್ತಿರುವ ಸಮಾಜದಲ್ಲಿ ನಿರ್ಮಿಸಿಕೊಂಡಿರುವ ರೀತಿ ತಿಳಿಯುವುದು. ಹೀಗೆ ಸಮುದಾಯದ ಜೀವನ ವಿಧಾನದಲ್ಲಿ ಆರ್ಥಿಕ ವ್ಯವಸ್ಥೆ ತುಂಬಾ ಮಹತ್ವದ ಪಾತ್ರ ವಹಿಸುತ್ತದೆ. ಈ ಎಲ್ಲಾ ಬದಲಾಣೆಗಳಿಂದ ಸಾಂಸ್ಕೃತಿಕ ಅಂಗಗಳಾದ, ಸಾಮಾಜಿಕ, ರಾಜಕೀಯ, ಧಾರ್ಮಿಕ, ರೀತಿನೀತಿಗಳಲ್ಲಿನ ಬದಲಾವಣೆಯು ಆರ್ಥಿಕ ವ್ಯವಸ್ಥೆಯ ಆಧಾರದ ಮೇಲೆ ಭದ್ರವಾದ ಬುನಾದಿಯನ್ನು ಹಾಕಿರುತ್ತದೆ. ಹೀಗಾಗಿ ಸಮುದಾಯದ ಆರ್ಥಿಕ ಸಂರಚನೆಯನ್ನು ಕುರಿತ ಕ್ಷೇತ್ರಧಾರಿತವಾದ ಮಾಹಿತಿಯನ್ನು ಕಲೆಹಾಕುವುದು. ಅನ್ಯ ಸಂಸ್ಕೃತಿಯ ಜೊತೆ ರೂಪಿಸಿಕೊಂಡ ಉದ್ಯೋಗಗಳನ್ನು ಸುತ್ತಲಿನ ಸಮುದಾಯಗಳ ಜೊತೆಗೆ ಗುರ್ತಿಸಿಕೊಂಡ ರೀತಿಯಿಂದ ದೊರೆಯುತ್ತಿರುವ ಸೌಲಭ್ಯಗಳು, ಅನುಕೂಲಗಳು, ಆರ್ಥಿಕತೆಯನ್ನು ಪ್ರತಿನಿಧಿಸುತ್ತಿರುವುದು ತಿಳಿಯಬೇಕಾಗಿದೆ.

ಬುಡಕಟ್ಟು ಸಮುದಾಯದ ಅರ್ಥವ್ಯವಸ್ಥೆಯ ಮಾನದಂಡಗಳನ್ನು ಸಂಶೋಧಿಸುವುದು, ವಿಚಾರಮಾಡುವುದು ಹೊಸದಾದ ವಿಚಾರ ಪ್ರಣಾಳಿಕೆಗಳಾಗಿವೆ. ಇದುವರೆಗೂ ಬುಡಕಟ್ಟು ಸಮುದಾಯಗಳ ಅರ್ಥವ್ಯವಸ್ಥೆಯನ್ನು ಕುರಿತ ಪ್ರತ್ಯೇಕ ಅಧ್ಯಯನ ಸಾಕಷ್ಟು ಕಂಡು ಬರದೆ ಇರುವುದು, ಈ ಅಧ್ಯಯನಕ್ಕೆ ಹೆಚ್ಚಿನ ಮಹತ್ವವಿದೆ. ಹಾಗೆಯೇ ಬದಲಾದ ಸಮಾಜದಲ್ಲಿ ಇಂತಹ ಸಮುದಾಯದ ಆರ್ಥಿಕ ಚಟುವಟಿಕೆಗಳ ಅಧ್ಯಯನ ಇಂದು ಬಹಳಷ್ಟು ಉಪಯುಕ್ತ ಎಂದು ಭಾವಿಸಲಾಗಿದೆ.

## ಮಹತ್ವ

ಸಾಮಾನ್ಯವಾಗಿ ಆರ್ಥಿಕ ವ್ಯವಸ್ಥೆಯು ಒಂದು ಜನ ಸಮೂಹದ ಸ್ಥಾನ ಮಾನ ನಿರ್ಧರಿಸುತ್ತದೆ. ಯಾವ ಸಮುದಾಯದ ಆರ್ಥಿಕ ಸ್ಥಿತಿಯು ಉತ್ತಮವಾಗಿರುತ್ತದೆಯೋ ಆ ಸಮುದಾಯ ಆಧುನಿಕರಣಗೊಂಡು ಬದಲಾಗುತ್ತಿರುವ ಸಮಾಜದೊಂದಿಗೆ ಬೆಳೆದು ಬರುತ್ತಿರುತ್ತದೆ. ಇಂಥ ಆರ್ಥಿಕ ವ್ಯವಸ್ಥೆಯನ್ನು ನಿರ್ಧರಿಸುವ ಅಂಶಗಳಲ್ಲಿ ಉತ್ಪಾದನೆ ಮುಖ್ಯವಾದದ್ದು. ಉತ್ಪಾದನೆಯ ವಿವಿಧ ಅಂಗಗಳಾದ ವೃತ್ತಿಗಳು ಇಂದು ಹಕ್ಕಿಪಿಕ್ಕಿಯರಲ್ಲಿ ಜೀವಿಸುವ ಭರವಸೆಯನ್ನು ಹುಟ್ಟಿಸಿವೆ. ಮಾಯವಾದ ಪಾರಂಪರಿಕ ಉತ್ಪಾದನಾ ವಿಧಾನಗಳು, ಆಧುನಿಕರಣದ ಜೊತೆಗಿನ ಸಂಬಂಧ ಬೆಸೆದುಕೊಂಡು ರೂಪಿಸಿಕೊಂಡ ಉತ್ಪಾದನಾ ಮಾರ್ಗಗಳು ಹೊಸವಿಧವಾದ ಸಾಮಾಜಿಕ ಆರ್ಥಿಕ ಸಂಬಂಧವನ್ನು ಬೆಸೆದಿವೆ.

ಅಲೆಮಾರಿಗಳಾದ ಹಕ್ಕಿಪಿಕ್ಕಿಯರು ಬೆಂಗಳೂರು ನಗರದ ಸಮೀಪದಲ್ಲಿ ವಾಸಿಸುತ್ತಿದ್ದು, ಬದಲಾದ ಪರಿಸ್ಥಿತಿಯಲ್ಲಿ ಕಾಲೋನಿಯ ಜನರು ರೂಢಿಸಿಕೊಂಡ ಆರ್ಥಿಕ ಚಟುವಟಿಕೆಗಳು ಯಾವ ರೀತಿಯ

ಬೆಳವಣಿಗೆಗೆ ಸಾಧ್ಯವಾಗಿದೆ. ಮತ್ತು ನಗರದ ಪ್ರಭಾವದಿಂದ ಕುಟುಂಬದ ಪ್ರತಿಯೊಬ್ಬ ಸದಸ್ಯರ ಪಾತ್ರವನ್ನು ಅಧ್ಯಯನಿಸುವುದು ಅಗತ್ಯವಾಗಿದೆ.

ಬದಲಾಗುತ್ತಿರುವ ಸಮಾಜದಲ್ಲಿ ಬುಡಕಟ್ಟು ಸಮುದಾಯಗಳ ಆದಿಮ ಸಂಸ್ಕೃತಿ, ಸಂಪ್ರದಾಯ, ಕಲೆಗಳು ಎಷ್ಟರ ಮಟ್ಟಿಗೆ ಸಮುದಾಯಗಳಲ್ಲಿ ಉಳಿದಿವೆ? ಸಮುದಾಯದ ಆರ್ಥಿಕ ಸ್ಥಿತಿಗತಿಯ ಬದಲಾವಣೆಯೊಂದಿಗೆ ಪಾರಂಪರಿಕ ಉತ್ಪಾದನೆ, ಸಂಪ್ರದಾಯ, ಸಾಂಸ್ಕೃತಿಕ ಸಾಮಾಜಿಕ ಜೀವನವನ್ನು ನೋಡಬೇಕಾದದ್ದು ಅವಶ್ಯವಾಗಿದೆ. ಹೀಗಾಗಿ ನಗರದ ಸಮೀಪದಲ್ಲಿಯೇ ಇರುವ ಸಮುದಾಯ ಜಾಗತೀಕರಣದ ಸಂದರ್ಭದಲ್ಲಿ ನಗರವನ್ನು ಅವಲಂಬಿಸಿ ದುಡಿಯುತ್ತಿರುವ ಜನರ ಜೀವನ ವಿಧಾನದಲ್ಲಿನ ಪ್ರಮುಖವಾದ ಬದಲಾವಣೆಯನ್ನು ಗುರುತಿಸಬೇಕಾಗಿದೆ.

ಹಕ್ಕಿಪಿಕ್ಕಿ ಸಮುದಾಯದ ಆರ್ಥಿಕ ಸ್ಥಿತಿಯನ್ನು ಬದಲಾಗುತ್ತಿರುವ ಸಮಾಜದಲ್ಲಿ ಅಧ್ಯಯನಿಸುವ ಬಹು ಮುಖ್ಯವಾದ ಕಾರಣವೇ ಬಹು ಶಿಸ್ತೀಯವಾದದ್ದು. ಇಂತಹ ಅಧ್ಯಯನಗಳಿಂದ ಕೆಲವು ಮಹತ್ವದ ಅಂಶಗಳು ಹೊರಬರುತ್ತವೆ. ಹೀಗಾಗಿ ಹಕ್ಕಿಪಿಕ್ಕಿ ಸಮುದಾಯದ ಒಂದು ಕಾಲೋನಿ, ಅಂದರೆ ಅರಣ್ಯದಲ್ಲಿರುವ ಕಾಲೋನಿಯಾದದ್ದರಿಂದ ಕಾಲೋನಿಯು ಮಹತ್ವ ಹೆಚ್ಚಿನ ರೀತಿಯಲ್ಲಿ ಅಧ್ಯಯನಕ್ಕೆ ಸಹಾಯಕವಾಗಲಿದೆ. ಆದ್ದರಿಂದ ಕಾಲೋನಿಯಲ್ಲಿ ಒಟ್ಟಾರೆ ಜೀವಿಸುತ್ತಿರುವ ಹಕ್ಕಿಪಿಕ್ಕಿಯರ ಜೀವನ ವಿಧಾನವೇ ಮುಖ್ಯವಾಗಿರುವುದರಿಂದ ಅರ್ಥವ್ಯವಸ್ಥೆಯ ರೂಪು ರೇಷೆಗಳು ಅತಿ ಮುಖ್ಯವಾಗಿವೆ. ಇದು ಕೈಗಾರಿಕಾ ಬೆಳವಣಿಗೆ ಹಂತದಲ್ಲಿರುವ, ಬೆಂಗಳೂರು ನಗರದ ವಿಸ್ತರಣೆಯು ನಡೆಯುತ್ತಿರುವ ಸಂದರ್ಭದಲ್ಲಿ ಭೂಮಿಯನ್ನು ಹೊಂದಿರುವ ಹಕ್ಕಿಪಿಕ್ಕಿಯರ ವ್ಯವಸಾಯಗಳ ಸಮಸ್ಯೆಗಳೊಂದಿಗೆ ಚರ್ಚಿಸುವುದರಿಂದ ಅಧ್ಯಯನವು ಹೆಚ್ಚಿನ ಮಹತ್ವ ಪಡೆಯುತ್ತದೆ.

ಇದುವರೆಗೂ ಕರ್ನಾಟಕದಲ್ಲಿ ಒಟ್ಟು ಬುಡಕಟ್ಟು ಸಮುದಾಯಗಳ ಆರ್ಥಿಕ ವ್ಯವಸ್ಥೆಯ ಮೂಲ ರೂಪ, ಮೂಲಾಂಶಗಳ ಬಗ್ಗೆ ಪ್ರತ್ಯೇಕ ಅಧ್ಯಯನಗಳು ಹಾಗು ಬರವಣಿಗೆಗಳು ಬಹಳಷ್ಟು ಕಡಿಮೆ ಇರುವುದರಿಂದ, ಸಮುದಾಯದ ಆರ್ಥಿಕ ಕ್ಷೇತ್ರವನ್ನು ತಾತ್ವಿಕವಾಗಿ ಪರಿಚಯ ಮಾಡುವ ಅಧ್ಯಯನಗಳು ಇಲ್ಲವಾಗಿವೆ. ಆದ್ದರಿಂದ ಹಕ್ಕಿಪಿಕ್ಕಿಯರ ಆರ್ಥಿಕ ವ್ಯವಸ್ಥೆಯನ್ನು ಬದಲಾಗುತ್ತಿರುವ ಸಮಾಜದಲ್ಲಿ ಗುರ್ತಿಸಬೇಕಾದ ಅಗತ್ಯ ಹೆಚ್ಚಿಗೆ ಇರುವುದರಿಂದ ಹಾಗು ಸಮುದಾಯಗಳ ಕುರಿತು ಆರ್ಥಿಕ ವ್ಯವಸ್ಥೆಯ ಅಧ್ಯಯನಗಳು ಇಲ್ಲದಿರುವುದು ಅಧ್ಯಯನದ ಮಹತ್ವವನ್ನು ಹೆಚ್ಚುವಂತೆ ಮಾಡಿದೆ.

## ವ್ಯಾಪ್ತಿ

ಅರ್ಥಶಾಸ್ತ್ರೀಯ ಅಧ್ಯಯನದ ವಿವಿಧ ಆಯಾಮಗಳಲ್ಲಿ ಉದ್ಯೋಗ, ಕಸಬು, ಉಪವೃತ್ತಿಗಳು ಜೀವನ ವಿಧಾನ ಎಲ್ಲವೂ ಸೇರಿಕೊಳ್ಳುತ್ತವೆ. ಇಲ್ಲಿ ಹಕ್ಕಿಪಿಕ್ಕಿಯರ ಉತ್ಪಾದನಾ ವಿಧಾನದಿಂದ ಬದಲಾಗುತ್ತಿರುವ ಸಮಾಜದೊಂದಿಗೆ ತನ್ನ ಅರ್ಥ ವ್ಯವಸ್ಥೆಯನ್ನು ಹೇಗೆ ರೂಢಿಸಿಕೊಂಡಿದೆ ಎನ್ನುವುದೆ

ಪ್ರಧಾನವಾಗಿದೆ. ಹಾಗೆಯೇ ಅರ್ಥವ್ಯವಸ್ಥೆಯ ವಿವಿಧ ರೂಪಗಳಾದ ಉತ್ಪಾದನೆ, ಅನುಭೋಗ, ಆದಾಯ ಇವುಗಳನ್ನು ಪಾರಂಪರಿಕ ನೆಲೆಯಿಂದ ಪ್ರಸ್ತುತದ ಸ್ಥಿತಿಯಲ್ಲಿನ ಬೆಳವಣಿಗೆಯೊಂದಿಗೆ ಗುರುತಿಸುವುದಾಗಿದೆ.

ಹಕ್ಕಿಪಿಕ್ಕಿಯರು ಕರ್ನಾಟಕದಾದ್ಯಂತ ವ್ಯಾಪಿಸಿಕೊಂಡಿದ್ದಾರೆ, ಪ್ರಮುಖವಾಗಿ ಈ ಸಮುದಾಯ ಅಲೆಮಾರಿಯಾಗಿದ್ದು ಇತ್ತೀಚಿನ ದಿನಗಳಲ್ಲಿ ಅಲ್ಲಲ್ಲಿ ಸ್ಥಿರವಾದ ನೆಲೆಯನ್ನು ಕಂಡಿದ್ದಾರೆ. ಸರಕಾರವು ೧೯೬೨ ರಲ್ಲಿ ನೆಲೆಸಿರುವ ಸ್ಥಳಗಳಲ್ಲಿ ವಿಶೇಷವಾಗಿ ಸವಲತ್ತುಗಳನ್ನು ಹಾಗು ದರ್ಕಾಸ್ತು ಭೂಮಿಯನ್ನು ಹಂಚಿಕೆ ಮಾಡಿದ ನಂತರ ಆ ಸ್ಥಳಗಳಲ್ಲಿಯೇ ಸ್ಥಿರವಾಗಿ ನೆಲೆ ನಿಂತಿದ್ದಾರೆ. ಅವುಗಳೆಂದರೆ ಮೈಸೂರು ಜಿಲ್ಲೆಯ ಹುಣಸೂರು. ಚಾಮರಾಜನಗರದ ತಾಳವಾಡಿ, ಕೆ.ಆರ್ .ಪೇಟೆಯ ಚಿನಕುರಳಿ ಹತ್ತಿರ, ಮಂಡ್ಯದ ಜಿಲ್ಲೆಯ ನಾಗಮಂಗಲ, ಶಿವಮೊಗ್ಗ ಜಿಲ್ಲೆಯ ಚೆನ್ನಗಿರಿ, ಗೋಪನಾಳು, ಬೆಂಗಳೂರು ಬನ್ನೇರುಘಟ್ಟ, ರಾಮನಗರ ಇತ್ಯಾದಿ ಸ್ಥಳಗಳಲ್ಲಿ ವಾಸವಾಗಿದ್ದಾರೆ. ನನ್ನ ಅಧ್ಯಯನ ದೃಷ್ಟಿಯಿಂದ ಬೆಂಗಳೂರಿನ ಬನ್ನೇರುಘಟ್ಟದ ಹಕ್ಕಿಪಿಕ್ಕಿ ಕಾಲೋನಿಯನ್ನು ಆಯ್ಕೆ ಮಾಡಿಕೊಂಡು ಇವರ ಆರ್ಥಿಕ ವ್ಯವಸ್ಥೆಯನ್ನು ಅಧ್ಯಯನ ಮಾಡುವುದಾಗಿದೆ.

ಕರ್ನಾಟಕದ ಎಲ್ಲಾ ಭಾಗಗಳಲ್ಲೂ ನೆಲೆನಿಂತ ಹಕ್ಕಿಪಿಕ್ಕಿಯರಿಗಿಂತ ಭಿನ್ನವೇ ಆದ ಬೆಂಗಳೂರಿನ ಬನ್ನೇರುಘಟ್ಟದ ಹಕ್ಕಿಪಿಕ್ಕಿಯರು ಬೆಂಗಳೂರಿನಂತಹ ದೊಡ್ಡ ನಗರದ ಸಮೀಪದಲ್ಲಿಯೇ ವಾಸವಾಗಿದ್ದರೂ ಭಿನ್ನವಾಗಿ ಕಂಡು ಬರುತ್ತಾರೆ. ಆದ್ದರಿಂದ ಈ ಅಧ್ಯಯನವು ವಿಶಿಷ್ಟವಾಗಿದೆ. ಭೂತನಾಪಳ್ಳಿ ಕಾಲೋನಿಯ ಹಕ್ಕಿಪಿಕ್ಕಿಯರು ಬದಲಾದ ಸಂದರ್ಭದಲ್ಲಿ ವಿವಿಧ ವೃತ್ತಿಗಳೊಂದಿಗೆ ಸ್ಪಂದಿಸುವ ರೀತಿಯನ್ನು ಕುರಿತು ಅಧ್ಯಯನಿಸುವುದಾಗಿದೆ.

ಈ ಹೊತ್ತಿನಲ್ಲಿ ಬದಲಾಗುತ್ತಿರುವ ಸಮಾಜದೊಂದಿಗೆ ತಮ್ಮ ಜೀವನವನ್ನು ರೂಪಿಸಿಕೊಂಡು ಜೀವಿಸುವ ಸೀಮಿತವಾದ ವಲಯಗಳಲ್ಲಿನ ಉತ್ಪಾದನೆಯನ್ನು ಗುರ್ತಿಸುವುದು ಅಧ್ಯಯನದ ವ್ಯಾಪ್ತಿಗೆ ಒಳಪಟ್ಟಿದೆ. ಹೀಗಾಗಿ ಈ ಅಧ್ಯಯವು ಎಂ.ಫಿಲ್ .ಪದವಿಯ ಅಧ್ಯಯನವಾಗಿರುವುದರಿಂದ ಸಮಯವು ಬಹಳ ಕಡಿಮೆ ಇದ್ದು ಕೆಲವೇ ತಿಂಗಳುಗಳಲ್ಲಿ ಅಧ್ಯಯನವನ್ನು ಕ್ಷೇತ್ರ ಕಾರ್ಯದೊಂದಿಗೆ ಮುಗಿಸಬೇಕಾಗಿದೆ. ಆದ್ದರಿಂದಲೇ ಒಂದು ಕಾಲೊನಿಯ ವಿಶಿಷ್ಠ ರೀತಿಯ ಅರ್ಥವ್ಯವಸ್ಥೆಯನ್ನು ಅಧ್ಯಯನಿಸುವ ಅಧ್ಯಯನವಾಗಿದೆ.

## ವಿಧಾನ

ಪ್ರಸ್ತುತ ಅಧ್ಯಯನವು ಸೈದ್ಧಾಂತಿಕ ನೆಲೆಯನ್ನಾಧರಿಸಿದ ನಿದರ್ಶನಾತ್ಮಕ (Empirical) ವಾದ ಅಧ್ಯಯನವಾಗಿದೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ವಿಶೇಷವಾಗಿ ತಯಾರಿಸಲಾದ ಪ್ರಶ್ನಾವಳಿಗಳ ಮೂಲಕ ಅಂಕಿ, ಅಂಶಗಳ ಸಂಖ್ಯಾಶಾಸ್ತ್ರದ ವಿಧಾನವನ್ನು ಬಳಸಿಕೊಳ್ಳಲಾಗಿದೆ. ಪ್ರತಿಯೊಂದು ಕುಟುಂಬದ ವಿವರವಾದ ಮಾಹಿತಿಯನ್ನು ಸಂದರ್ಶನದ ಮುಖಾಂತರ ಅಗತ್ಯವಾದ ಮಾಹಿತಿಯನ್ನು ಪಡೆಯಲಾಗಿದೆ.

ಅಧ್ಯಯನದ ಕ್ಷೇತ್ರದಲ್ಲಿ ವಿಶೇಷವಾಗಿ ಭೂಮಿಯನ್ನು ಮತ್ತು ವ್ಯವಸಾಯದ ಪ್ರಮುಖ ನೆಲೆಯನ್ನು ಸಮೀಕ್ಷಾ ವಿಧಾನದಿಂದ ಗುರ್ತಿಸಲಾಗಿದೆ. ಕಾಲೋನಿಯ ಪರಿಸರದಲ್ಲಿ ಸಹಭಾಗಿತ್ವ ವಿಧಾನದಿಂದ ಪ್ರತಿಯೊಂದು ಕುಟುಂಬವನ್ನು ಭೇಟಿ ಮಾಡಿ ಪರಿಶೀಲಿಸಿ ವಿಶೇಷವಾಗಿ ತಯಾರಿಸಲಾದ ಮಾಹಿತಿ ಪಟ್ಟಿಗೆ ಹಾಕಿಕೊಳ್ಳಲಾಗಿದೆ. ಪ್ರತಿ ಕುಟುಂಬದ ಹಿರಿಯರ ಜೊತೆಗಿನ ಸಂವಾದದ ಮುಖಾಂತರ ಕಾಲೋನಿಯ ಎಲ್ಲಾ ಬೀದಿಯ ಕುಟುಂಬಗಳ ಸದಸ್ಯರ ಜೊತೆಗಿನ ಸಂಪರ್ಕ ಪಡೆದು ಪರಿಸ್ಥಿತಿಯ ಹಲವಾರು ಮಾಹಿತಿಗಳನ್ನು ಪಡೆಯಲಾಗಿದೆ.

ಕಾಲೋನಿಯಲ್ಲಿನ ಗಿರಿಜನ ಆಶ್ರಮ ಶಾಲೆಯಲ್ಲಿನ ಮೇಲ್ವಿಚಾರಕರನ್ನು ನೇರ ಸಂದರ್ಶದಲ್ಲಿ ಬಳಸಿ ಕೊಳ್ಳಲಾಗಿದೆ. ಪ್ರತಿಯೊಂದು ಕುಟುಂಬದ ಸದಸ್ಯರಿಂದ ಹಿಡಿದು ಶಿಕ್ಷಣ, ಉದ್ಯೋಗ, ಆದಾಯ ಎಲ್ಲವನ್ನು ಪ್ರತ್ಯೇಕವಾಗಿ ಗುರುತಿಸಲಾಗಿದೆ. ಈ ಬಗೆಯ ಬಹುಳಕಾರಿ ಅಧ್ಯಯನವು ಹೆಚ್ಚು ಸೂಕ್ಷ್ಮವಾಗಿದೆ. ವಿಶಿಷ್ಟವಾದ ಒಂದು ಕಾಲೋನಿಯನ್ನು ಸಂದರ್ಶಿಸಿ, ತಮ್ಮ ಜೀವನದ ಅತಿ ಮುಖ್ಯವಾದ ಆರ್ಥಿಕ ಪರಿಸ್ಥಿತಿಗಳಿಗೆ ಸ್ಪಂದಿಸುವ ರೀತಿಯನ್ನು ಗುರುತಿಸಲಾಗಿದೆ.

ವರ್ತಮಾನದಲ್ಲಿ ಬದುಕುತ್ತಿರುವ ಹಕ್ಕಿಪಿಕ್ಕಿಯರು ತೊಡಗಿಸಿಕೊಂಡ ವಿವಿಧ ಆರ್ಥಿಕ ಚಟುವಟಿಕೆಗಳಲ್ಲಿ ಪ್ರಮುಖವಾದವುಗಳನ್ನು ಗುರುತಿಸುವುದು ಜೊತೆಗೆ ಬದಲಾಗುತ್ತಿರುವ ಸಮಾಜದೊಂದಿಗೆ ಅವುಗಳ ಅಸ್ತಿತ್ವದಿಂದ ರೂಢಿಸಿಕೊಂಡ, ಆರ್ಥಿಕ ಸಂರಚನೆಯನ್ನು ಹೇಗೆ ಬದಲಾಯಿಸಿಕೊಳ್ಳುತ್ತದೆ ಎಂಬುದನ್ನು ಸೂಕ್ಷ್ಮ ಅಧ್ಯಯನದ ಮುಖಾಂತರ ಅಧ್ಯಯನಿಸುವುದು ಇಲ್ಲಿನ ಉದ್ದೇಶವಾಗಿದೆ.



ಅಧ್ಯಾಯ ೨

# ಹಕ್ಕಿಪಿಕ್ಕಿ ಕಾಲೋನಿಯ ಪರಿಸರ

೧. ಭೌಗೋಳಿಕ ವಿವರ

೨. ಸಾಮಾಜಿಕ ಸಂರಚನೆ

೩. ಅಲೆಮಾರಿ ಬದುಕಿನ ಸಂಕ್ಷಿಪ್ತ ಐತಿಹಾಸ

೪. ಸುತ್ತಲ ಸಮುದಾಯಗಳ ಜೊತೆಗಿನ ಸಂಬಂಧ

# ಹಕ್ಕಿಪಿಕ್ಕಿ ಕಾಲೋನಿಯ ಪರಿಸರ

## ೧. ಭೌಗೋಳಿಕ ವಿವರ

ಪರಿಸರ ಅಧ್ಯಯನ ಇತ್ತೀಚಿನ ಅಧ್ಯಯನಗಳಲ್ಲಿ ಪ್ರಮುಖವಾದದ್ದು. ಹೀಗಾಗಿ ಪರಿಸರವೆಂದರೆ ಆರ್ಥಿಕ ಕ್ಷೇತ್ರಗಳ ಪಾಲುದಾರಿಕೆಯ ಅಂಶವೆಂದು ವಿಶಿಷ್ಟ ಗಮನ ಸೆಳೆದಿದೆ. ಮಾನವನ ಜನಾಂಗದ ಮತ್ತು ಆರ್ಥಿಕತೆಯ ಅಂಗವಾಗಿ ಪರಿಸರದ ಸಂಬಂಧವನ್ನು ಅಧ್ಯಯನಿಸಬೇಕಾದ ಅಗತ್ಯತೆ ಬಹಳಷ್ಟು. ಪರಿಸರ ಆರ್ಥಿಕ ಚಟುವಟಿಕೆಗಳ ಜೊತೆಗೆ ಮಾನವನ ಕಲ್ಯಾಣದ ಮೇಲೆ ಪ್ರಭಾವ ಬೀರುತ್ತದೆ. ಪ್ರಕೃತಿಯಲ್ಲಿ ದೊರೆಯುವ ನೈಸರ್ಗಿಕ ಸಂಪನ್ಮೂಲಗಳನ್ನು ಪರಿಸರದ ಒಂದು ಅಂಗವಾಗಿ ಗುರುತಿಸಬಹುದು. ಆದಿಕಾಲದಿಂದಲೂ ನಿಸರ್ಗದ ಮತ್ತು ಮಾನವನ ಸಂಬಂಧ ವ್ಯಾಪಕವಾಗಿ ಬೆಳೆದುಕೊಂಡು ಪರಿವರ್ತನೆಗೊಳ್ಳುತ್ತಾ ಬಂದಿದೆ.

ಪ್ರಕೃತಿ ಮತ್ತು ಮಾನವನ ಸಂಬಂಧ ಆದಿಮ ಕಾಲದಿಂದಲೂ ತಿಳಿದು ಬರುತ್ತದೆ. ಆದಿಮ ಕಾಲದ ಮಾನವನು ತಾನು ಪ್ರಕೃತಿಯ ಒಂದು ಅಂಗವೆಂದು ತಿಳಿದು ಪ್ರಕೃತಿ ಶಕ್ತಿಯಲ್ಲಿ ಅಡಕವಾಗಿರುವವನೆಂದು ಜೀವಿಸುತ್ತಾ ಬಂದ ಉದಾಹರಣೆಗಳು ಹಲವಾರು. ಇಂಥ ಪ್ರಕೃತಿಯನ್ನು ಅಭಿವೃದ್ಧಿ ಮಾನದಂಡದಲ್ಲೂ ಅಳತೆ ಮಾಡಲಾಗಿತ್ತು. ಶ್ರಮ ವಿಭಜನೆಯಂತೂ ಪ್ರಕೃತಿಯಿಂದಲೇ ಬೆಳೆದು ಬಂದ ಶುದ್ಧ ಸರಳ ರೀತಿಯದಾಗಿತ್ತು. ಪುರುಷ ಮತ್ತು ಸ್ತ್ರೀಯರ ನಡುವೆ ಶ್ರಮ ವಿಭಜನೆಗೆ ಮೂಲ ಕಾರಣವೂ ಪರಿಸರ. ಪುರುಷರು ಬೇಟೆಗೆ, ಮಹಿಳೆಯರು ಆಹಾರಕ್ಕೆ ಬೇಕಾಗುವ ಕಚ್ಚಾಪದಾರ್ಥಗಳ ತಯಾರಿಕೆಯಲ್ಲಿ ತೊಡಗಿಕೊಳ್ಳುವುದರಿಂದಲೇ ಬುಡಕಟ್ಟು ಸಮುದಾಯದಲ್ಲಿ ಶ್ರಮವಿಭಜನೆ ಆರಂಭಗೊಂಡಿತ್ತು. ಪ್ರಾಚೀನ ಕಾಲದ ಅತಿ ಸರಳ ಸಮಾಜದಿಂದ ಹಿಡಿದು ಆಧುನಿಕ ಕಾಲದ ಸಂಕೀರ್ಣ ಸಮಾಜದವರೆಗೂ ಸಮುದಾಯಗಳ ಬೆಳವಣಿಗೆ ಹಂತಗಳಲ್ಲಿ ಆಹಾರದ ಸ್ವರೂಪದಲ್ಲಿನ ಬದಲಾವಣೆಗಳನ್ನು ಕಾಣಬಹುದು.

ಔದ್ಯೋಗೀಕರಣ ಹಾಗು ನಗರೀಕರಣ ಪ್ರಭಾವದಿಂದ ಆಧುನಿಕ ಸಮಾಜದ ಮಾನವನು ಜಗತ್ತಿನ ಜೀವರಾಶಿಗಳನ್ನು ನಿಯಂತ್ರಿಸುವ ಅಗಾಧವಾದ ಸಾಮರ್ಥ್ಯ ಹೊಂದಿರುವುದರ ಜೊತೆಗೆ ಪರಿಸರದ ಮೇಲೆ ಮಾನವ ತನ್ನ ಸಾರ್ವಭೌಮತ್ವವನ್ನು ಹೇರಲು ಹವಣಿಸುತ್ತಿದ್ದಾನೆ. ಹೀಗಾಗಿ ಸಮುದಾಯದ ಆರ್ಥಿಕಾಭಿವೃದ್ಧಿಯು ಅವ್ಯಾಹತವಾಗಿ ಸಾಗಬೇಕಾದರೆ, ಆರ್ಥಿಕ ಉತ್ಪಾದನೆಗೆ ಪರಿಸರದ ವ್ಯವಸ್ಥೆಯೇ ಆಧಾರಸ್ತಂಭ. ಪ್ರಾಕೃತಿಕ ಸಂಪನ್ಮೂಲವಾದ ಪರಿಸರ ಮಾನವನ ಪ್ರಾಥಮಿಕ ಅಗತ್ಯ ಎಂಬುದನ್ನು ಮರೆಯಬಾರದು. ಹೀಗಾಗಿ ಬುಡಕಟ್ಟು ಸಮುದಾಯವಾದ ಹಕ್ಕಿಪಿಕ್ಕಿ ಪ್ರಕೃತಿಯ ಜೊತೆಗಿನ ಸಂಬಂಧವು ನಿರಂತರವಾದದ್ದು. ಸುಮಾರು ೩೦ ವರ್ಷಗಳ ಹಿಂದೆ ಮುಕ್ತವಾಗಿ ದೊರೆಯುತ್ತಿದ್ದ ನೈಸರ್ಗಿಕ ಸಂಪನ್ಮೂಲಗಳು ಈಗ ಬದಲಾದ ವ್ಯವಸ್ಥೆಯ ಆಧುನೀಕರಣದ ಪ್ರಭಾವದಿಂದ ನಗರಗಳು ಬೆಳೆದಂತೆ ಈ ಪರಿಸರವನ್ನು ನಿಯಂತ್ರಿಸತೊಡಗಿವೆ. ಇದೇ ಪರಿಸರದಲ್ಲಿ ವಾಸಿಸುವ ಬುಡಕಟ್ಟು ಸಮುದಾಯದ ಜನರಾದ ಹಕ್ಕಿಪಿಕ್ಕಿಯರ ಶ್ರಮ, ಜೀವನಮಟ್ಟ ಪರಿಸರದಿಂದಲೇ ಉತ್ತಮ ಮಟ್ಟದಿಂದ ಕೂಡಿಟ್ಟಿತ್ತು. ಆದರೆ ಸುಧಾರಣೆಯ ನೆಪದಲ್ಲಿ ಪರಿಸರವನ್ನು ಹಿಂಸಾತ್ಮಕವಾಗಿ ನಾಶ ಪಡಿಸುವುದರಲ್ಲಿ ಇಂದಿನ ಯೋಜನೆಗಳು ಮುಂದಾಗಿವೆ.

ಇನ್ನು ಹಕ್ಕಿಪಿಕ್ಕಿಯರು ವಾಸವಾಗಿರುವ ಬನ್ನೇರುಘಟ್ಟದ ಹಿಂಭಾಗವು ಬೆಂಗಳೂರಿನಿಂದ ದಕ್ಷಿಣ ಭಾಗದಲ್ಲಿದೆ. ಬೆಂಗಳೂರಿನಿಂದ ೨೦ ಕಿ.ಮೀ ದೂರದಲ್ಲಿರುವ ಬನ್ನೇರುಘಟ್ಟದ ಪರಿಸರವು ಸೌಂದರ್ಯದಿಂದ ಕೂಡಿರುವಂಥದ್ದು. ಎಲ್ಲೆಲ್ಲೂ ಹಸಿರು ಸಮೃದ್ಧಿಯಿಂದ ಅಲ್ಲಲ್ಲಿ ಬೆಟ್ಟ, ಗುಡ್ಡಗಳಿಂದ ಕೂಡಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ವ್ಯಾಪ್ತಿಗೆ ಬರುವ ಬನ್ನೇರುಘಟ್ಟದ ಹಿಂಭಾಗಕ್ಕೆ ೬ ಕಿ.ಮೀ ದೂರದಲ್ಲೇ ಅರಣ್ಯಕ್ಕೆ ಹೊಂದಿಕೊಂಡಂತೆ ಈ ಕಾಲೋನಿಯನ್ನು ನಿರ್ಮಿಸಲಾಗಿದೆ. ಈ ಕಾಲೋನಿಯು ಆನೇಕಲ್ ತಾಲೂಕಿಗೆ ಒಳಪಟ್ಟಿದೆ. ಗುಡ್ಡಗಳಿಂದ ಕೂಡಿದ ಬೆಟ್ಟದ ಪ್ರದೇಶದಲ್ಲಿನ ಪರಿಸರ ಕಾಡಿನಿಂದ ಆವೃತವಾಗಿರುವಂತಹದು. ಬೆಟ್ಟಗುಡ್ಡಗಳ ಪ್ರದೇಶಗಳಲ್ಲಿ ನೀಲಗಿರಿ ಮರಗಳು, ತೆಂಗು ಅನೇಕ ಬಗೆಯ ಮರಗಳು ಕಂಡು ಬರುತ್ತವೆ. ಕಾಲೋನಿಯ ಆರಂಭದ ಮುಖ್ಯ ಮಾರ್ಗದಲ್ಲಿ ಹಸಿರಿನಿಂದ ತುಂಬಿದ ಸಮೃದ್ಧವಾಗಿ ಬೆಳೆದ ತೋಟಗಳು ಕಾಣಸಿಗುವವು. ಸುತ್ತಲೂ ಹಬ್ಬಿನಿಂತಿರುವ ಬೆಟ್ಟ ಸಾಲುಗಳು ಈ ಕಾಲೋನಿಯ ಮತ್ತೊಂದು ಸೌಂದರ್ಯದ ನೆಲೆಯಾಗಿ ಕಾಣಸಿಗುತ್ತದೆ. ಈ ಪ್ರಕೃತಿ ಸೌಂದರ್ಯದ ನೆಲೆಯಲ್ಲಿ ಹಕ್ಕಿಪಿಕ್ಕಿಯರು ಪ್ರತ್ಯೇಕವಾದ ಕಾಲೋನಿಯನ್ನು ನಿರ್ಮಿಸಿಕೊಂಡು ಜೀವಿಸುತ್ತಿದ್ದಾರೆ. ಹಸಿರು ಸೌಂದರ್ಯಕ್ಕೆ ಅಂಟಿಕೊಂಡಂತೆ ಎರಡು ಕೆರೆಗಳು, ಅರಣ್ಯದ ಸಂಪರ್ಕದಿಂದ ಕಾಲೋನಿಯು ಇಳಿಜಾರಿನಿಂದ ಕೂಡಿರುವುದರಿಂದ ಇಲ್ಲಿಯ ಪ್ರಕೃತಿ ಸೌಂದರ್ಯ ವಿಶಿಷ್ಟವೆನಿಸಿದೆ.

ಹಕ್ಕಿಪಿಕ್ಕಿಯರು ಸುಮಾರು ೧೯೬೨ ರಿಂದ ಇಲ್ಲಿಯೇ ಸ್ಥಿರವಾಗಿ ನೆಲೆನಿಂತು ಜೀವನ ವಿಧಾನವನ್ನು ರೂಪಿಸಿಕೊಂಡಿದ್ದಾರೆ. ಹೀಗಾಗಿ ಬೆಟ್ಟ, ಗುಡ್ಡ, ಕಾಡು, ಕೆರೆ,ವನಗಳಿಂದ ತುಂಬಿದ ಮತ್ತು ಪಕ್ಕದಲ್ಲಿಯೇ ಸುಮಾರು ಹಳ್ಳಿಗಳಿಂದ ಕೂಡಿರುವ ಈ ಪ್ರದೇಶವನ್ನು ಬಹುವಾಗಿ ಇಷ್ಟಪಡುವರು. ಇವರು ಮನೆಗಳನ್ನು

ನಿರ್ಮಿಸಿಕೊಂಡು ಮತ್ತು ವ್ಯವಸಾಯ ಮಾಡಿಕೊಂಡು ಉತ್ತಮವಾದ ಜೀವನವನ್ನು ರೂಪಿಸಿಕೊಂಡಿದ್ದರು. ಪ್ರಕೃತಿಯ ದಟ್ಟತೆಯ ನಡುವೆ ಗುಡ್ಡಗಳಲ್ಲಿನ ಆರಂಭದ ವಾಸ ಈಗ ಬದಲಾಗಿದೆ. ಹೆಚ್ಚಾಗಿ ಈ ಜನರು ಪ್ರತ್ಯೇಕವಾಗಿ ಬೆಟ್ಟಗುಡ್ಡಗಳಲ್ಲಿ ವಾಸಿಸಲು ಇಷ್ಟಪಡುತ್ತಾರೆ. ಪ್ರಕೃತಿಯ ಸಮೃದ್ಧಿಯ ನಡುವೆ ಕಾಡಿನಲ್ಲಿ ಸಿಗುವ ಕೆಲವು ವಸ್ತುಗಳನ್ನು ಬಳಸಿಕೊಂಡು ಜೀವನಕ್ಕೆ ಉಪಕೈಕಸಬುಗಳಿಗೆ ಅನುಕೂಲವಾದ ಪ್ರದೇಶವೆಂದೇ ಗುರುತಿಸಿ ಕೊಂಡಿದ್ದಾರೆ. ಈ ಪರಿಸರವನ್ನು ಇಷ್ಟ ಪಡುವ ಹಕ್ಕಿಪಿಕ್ಕಿಯರು ಬಿದಿರಿನಿಂದ ಕೂಡಿದ ಕಾಡು ಈಗ ಇಲ್ಲದಿರುವುದು ಹಾಗು ಸುತ್ತಲು ವಾಸಿಸುತ್ತಿರುವ ಅನೇಕ ಹಳ್ಳಿಗಳು ಹೆಚ್ಚು ಸೌಲಭ್ಯಗಳಿಂದ ಕೂಡಿಲ್ಲದಿರುವುದರಿಂದ ಇವರುಗಳ ಜೊತೆಗೆ ಹಕ್ಕಿಪಿಕ್ಕಿಯರು ಗುರುತಿಸಿಕೊಂಡಿದ್ದಾರೆ. ಸುತ್ತಲಿನ ಹಳ್ಳಿಗಳಾದ ಕಗ್ಗಲಿಪುರ, ದೊಡ್ಡಿ, ಭೂತಾನಹಳ್ಳಿ, ಎಲೇಚನಹಳ್ಳಿ, ಬ್ಯಾಲಮರನಹಳ್ಳಿಗಳು ಒಂದು ಎರಡು ಕಿ.ಮೀ ದೂರದಲ್ಲೇ ಇರುವುರಿಂದ ಹೆಚ್ಚು ಕಮ್ಮಿ ಆ ಹಳ್ಳಿಗಳ ಅವಲಂಬನೆ ಕಂಡು ಬರುತ್ತದೆ. ಇಂತಹ ಪರಿಸರದಲ್ಲಿನ ಹಕ್ಕಿಪಿಕ್ಕಿಯರು ಭೌಗೋಳಿಕವಾಗಿ ಉತ್ತಮ ಸೌಕರ್ಯಗಳಿಲ್ಲದಿದ್ದರೂ ಪರಿಸರವನ್ನು ಪ್ರೀತಿಸುವ ಸ್ವಹೃದಯಿಗಳಾಗಿದ್ದಾರೆ.

## ೧. ಭೌಗೋಳಿಕ ಹಿನ್ನಲೆ

ಕರ್ನಾಟಕದಲ್ಲಿ ವಾಸಿಸುವ ಅನೇಕ ಬುಡಕಟ್ಟು ಸಮುದಾಯಗಳಲ್ಲಿ ಹಕ್ಕಿಪಿಕ್ಕಿ ಸಮುದಾಯವು ಒಂದು. ಈ ಜನರು ಇತರ ಜನಸಮುದಾಯಗಳ ಜೊತೆಗೆ ವಾಸಿಸದೇ ಗ್ರಾಮವೊಂದರ ಸಮೀಪದಲ್ಲಿ ಗುಡಿಸಲು ಅಥವಾ ಮನೆಗಳನ್ನು ಕಟ್ಟಿಕೊಂಡು ಪ್ರತ್ಯೇಕವಾಗಿಯೇ ವಾಸಿಸುತ್ತಾರೆ. ತಾವು ವಾಸಿಸುವ ಸ್ಥಳಗಳನ್ನು ಸಾಮಾನ್ಯವಾಗಿ ಕಾಲೋನಿಯೆಂದು ಗುರುತಿಸಿಕೊಂಡಿದ್ದಾರೆ. ಈ ಸಮುದಾಯದ ಜನರು ಸಾಮಾನ್ಯವಾಗಿ ಹಳ್ಳಿ, ನಗರದ ಸಮೀಪದ ಪ್ರದೇಶಗಳಲ್ಲಿ ವಾಸಿಸುವುದು ರೂಢಿಯಾಗಿದೆ. ವಾಸಿಸುವ ಆಯಾ ಹಳ್ಳಿ ಅಥವಾ ನಗರದ ಹೆಸರುಗಳನ್ನೇ ಕಾಲೋನಿಗೆ ಸೇರಿಸಿಕೊಂಡಿರುತ್ತಾರೆ. ಉದಾಹರಣೆಗೆ: ಭೂತಾನಹಳ್ಳಿ ಕಾಲೋನಿ, ದೊಡ್ಡಿಕಾಲೋನಿ.

ಬೆಂಗಳೂರು ನಗರದ ಮಡಿಲಲ್ಲಿ ಹರಡಿಕೊಂಡು ಬೆಳೆಯುತ್ತಿರುವ ಆನೇಕಲ್ ಮತ್ತು ಕನಕಪುರ ತಾಲೂಕುಗಳ ಮಧ್ಯ ಕಂಡು ಬರುವ ಬನ್ನೇರುಘಟ್ಟವು ಬೆಂಗಳೂರು ನಗರದಿಂದ ಸುಮಾರು ೨೬ ಕಿಮೀ. ದೂರದಲ್ಲೇ ಇರುವುದು. ಜೊತೆಗೆ ಬನ್ನೇರುಘಟ್ಟವು ರಾಷ್ಟ್ರೀಯ ಉದ್ಯಾನವನವೆಂದು ಖ್ಯಾತಿಯನ್ನು ಗಳಿಸಿದೆ. ಬನ್ನೇರುಘಟ್ಟದ ರಾಷ್ಟ್ರೀಯ ಉದ್ಯಾನವನದ ಹಿಂಭಾಗದ ಬೆಟ್ಟದ ಸಾಲಿನಲ್ಲಿ ಪ್ರತ್ಯೇಕವಾದ ಕಾಲೋನಿಯನ್ನು ನಿರ್ಮಿಸಿಕೊಂಡು ಜೀವಿಸುತ್ತಾ ಸಾಮಾಜಿಕ ವ್ಯವಸ್ಥೆಯನ್ನು ನಿರ್ಮಿಸಿಕೊಂಡ ಸಮುದಾಯವೇ ಹಕ್ಕಿಪಿಕ್ಕಿಯರು. ಬೆಂಗಳೂರು ನಗರ ಜಿಲ್ಲೆಯ ಪಂಚಾಯತಿ ವ್ಯಾಪ್ತಿಯ ಸರಹದ್ದು ಹೊಂದಿರುವ ಭೂತಾನಹಳ್ಳಿ, ಆನೇಕಲ್ ತಾಲೂಕಿಗೆ ಒಳಪಟ್ಟಿದ್ದು, ಬೆಂಗಳೂರು ದಕ್ಷಿಣ ಭಾಗಲ್ಲಿರುವುದು ಕಿರಿದಾದ ಬೆಟ್ಟಗುಡ್ಡಗಳಿಂದ ಹಸಿರು ಸಾಲಿನಲ್ಲಿ ಅರಣ್ಯವನ್ನು ಹೊಂದಿಕೊಂಡು ವಾಸವಾಗಿರುವ ಹಕ್ಕಿಪಿಕ್ಕಿಯರು ಸುಮಾರು ೩೫೦ ಎಕರೆಗಳ ಭೂವಿಸ್ತೀರ್ಣತೆಯಲ್ಲ ಇಲ್ಲೇ ನೆಲೆಸಿದ್ದಾರೆ.

### ಅರಣ್ಯ ಪ್ರದೇಶ

ಬನ್ನೇರುಘಟ್ಟದ ಅರಣ್ಯ ಪ್ರದೇಶವು ದೊಡ್ಡ ಅರಣ್ಯವಾಗಿದೆ. ತಮಿಳುನಾಡು ಅರಣ್ಯ ಪ್ರದೇಶವನ್ನು ಹೊಂದಿಕೊಂಡಿರುವ ಈ ಪ್ರದೇಶವು ಹಕ್ಕಿಪಿಕ್ಕಿಯರಿಗೆ ಉತ್ತಮವಾದ ಬೇಟೆಯ ಸ್ಥಳವಾಗಿತ್ತು. ಅರಣ್ಯ ಪ್ರದೇಶವು ಕರ್ನಾಟಕ ಸರಕಾರದ ಅಂಕಿ ಅಂಶಗಳ ಪ್ರಕಾರ ೩೨೦೦ ಎಕರೆ ಗಳಷ್ಟು ಪ್ರದೇಶದಿಂದ ಕೂಡಿದೆ. ಈ ಅರಣ್ಯವು ಇಂದು ರಾಷ್ಟ್ರೀಯ ಉದ್ಯಾನವಾಗಿ ರೂಪಿತವಾಗಿದೆ. ಹೀಗಾಗಿ ಇಲ್ಲಿ ಅನೇಕ ಪ್ರಾಣಿಗಳನ್ನು ಸಾಕಲಾಗುತ್ತಿದೆ. ರಾಷ್ಟ್ರೀಯ ಅರಣ್ಯದ ಸ್ಥಾಪನೆಗೆ ಮೊದಲೇ ಈ ಸ್ಥಳದಲ್ಲಿ ನೆಲೆನಿಂತ ಹಕ್ಕಿಪಿಕ್ಕಿಯರು ಈ ಅರಣ್ಯ ಪ್ರದೇಶದ ಉತ್ಪನ್ನಗಳನ್ನು ನಂಬಿ ಜೀವಿಸುತ್ತಿದ್ದರು. ಪ್ರಮುಖವಾಗಿ ಬೇಟೆಯು ಈ ಅರಣ್ಯದಿಂದಲೇ ನಡೆಯುತ್ತಿತ್ತು. ಹಕ್ಕಿಪಿಕ್ಕಿ ಕಾಲೋನಿಯ ನಿವಾಸಿಗಳು ಹೇಳುವಂತೆ 'ಈ ಅರಣ್ಯ ಪ್ರದೇಶವು ಒಂದೊಮ್ಮೆ ಮನುಷ್ಯರು ಸುಳಿಯಲು ಅಸಾಧ್ಯವಾದ ಅರಣ್ಯ ಭಾಗವಾಗಿದ್ದಿತು.' ತಮಿಳುನಾಡಿನ ಡಂಕಣಿಕೋಟೆಯ ಅರಣ್ಯಪ್ರದೇಶವನ್ನು ಹೊಂದಿಕೊಂಡಂತಿರುವ ಪ್ರದೇಶವಾಗಿತ್ತು. ಹಕ್ಕಿಪಿಕ್ಕಿಯರು ಬೇಟೆಗಾಗಿ ಕಾಡು ಉತ್ಪನ್ನಗಳಿಗಾಗಿ ಸಾಮಾನ್ಯವಾಗಿ ಹೋಗಿಬರುವ ಪ್ರದೇಶವಾಗಿತ್ತು. ಅರಣ್ಯ ಪ್ರದೇಶದಲ್ಲಿ ಕಡವೆ, ಉಡ, ಅಳಿಲು, ಮುಳ್ಳುಹಂದಿ, ಕಾಡುಹಂದಿ, ಜಿಂಕೆಯಂತಹ ಪ್ರಾಣಿಗಳು ಮತ್ತು ಗರುಡ, ಗೂಬೆ, ಪಾರಿವಾಳ, ಕಾಡುಕೋಳಿ, ಗೌಜಲಹಕ್ಕಿ, ಗುಬ್ಬಿ, ಸಣ್ಣಗುಬ್ಬಿ, ಪುರ್ಲಕ್ಕಿ, ನೀರುಗೋಳಿ ಇಂತಹ ಹಲವು ವಿಧವಾದ ಪಕ್ಷಿಗಳು ಜೀವಿಸುವುದರ ಜೊತೆಗೆ, ಜೇನು, ಬಾವಲಿಯಂತ ಜೀವಿಗಳು ಈ ಪರಿಸರದಲ್ಲಿ ಕಂಡು ಬರುತ್ತವೆ. ಇತ್ತೀಚಿನ ದಿನಗಳಲ್ಲಿ ಆನೆಗಳು ಹೆಚ್ಚಾಗಿದ್ದು, ಅವುಗಳು ಅರಣ್ಯವನ್ನು ದಾಟಿ ಸುತ್ತಲಿನ ಹಳ್ಳಿಗಳ ವ್ಯವಸಾಯ ತೋಟಗಳನ್ನು ನಾಶಮಾಡುವಂತಾಗಿದೆ. ಅರಣ್ಯ ಪ್ರದೇಶದಲ್ಲಿ ಮರಗಳು ಅನೇಕ ವಿಧವಾದ ಸಸ್ಯರಾಶಿಯನ್ನು ತನ್ನ ಒಡಲಲ್ಲಿ ಶೇಖರಿಸಿಕೊಂಡಿದೆ.

### ಗುಡ್ಡಗಾಡು ಪ್ರದೇಶ

ಬನ್ನೇರುಘಟ್ಟದ ಅರಣ್ಯ ಪ್ರದೇಶವು ಸುಮಾರು ೧೬ ಮೈಲಿಗಳ ವಿಸ್ತೀರ್ಣವನ್ನು ಹೊಂದಿದೆ. ಅಲ್ಲಲ್ಲಿ ಕಲ್ಲು ಬಂಡೆಗಳಿಂದ ಕೂಡಿದ, ಹಸಿರುವನದ ಹುಲ್ಲುಗಾವಲು ಸಹ ಅಲ್ಲಲ್ಲಿ ಕಂಡು ಬರುವುದು. ಹಕ್ಕಿಪಿಕ್ಕಿಯರ ಕಾಲೋನಿಯು ಸಹ ಅರಣ್ಯಕ್ಕೆ ಹೊಂದಿಕೊಂಡಂತೆ ಇರುವುದು. ಇದರಿಂದಾಗಿ ಕಾಲೋನಿಯು ಇಳಿಜಾರಿನಿಂದ ಕೂಡಿದ ಪ್ರದೇಶವಾಗಿದೆ. ಮಣ್ಣಿನಲ್ಲಿ ಸಣ್ಣ ಹಾಗು ಮಧ್ಯಮ ಗಾತ್ರದ ಕಲ್ಲುಗಳಿಂದ ಕೂಡಿದ ಹಾಗೂ ವ್ಯವಸಾಯಕ್ಕೆ ಅಷ್ಟೇನೂ ಯೋಗ್ಯವಾದ ಭೂಮಿಯಾಗಿಲ್ಲ. ಹಕ್ಕಿಪಿಕ್ಕಿ ಕಾಲೋನಿಯು ಈ ಪರಿಸರದಲ್ಲಿ ಭೂತಾನಹಳ್ಳಿ ಹಾಗು ಕಗ್ಗಲಿಪುರ ಎಂಬ ಹಳ್ಳಿಗಳ ಮಧ್ಯೆ ಇರುವುದು. ಭೂತಾನಹಳ್ಳಿ ಬನ್ನೇರುಘಟ್ಟದ ಗ್ರಾಮ ಪಂಚಾಯತಿ ವ್ಯಾಪ್ತಿಗೆ ಸೇರಿದರೆ, ಕಗ್ಗಲಿಪುರ ಆನೇಕಲ್ ತಾಲೂಕು ಸರಹದ್ದಿಗೆ ಸೇರಿದೆ.

ಹಕ್ಕಿಪಿಕ್ಕಿ ಕಾಲೋನಿಯು ಗುಡ್ಡಗಾಡು ಪ್ರದೇಶದ ಇಳಿಜಾರಿನಿಂದ ಕೂಡಿರುವ ಸ್ಥಳದಲ್ಲಿದೆ. ಈ ಗುಡ್ಡಗಾಡು ಪ್ರದೇಶದಲ್ಲಿ ನೀಲಗಿರಿ ಮರಗಳು ಹೆಚ್ಚಾಗಿ ಕಂಡು ಬರುತ್ತವೆ. ಹಾಗು ಹುಲ್ಲುಗಾವಲು

ಪ್ರದೇಶವನ್ನು ಸುತ್ತಲ ಸಮುದಾಯಗಳ ಪ್ರಾಣಿಗಳಾದ ಹಸು, ಎತ್ತು, ಎಮ್ಮೆ, ಕುರಿಗಳು ಮೇಯಿಸುವುದು ಮಾಡುತ್ತಾರೆ. ಅಲ್ಪಸ್ವಲ್ಪ ಭೂಮಿಯಲ್ಲಿ ಒಣಬೇಸಾಯ ಪದ್ಧತಿಯನ್ನು ಹಲವಾರು ಜನರು ಮಾಡುವರು. ಪ್ರಮುಖವಾಗಿ ರಾಗಿ, ಅವರೆ, ಅಲಸಂದಿ, ಜೋಳ ಇವುಗಳನ್ನು ಬೆಳೆಯುತ್ತಾರೆ.

**ಭೂತಾನಹಳ್ಳಿ ಕಾಲೋನಿ**

ಬುಡಕಟ್ಟು ಜನ ಸಮುದಾಯವಾದ ಹಕ್ಕಿಪಿಕ್ಕಿಯರು ವಾಸಿಸುವ ಸ್ಥಳವನ್ನು ಕಾಲೊನಿ ಎಂದು ಗುರುತಿಸಿ, ತಮ್ಮ ಪಕ್ಕದ ಹಳ್ಳಿಗಳ ಹೆಸರಿನ ಜೊತೆಗೆ ಸೇರಿಸಿಕೊಂಡಿರುವುದು ಕಾಲೋನಿಗೆ ಭೂತಾನಹಳ್ಳಿ ಎಂದು ಹೆಸರಾಗಲು ಕಾರಣ. ಈ ಭೂತಾನಹಳ್ಳಿ ಗ್ರಾಮೀಣ ಸೊಗಡಿನ ಹಳ್ಳಿಯಾಗಿದೆ. ಹಕ್ಕಿಪಿಕ್ಕಿಯರು ೧೯೬೨ ರಲ್ಲಿ ಈ ಪರಿಸರದಲ್ಲಿ ಬಂದು ನೆಲೆಸಿದ ನಂತರ ತಮ್ಮ ಪ್ರತಿಯೊಂದು ಅವಶ್ಯಕತೆಗಳಿಗೂ ಪಕ್ಕದ ಹಳ್ಳಿಯಾದ ಭೂತಾನಹಳ್ಳಿಗೆ ಹೋಗಬೇಕಾಗಿ ಬಂದಿದ್ದು, ಇದರ ಪರಿಣಾಮವಾಗಿ ಹಾಗು ಕಾಲೋನಿಯನ್ನು ನಿರ್ಮಿಸುವ ಸಮಯದಲ್ಲಿ ಸಹಾಯ ಹಸ್ತ ನೀಡಿದ ಭೂತಾನಹಳ್ಳಿಯ ಹಿರಿಯ ಕಾಂಗ್ರೇಸ್ ನಾಯಕನಾದ ರಾಮಚಂದ್ರಪ್ಪ ಎಂಬುವವರು ಕಾಲೋನಿಯ ಪ್ರಾರಂಭದಲ್ಲಿ ಬಿದಿರು ಮಳೆಗಳನ್ನು ಕಡಿದು ಮನೆಗಳನ್ನು ಕಟ್ಟಿಕೊಡಲು ಸಹಾಯ ಮಾಡಿದ. ಇದರಿಂದಾಗಿ ಕಾಲೋನಿಗೆ ಭೂತಾನಹಳ್ಳಿ ಎಂಬ ಹೆಸರನ್ನು ಸೇರಿಸಿಕೊಂಡಿದ್ದಾರೆ. ಈ ಭೂತಾನಹಳ್ಳಿಯ ಬನ್ನೇರುಘಟ್ಟದಿಂದ ೫ ಕಿ.ಮೀ ದೂರದಲ್ಲಿರುವುದು. ಅದೇ ರೀತಿ ಹಕ್ಕಿಪಕ್ಕಿಯರ ಕಾಲೋನಿಯಿಂದ ೧.೫ ಕಿ.ಮೀ ದೂರದಲ್ಲಿರುವುದು. ಹಕ್ಕಿಪಿಕ್ಕಿಯರ ದಿನ ನಿತ್ಯದ ಎಲ್ಲಾ ಸಾಮಾನುಗಳಾದ ದಿನಸಿ, ಟೆಲಿಪೋನ್, ರಾಗಿ, ಮಿಷನ್, ತರಕಾರಿ, ಸೀಮೆಎಣ್ಣೆ ಮತ್ತು ಸರಕಾರದಿಂದ ನೀಡಿರುವ ಪಡಿತರ ಚೀಟಿಯ ದಿನಸಿಗಳನ್ನು ತರಲು ಈ ಕಾಲೋನಿಯಿಂದ ಭೂತಾನಹಳ್ಳಿಗೆ ಹೋಗಲೇಬೇಕಾಯಿತು. ಪ್ರಸ್ತುತ ಹಕ್ಕಿಪಿಕ್ಕಿಯರು ಯಾವುದೇ ವಿಧವಾದ ಸೌಲಭ್ಯಗಳನ್ನು ಪಡೆಯಬೇಕಾದರೆ, ಈ ಹಳ್ಳಿಯಿಂದಲೇ ಎನ್ನಬಹುದು. ಭೂತಾನಹಳ್ಳಿ ಎಂಬುದು ಸುಮಾರು ೧೫೦೦ ಜನಸಂಖ್ಯೆಯುಳ್ಳ ಹಳ್ಳಿಯಾಗಿದೆ. ಹೀಗಾಗಿ ಹಕ್ಕಿಪಿಕ್ಕಿಯರು ಕಾಲೋನಿಯನ್ನು ಇಂದು ಗುರುತಿಸಿಕೊಳ್ಳುತ್ತಿರುವುದು ಭೂತಾನಹಳ್ಳಿ ಎಂತಲೇ. ಇನ್ನು ಸ್ಥಳ ಪುರಾಣದ ಬಗ್ಗೆ ಕೇಳಿದಳೆ, ಅಲೆಮಾರಿ ಬದುಕು ಸಾಗಿಸುತ್ತಿದ್ದಾಗ ರಾಮಚಂದ್ರಪ್ಪ ಇಲ್ಲಿ ನಮಗೆ ಸಹಾಯ ಮಾಡಿದ ಎನ್ನುತ್ತಾರೆ. ಹಕ್ಕಿಪಿಕ್ಕಿಯರು ಹೇಳುವಂತೆ 'ಇಲ್ಲಿ ಪಡ್ಡರು ಇದ್ದರು. ಪೋತಪ್ಪ ಎಂಬಾತ ಇದ್ದರು, ಆಗ ಇದು ದೊಡ್ಡಕಾಡು ಇವೆಲ್ಲಾ, ನಾವು ಇಂತಹ ದೊಡ್ಡ ಕಾಡುಗಳಲ್ಲಿ ಬದುಕುತ್ತಿದ್ದಿವಿ. ಆಗ ಇದು ರಾಗಳ್ಳಿ ಕಾಡು ಅಂತ ಹೆಸರು. ನಮ್ಮನ ತಗೋ ಬಂದಿ ಕಾಡಿಗೆ ಸೇರಿಸಿದರು. ಇಲ್ಲಿ ಬಿದಿರು ಮಳೆ ಜಾಸ್ತಿ ಇತ್ತು. ಶಾನುಭೋಗ ಸೀನಪ್ಪ ರಾಮಚಂದ್ರಪ್ಪ ಬಂದು ಹಕ್ಕಿಪಿಕ್ಕಿಯವರಿಗೆ ಮನೆ ಕಟ್ಟಿಸಿಕೊಡೋನು. ಎಂಥ ಹೇಳಿ ಬಿದಿರು ಮಳಿ ಕಟ್ಟುಮಾಡಿಸಿ ೫೫ ಮನೆ ಕಟ್ಟಿಸಿದರು. ಅವಾಗಲೇ ಬಸವಲಿಂಗಪ್ಪನವರು ಬಂದಿದ್ದರು ಹೀಗಾಗಿ ಈ ಸಮುದಾಯದ ಜನರಿಗೆ ಭೂತಾನಹಳ್ಳಿ ಜನರ ಮೇಲೆ ನಂಬಿಕೆಯಿಂದಲೇ ಇಂದಿಗೂ ಸಹ ಹಲವಾರು ರೀತಿಯ ಸಹಾಯಗಳನ್ನು ಮಾಡುತ್ತಿರುವುದು ವಾಸ್ತವದ ಸಂಗತಿ.

## ಜನಸಂಖ್ಯೆ

ಹಕ್ಕಿಪಿಕ್ಕಿಯರು ಪ್ರತ್ಯೇಕವಾಗಿ ವಾಸಿಸುವುದರ ಜೊತೆಗೆ ತನ್ನದೇ ಆದ ಸಾಮಾಜಿಕ ವ್ಯವಸ್ಥೆಯನ್ನು ಕಟ್ಟಿಕೊಂಡು, ತಮ್ಮ ಪರಂಪರೆಯನ್ನು ಉಳಿಸಿಕೊಂಡು ಬಂದಿದ್ದಾರೆ. ಹಕ್ಕಿಪಿಕ್ಕಿ ಕಾಲೋನಿಯಲ್ಲಿ ಸುಮಾರು ೪೧೨ ರಷ್ಟು ಜನರಿಂದ ಕೂಡಿದೆ. ಇದರಲ್ಲಿ ಪುರುಷರು ೨೦೨ ಮತ್ತು ಮಹಿಳೆಯರು ೨೧೦ ಜನಸಂಖ್ಯೆಯು ಈ ಕ್ಷೇತ್ರದ ಮೇಲೆ ಸಹ ಪ್ರಭಾವ ಬೀರಿದೆ. ರಾಜಕೀಯ ವಿದ್ಯಮಾನಗಳು ಈ ಜನಸಂಖ್ಯೆಯ ಆಧರಿಸಿಯೇ ಆಗಿವೆ. ಮುಖ್ಯವಾಗಿ ಹಕ್ಕಿಪಿಕ್ಕಿ ಕಾಲೋನಿಯಲ್ಲಿವಾಸವಾಗಿರುವ ಜನಸಂಖ್ಯೆಯನ್ನು ಜನಗಣತಿಯ ಆಧಾರದಿಂದ ಮತ್ತು ಮತದಾರರ ಪಟ್ಟಿಯಿಂದ ತಿಳಿದು ಬರುವುದೇನೆಂದರೆ, ಜನಸಂಖ್ಯೆಯ ಪ್ರಮಾಣ ೫೩೨ ಎಂದು. ಆದರೆ ಕ್ಷೇತ್ರಕಾರ್ಯದ ಸಮಯದಲ್ಲಿ ರೂಪಿಸಿದ ಪ್ರಶ್ನಾವಳಿಗಳಿಂದ ತಿಳಿದು ಬರುವ ಜನಸಂಖ್ಯೆ ಪ್ರತ್ಯಕ್ಷವಾಗಿ ವಾಸಿಸುವವರಾಗಿದ್ದಾರೆ. ಕಾಲೋನಿಯಲ್ಲಿ ಸುಮಾರು ೧೦೨ ಕುಟುಂಬಗಳಿಂದ ೪೧೨ ರಷ್ಟು ಜನರಿರುವುದಾಗಿ ತಿಳಿದು ಬರುತ್ತದೆ. ಕಾಲೋನಿಯಲ್ಲಿ ಹಂಚಿಕೆಯಾದ ಪ್ರಾರಂಭಿಕ ಕುಟುಂಬಗಳ ಸಂಖ್ಯೆ ಕೇವಲ ೫೫ ಮಾತ್ರ. ಹೀಗಾಗಿ ಜನಸಂಖ್ಯೆ ದೃಷ್ಟಿಯಿಂದ ಕಡಿಮೆ ಪ್ರಮಾಣದಲ್ಲಿದ್ದರೂ ಕಾಲೋನಿಯು ದೊಡ್ಡದಾಗಿ ಕಂಡು ಬರುತ್ತದೆ.

## ವಸತಿ

ಕಾಲೋನಿಯ ಆರಂಭ ಹಂತದಲ್ಲಿ ಹಕ್ಕಿಪಿಕ್ಕಿಯರ ವಸತಿ ವ್ಯವಸ್ಥೆಯು ಪ್ರಕೃತಿಯ ಮಡಿಲಿನ ಹಲವಾರು ಸಂಪನ್ಮೂಲಗಳನ್ನು ಆಧರಿಸಿಯೇ ರೂಪಗೊಂಡಿವೆ. ಇಲ್ಲಿನ ಅರಣ್ಯ ಪ್ರದೇಶವು ಸಮುದಾಯದ ಜನರಿಗೆ ಮನೆಗಳನ್ನು ನಿರ್ಮಿಸಿಕೊಳ್ಳುವಂತಹ ಬಿದಿರು ಮರಗಳು, ಕಾಡಿನ ಹಲವಾರು ಮರಗಳು , ಸೊಪ್ಪುಗಳು ಹುಲ್ಲುಗಳು ದೊರೆಯುತ್ತಿದ್ದವೆಂದು ಅಂತಹವುಗಳಿಂದಲೇ ಬೆಚ್ಚನೆಯ ವಾತಾವರಣದ ಮನೆಗಳನ್ನು ನಿರ್ಮಿಸಿಕೊಳ್ಳುತ್ತಿದ್ದರು. ಸ್ವಯಂ ಸೇವಾ ಸಂಘವಾದ ಮಹಿಳಾ ಸ್ಕೀಂ ನಿಂದ ಹಲವು ಮನೆಗಳನ್ನು ನಿರ್ಮಿಸಿಕೊಂಡಿದ್ದಾರೆ.

೧೯೭೨ ರ ನಂತರ ಕಾಲೋನಿಯಲ್ಲಿ ಹಲವಾರು ಬದಲಾವಣೆಗಳು ಕಂಡು ಬರತೊಡಗಿದವು. ಸರಕಾರದ ವತಿಯಿಂದ ಬಸಲಿಂಗಪ್ಪನವರು ನೇರವಾಗಿ ಕಾಲೋನಿಯ ಪರಿಸರಕ್ಕೆ ಬಂದು ಮನೆಗಳನ್ನು ಕಟ್ಟಿಕೊಡಲು ಮುಂದಾದ ಪರಿಣಾಮವಾಗಿ ಗುಡಿಸಲುಗಳು ಹೆಂಚಿನಮನೆಗಳಾದವು. ಕಾಲೋನಿಯಲ್ಲಿ ವ್ಯವಸ್ಥಿತವಾದ ಮನೆಗಳು ಕಂಡು ಬರುವುದಿಲ್ಲ. ಇತ್ತೀಚಿಗೆ ಸರಕಾರದ ವತಿಯಿಂದ ನಿರ್ಮಿಸಲಾದ ೧೦ ಶೀಟ್ ಮನೆಗಳಾಗಿವೆ. ೨೦೦೦-೨೦೦೧ ನೇ ಸಾಲಿನಲ್ಲಿ ನಿರ್ಮಿಸಲಾದ ಈ ಮನೆಗಳು ಕೇವಲ ೧೫.೨೦ ಅಡಿಗಳ ವಿಸ್ತೀರ್ಣವನ್ನು ಮಾತ್ರ ಹೊಂದಿವೆ. ಇನ್ನು ಕಾಲೋನಿಯಲ್ಲಿ ಹೆಚ್ಚಿನ ಮನೆಗಳು ಗುಡಿಸಲು ಮತ್ತು ಹೆಂಚಿನ ಮನೆಗಳಿಂದ ಕೂಡಿವೆ.

ಕಾಲೋನಿಯಲ್ಲಿ ವ್ಯವಸ್ಥಿತ ಮನೆಗಳು ಕಂಡು ಬರುವುದಿಲ್ಲವಾದರೂ ಸಹ ಹೆಚ್ಚಿನ ಭೂ ಭಾಗ ಮಾತ್ರ ಕಾಣಬಹುದಾಗಿದೆ. ನಿವೇಶನಗಳು ಸಾಮಾನ್ಯವಾಗಿ ೨ ರೀತಿಯ ವಿಸ್ತೀರ್ಣತೆಯನ್ನು ಹೊಂದಿರುವುದು.

ಕಾಲೋನಿಯ ಆರಂಭದ ಹಂತದಲ್ಲಿ ೫೫ ಕುಟುಂಬಗಳಿಂದ ಪ್ರಾರಂಭಗೊಂಡಿತ್ತು. ಆದರೆ ಪ್ರಸ್ತುತ ೧೦೨ ಮನೆಗಳು ಕಂಡು ಬರುತ್ತವೆ. ಸರಕಾರದ ಅಂಕಿ ಅಂಶಗಳ ಪ್ರಕಾರ ೧೫೧ ಮನೆಗಳ ನಿರ್ಮಾಣದ ನಕ್ಷೆಯನ್ನು ನೀಡಲಾಗಿದೆ. ಆದರೆ ಇಲ್ಲಿ ಹಕ್ಕಿಪಿಕ್ಕಿಯರ ೧೨೬ ಮನೆಗಳು ಮಾತ್ರ ಇದ್ದು, ೨೪ ಕುಟುಂಬಗಳು ಸುಮಾರು ೧೦ ವರ್ಷಗಳ ಹಿಂದೆಯೇ ಸ್ಥಳವನ್ನು ಬಿಟ್ಟು ಬೇರೆ ಸ್ಥಳದಲ್ಲಿ ನೆಲೆನಿಂತಿದ್ದಾರೆ. ಅವರುಗಳ ಹೆಸರಿನ ಮನೆ ಜಾಗ ಖಾಲಿ ನಿವೇಶನವಾಗಿವೆ.

ಕಾಲೋನಿಯ ಮನೆಗಳ ಅಂಕಿ ಅಂಶಗಳು

| ಕ್ರ.ಸಂ | ಮನೆ ಮಾದರಿ | ಸಂಖ್ಯೆ |
|---|---|---|
| ೧ | ಹೆಂಚಿನ ಮನೆ | ೩೮ |
| ೨ | ಗುಡಿಸಲು | ೨೩ |
| ೩ | ಟಿನ್‌ಮನೆ | ೧೧ |
| ೪ | ಆಶ್ರಯ ಯೋಜನೆಯ ಮನೆ | ೧೫ |
| ೫ | ಆರ್.ಸಿ.ಸಿ ಮನೆ | ೧೫ |
| | ಒಟ್ಟು | ೧೦೨ |

ಕಾಲೋನಿಯಲ್ಲಿನ ಸರ್ಕಾರಿ ಕಟ್ಟಡಗಳು

| ಕ್ರ.ಸಂ | ಮಾದರಿ | ಸಂಖ್ಯೆ | ಉಪಯೋಗ |
|---|---|---|---|
| ೧ | ಶೀಟ್ | ೨ | ಗಿರಿಜನ ಆಶ್ರಮ ಶಾಲೆ |
| ೨ | ಶೆಡ್ | ೧ | ಉಗ್ರಾಣ |
| ೩ | ಹೆಂಚಿನದು | ೩ | ಉಪಾಧ್ಯಾಯರ ವಸತಿಗೃಹ |
| | ಒಟ್ಟು | ೬ | |

ಕಾಲೋನಿಯಲ್ಲಿ ಪ್ರಸ್ತುತ ನಿವೇಶನಗಳು ೧೦೨ ಅವುಗಳು ಮೇಲಿನ ಅಂಕಿ ಅಂಶಗಳಿಂದ ಗಮನಿಸಬಹುದು. ಆಪಿನಿಂದ ನಿರ್ಮಿತವಾದ ಗುಡಿಸಲು ಮತ್ತು ಟಿನ್ ಮನೆಗಳು ಸಹ ಕಂಡು ಬರುತ್ತವೆ. ಸರಕಾರದ ಅಭಿವೃದ್ಧಿಯ ಫಲವಾಗಿ ಸರಕಾರದಿಂದ ನಿರ್ಮಿತವಾದ ಕಟ್ಟಡಗಳು ೬. ಅವುಗಳಲ್ಲಿ ಗಿರಿಜನ ಆಶ್ರಮ ಶಾಲೆ ಕಟ್ಟಡ ಮತ್ತು ಉಗ್ರಾಣ, ಅಂಗನವಾಡಿ ಕಟ್ಟಡ ಮತ್ತು ಎರಡು ಉಪಾಧ್ಯಾಯರಿಗೆ ನಿರ್ಮಿಸಲಾದ ಹೆಂಚಿನ ಮನೆಗಳು, ಆಶ್ರಮ ಶಾಲೆಯ ಶಿಕ್ಷಕರಿಗೆ ಮೀಸಲಿರಿಸಿದ ಮನೆಯು ಯಾರೂ ವಾಸಿಸದೇ ಮುರಿಯುವ ಹಂತ ತಲುಪಿದೆ. ಕಾಲೋನಿಯ ಹಲವು ಜನರು ವ್ಯಾಪಾರದ ಉದ್ದೇಶದಿಂದ ಬೇರೆ ಊರುಗಳಿಗೆ ವಲಸೆ ಹೋಗಿರುವುದರಿಂದ ಹಲವು ಮನೆಗಳು ಮುರಿದು ಬಿದ್ದಿವೆ.

ಕಾಲೋನಿಯ ನಿವೇಶನಗಳ ಮಾದರಿಯನ್ನು ಆನೇಕಲ್ ಕ್ಷೇತ್ರಾಧಿಕಾರಿಗಳು ನೀಡಿದ ವರದಿಯಂತೆ ೩೦ x ೩೫ ಅಡಿ ಮತ್ತು ೩೦ x ೩೫ ಅಡಿಗಳು, ಒಟ್ಟು ೧೫೧ ನಿವೇಶನಗಳು. ಇವುಗಳಲ್ಲಿ ಹಕ್ಕಿಪಿಕ್ಕಿಯರವು

೧೨೬ ನಿವೇಶನಗಳು ಮಾತ್ರ. ಉಳಿದ ೩೦ ನಿವೇಶನಗಳು ಇಲ್ಲಿಗರ ನಿವೇಶಗಳಾಗಿವೆ. (ಬ್ಲಾಕ್ ಡೆವಲಪ್‌ಮೆಂಟ್ ಅಧಿಕಾರಿ ಆನೇಕಲ್ ರೆಕಾರ್ಡ್ಸ್)

## ಮೂಲಭೂತ ಸೌಕರ್ಯಗಳು

ಸುಸಂಘಟಿತವಾದ ಸಮಯದಾಯವನ್ನು ನಾವು ಸಮಾಜ ಎನ್ನುತ್ತೇವೆ. ವ್ಯವಸ್ಥಿತವಾದ ಮಾನವನ ಅಥವಾ ವ್ಯಕ್ತಿಗಳ ಸಮೂಹ ವಿವಿಧ ಅಂಗಳಾಗಿ ಸಾಮಾಜಿಕ ನಡುವಳಿಕೆಯ ಕಟ್ಟುಪಾಡುಗಳೊಂದಿಗೆ ವಿಲೀನವಾಗಿರುತ್ತವೆ. ಹೀಗಾಗಿ ಸಂಘಟಿತವಾದ ವ್ಯಕ್ತಿಗಳ ಸಮೂಹಕ್ಕೆ ಮೂಲಭೂತ ಸೌಕರ್ಯಗಳು ಅವಶ್ಯವಾಗಿದೆ. ಮೂಲಭೂತ ಅವಶ್ಯಕತೆಗಳು ಮಾನವನ ಜೀವನ ವಿಧಾನವನ್ನು ರೂಪಿಸುವ ಕಾರ್ಯದಲ್ಲಿ ಸಹಾಯ ಮಾಡುವವು. ಇನ್ನು ಆಧುನಿಕ ಜಗತ್ತಿನಲ್ಲಿ ಸಂಘಟಿತವಾದ ವ್ಯವಸ್ಥಿತ ಸಂವಿಧಾನವನ್ನು ರೂಪಿಸಿಕೊಂಡ ನಂತರ ಮೂಲಭೂತ ಸೌಲಭ್ಯಗಳಿಗೆ ಹೆಚ್ಚಿನ ಮಹತ್ವ ದೊರೆಯತೊಡಗಿದೆ. ಈ ಸೌಲಭ್ಯಗಳು ಮಾನವ ಸಮಾಜವನ್ನು ವಿಕಾಸದದ ಹಾದಿಯಲ್ಲಿ ಮುನ್ನೆಡಸಲು ಬಹುಮುಖ್ಯವಾದ ಸೌಲಭ್ಯವಾಗಿದೆ. ಈ ಸೌಲಭ್ಯಗಳನ್ನು ಯಾವುದೇ ರೀತಿಯ ತೆರಿಗೆಯನ್ನು ಪಡೆದು ಪಡೆಯುವಂತದ್ದಲ್ಲ. ಆದ್ದರಿಂದ ಮಾನವನ ಏಳಿಗೆಗೆ ಅಥವಾ ಕಲ್ಯಾಣದ ಗುರಿಯನ್ನು ಹೊಂದಿರುವ ಎಲ್ಲಾ ನಾಗರಿಕ ಸಮಾಜದಲ್ಲಿ ಎಲ್ಲಾ ವ್ಯವಸ್ಥಿತ ಸರಕಾರಗಳು ಕೈಗೊಳ್ಳಲೇ ಬೇಕಾದ ಕರ್ತವ್ಯಗಳು. ಇದನ್ನು ಸಂವಿಧಾನದಲ್ಲಿಯೇ ಉಲ್ಲೇಖಿಸಿರುವುದು ಸಹ ಗಮನಿಸಬಹುದು. ಹೀಗಾಗಿ ಮೂಲಭೂತ ಸೌಲಭ್ಯಗಳು ಮಾನವನ ಸಮುದಾಯವನ್ನು ನಾಗರಿಕತೆಯತ್ತ ಮುನ್ನಡೆಯುವಂತೆ ಮಾಡಲು ಬೇಕಾದ ಸೌಲಭ್ಯಗಳಲ್ಲಿ ಪ್ರಮುಖವಾದದ್ದು. ಇಂತಹ ಮೂಲಭೂತ ಸೌಲಭ್ಯಗಳೆಂದರೆ ಸಾರಿಗೆ ಸಂಪರ್ಕ, ನೀರು, ಆರೋಗ್ಯ, ಶಿಕ್ಷಣ, ರಸ್ತೆಗಳು ಇತ್ಯಾದಿಗಳು.

## ಸಾರಿಗೆ ಸಂಪರ್ಕ

ನಗರದ ಬೆಳವಣಿಗೆಯಂತೆ ಜನಸಂಖ್ಯೆಯು ಏರುತ್ತಿದೆ. ಹೀಗಾಗಿ ಏರುತ್ತಿರುವ ಜನಸಂಖ್ಯೆಗೆ ಅನುಗುಣವಾಗಿ ಸಾರಿಗೆ ಸಂಪರ್ಕಗಳು ಅಭಿವೃದ್ಧಿಪಡಿಸಬೇಕಾಗಿರುವುದು ಸರಕಾರದ ಕೆಲಸ. ಇನ್ನು ಬನ್ನೇರುಘಟ್ಟದ ಸುತ್ತಲಿನ ಸಾರಿಗೆ ಸಂಪರ್ಕ ಶೋಚನೀಯವಾದದ್ದು. ನಗರದ ಪ್ರಭಾವ ಹಾಗು ರಾಷ್ಟ್ರೀಯ ಉದ್ಯಾನವನದ ಪರಿಸರಕ್ಕೆ ಸಾರಿಗೆ ಸಂಪರ್ಕ ವ್ಯಾಪಕವಾಗಿದ್ದರೂ ಸಹ ಬನ್ನೇರುಘಟ್ಟದ ಹಿಂಬದಿಯ ಹಳ್ಳಿಗಳಿಗೆ ಮಾತ್ರ ಇದು ದೊಡ್ಡ ಸಮಸ್ಯೆಯೇ ಆಗಿದೆ. ಸಾರಿಗೆ ಸಂಪರ್ಕ ಬನ್ನೇರುಘಟ್ಟದ ಮುಖ್ಯರಸ್ತೆಯಲ್ಲಿ ಮಾತ್ರ ಹೆಚ್ಚು ಅಭಿವೃದ್ಧಿಯಾದರೆ ಇನ್ನು ಇದರ ಹಿಂಬದಿಯ ಹಕ್ಕಿಪಿಕ್ಕಿ ಕಾಲೋನಿ, ಭೂತಾನಹಳ್ಳಿ, ಕಗ್ಗಲಿಪುರ, ಬ್ಯಾಡರದೊಡ್ಡಿ ಹಳ್ಳಿಗಳು ಸರಿಯಾದ ಸಂಪರ್ಕ ವ್ಯವಸ್ಥೆ ಇಲ್ಲವಾಗಿದೆ.

ಬನ್ನೇರುಘಟ್ಟದಿಂದ ೬ ಕಿ.ಮೀ ದೂರದಲ್ಲಿರುವ ಹಕ್ಕಿಪಿಕ್ಕಿ ಕಾಲೋನಿಗೆ ಸಾರಿಗೆ ವ್ಯವಸ್ಥೆ ಸರಿಯಾದ ರೀತಿಯಲ್ಲಿ ಇಲ್ಲ ಎಂಬುದು ತಿಳಿಯುತ್ತದೆ. ಕಾಲೋನಿಯಿಂದ ಸುಮಾರು ೫೦ ರಿಂದ ೬೦ ಜನರು

ವ್ಯಾಪಾರಕ್ಕಾಗಿ ಬೇರೆ ಬೇರೆ ಊರುಗಳಿಗೆ ಹೋಗುವುದು ಸಾಮಾನ್ಯವಾಗಿದೆ. ದಿನ ನಿತ್ಯದ ಓಡಾಟಗಳಿಗೆ ನಗರ ಸಾರಿಗೆ ಎರಡು ಬಸ್ಸುಗಳು ಮಾತ್ರ. ಅವುಗಳು ಎಷ್ಟೋ ಸಮಯದಲ್ಲಿ ಬರುವುದಿಲ್ಲ. ಮಳೆಗಾಲ ಬಂದರೆ ಬಸ್ಸಿನ ಭರವಸೆಯೇ ಇಲ್ಲ ಎನ್ನುತ್ತಾರೆ ಇಲ್ಲಿನ ನಿವಾಸಿಗಳು. ವ್ಯಾಪಾರಕ್ಕಾಗಿ ಹೊರಡುವ ಈ ಕಾಲೋನಿಯ ಪುರುಷರು, ಮಹಿಳೆಯರು, ಪರ್ಯಾಯವಾಗಿ ಆಟೋರಿಕ್ಷಾಗಳನ್ನು ಅವಲಂಬಿಸಬೇಕಾಗಿದೆ. ಇಂತಹ ಸಂದರ್ಭಗಳಲ್ಲಿ ಆಟೋ ರಿಕ್ಷಾಗಳು ದುಬಾರಿ ಹಣವನ್ನು ಕೇಳುವುದಲ್ಲದೇ ಹೆಚ್ಚಿನ ಜನರು ತೆರಳುವ ಸಮಯದಲ್ಲಿ ಮಾತ್ರ ಕರೆದೊಯ್ಯುತ್ತಾರೆ.

ಸುತ್ತಲಿನ ಹಳ್ಳಿಗಳಿಂದ ಬರುವ ಜನರಿಗಿಂತ ಹೆಚ್ಚಿನ ಜನರು ಈ ಕಾಲೋನಿಯಿಂದಲೇ ಬರುತ್ತಿದ್ದರೂ ಕಾಲೋನಿಯು ಇನ್ನು ಒಂದು ಹಳ್ಳಿಯಾಗಿ ರೂಪಿತವಾಗುವಲ್ಲಿ ವಿಫಲವಾಗಿದೆ. ಕ್ಷೇತ್ರಕಾರ್ಯದ ಸಮಯದಲ್ಲಿ ನಡೆದ ಘಟನೆ. ಬೆಂಗಳೂರಿನಿಂದ ಹಕ್ಕಿಪಿಕ್ಕಿ ಕಾಲೋನಿಗೆ ಹೋಗುವ ಬಸ್‌ನಲ್ಲಿ ಪ್ರಯಾಣಿಸುತ್ತಾ ಕಾಲೋನಿಯ ರಸ್ತೆಯು ಮುಖ್ಯರಸ್ತೆಯನ್ನು ಸಂಪರ್ಕಿಸುವ ಸ್ಥಳದಲ್ಲಿ ಸರಕಾರದಿಂದ ಬೋರ್ಡ ಹಾಕಲಾಗಿದ್ದರೂ ಸಹ ಬಸ್ ನಿಲ್ಲಿಸದೇ ಮುಂದೆ ಕಗ್ಗಲಪುರ ಎಂಬಲ್ಲಿ ನಿಲ್ಲಿಸುವರು. ಆಗ ಚಾಲಕರನ್ನು ಕೇಳಿದಾಗ, ಅಲ್ಲಿ ಯಾವುದೇ ಕಾರಣಕ್ಕೂ ಬಸ್ ನಿಲ್ಲಿಸುವುದಿಲ್ಲ. ಬೇಕಿದ್ದರೆ ಇಲ್ಲಿಗೇ ಬರಲಿ ಎಂಬ ಉದಾಸೀನ ರೀತಿಯಲ್ಲಿ ಮಾತನಾಡುತ್ತಾರೆ. ಕಾಲೋನಿಯ ಸಂಪರ್ಕ ರಸ್ತೆಯಲ್ಲಿ ಜಿಲ್ಲಾ ಪಂಚಾಯತಿಯಿಂದ ನಾಮ ಫಲಕ ಮಾತ್ರ ಇದೆ. ಇದು ಅಲ್ಲಿನ ನಾಗರಿಕರ ಅಸಡ್ಡೆಗೆ ಗುರಿಯಾಗಿರುವುದು ಗಮನಿಸಬಹುದು. ಕಾಲೋನಿಯಿಂದ ಬಸ್ ನಿಲ್ದಾಣಕ್ಕೆ ಬರಬೇಕಾದರೆ ಸುಮಾರು ೧.೫ ಮೈಲಿ ದೂರ ನಡೆಯಬೇಕಾಗಿದೆ. ಈ ರೀತಿಯ ಮೂಲಭೂತ ಸೌಲಭ್ಯಗಳ ಕೊರತೆ ಸಮುದಾಯವನ್ನು ಇನ್ನು ನಾಗರಿಕತೆಯ ಪ್ರತ್ಯೇಕ ಗ್ರಾಮ ಅಥವಾ ಹಳ್ಳಿಯಾಗಿ ಕಾಣಲು ಸಾಧ್ಯವಾಗಿಲ್ಲ. ಮುಖ್ಯವಾಗಿ ಸಾರಿಗೆ ಸಂಪರ್ಕದ ಅಭಿವೃದ್ಧಿ ಅಗತ್ಯವಾಗಿದೆ. ಸಾರಿಗೆ ವ್ಯವಸ್ಥೆಯಿಂದಾಗಿ ವಿಭಿನ್ನ ಅಭಿರುಚಿ, ಭಾಷೆ, ಧರ್ಮ, ಸಂಸ್ಕೃತಿ ಮತ್ತು ಜಾತಿಗಳ ಮಿಲನ ಸಾಧ್ಯವಾಗಿ ಸಾಮಾಜಿಕ ಬದಲಾವಣೆಗಳಾಗುತ್ತವೆ.

## ನೀರಿನ ವ್ಯವಸ್ಥೆ

ಮಾನವನ ಜೀವನದ ಸಂರಕ್ಷಣೆಗೆ ಅಗತ್ಯವಾದ ನೈಸರ್ಗಿಕ ಸಂಪನ್ಮೂಲಗಳಲ್ಲಿ ನೀರು ಅತ್ಯಂತ ಮುಖ್ಯವಾದದ್ದು. ಜೀವನದ ಸರ್ವಸ್ವವಾಗಿರುವ ನೀರು ಸಮಸ್ತ ಜೀವ ಸಂಕುಲದ ರಾಸಾಯನಿಕ ಕ್ರಿಯೆಯ ಮೂಲವಾಗಿದೆ. ಹೀಗಾಗಿ ಗುಡ್ಡ ಪ್ರದೇಶದಲ್ಲಿ ವಾಸವಾಗಿರುವ ಹಕ್ಕಿಪಿಕ್ಕಿಯರು ೧೯೮೪ ರವರೆಗೆ ನೀರಿಗಾಗಿ ದೂರದ ಹಳ್ಳಿಗಳನ್ನು ಅವಲಂಬಿಸಬೇಕಾಗಿತ್ತು. ಬೇಸಾಯ ಕ್ರಮಕ್ಕೆ ಮಳೆ ನೀರೇ ಆಶ್ರಯವಾಗಿತ್ತು. ಈ ಪರಿಸ್ಥಿತಿಯಿಂದಲೇ ಕಾಲೋನಿಯ ಪಕ್ಕದಲ್ಲಿಯೇ ಕೆರೆಯ ನಿರ್ಮಾಣವನ್ನ ಮಾಡಿಕೊಂಡಿದ್ದರು. ಪ್ರಮುಖವಾಗಿ ಎರಡು ಕೆರೆಗಳು ಭೂಮಿಗೆ ನೀರು ಒದಗಿಸುತ್ತಿದ್ದವು. ಆದರೆ ಕುಡಿಯುವ ನೀರಿಗೆ ಬವಣೆ ತಪ್ಪಿಲ್ಲ.

೧೯೮೪ ರಲ್ಲಿ ಕುಡಿಯುವ ನೀರಿಗಾಗಿ ಕಾಲೋನಿಯಲ್ಲಿ ಬೋರ್ ವೆಲ್ (ನೀರಿನ ಕೊಳ) ಹಾಕಲಾಗಿದೆ. ಇದರಿಂದ ಕುಡಿಯುವ ನೀರಿನ ವ್ಯವಸ್ಥೆ ಸ್ವಲ್ಪ ಮಟ್ಟಿಗೆ ಪರಿಹಾರ ಕಂಡುಕೊಳ್ಳುವಂತಾಗಿದೆ. ಕಾಲೋನಿಯಲ್ಲಿ ಕುಡಿಯುವ ನೀರಿಗಾಗಿ ಸಣ್ಣಟ್ಯಾಂಕ್ (ಅರವಟ್ಟಿಗೆ) ೩ ಕಡೆ ಕಟ್ಟಲಾಗಿದೆ. ಆದರೂ ಸಹ ಕಾಲೋನಿಯಲ್ಲಿ ನೀರಿನ ಸಮಸ್ಯೆ ಕಂಡು ಬರುವುದು. ದಿನಕ್ಕೆ ೨ ಗಂಟೆಗಳು ಮಾತ್ರ ಕಾಲೋನಿಯಲ್ಲಿ ನೀರು ಬಿಡಲಾಗುತ್ತಿದೆ. ಕಾಲೋನಿಯ ಬೋರ್‌ವೆಲ್‌ನಿಂದ ಸುತ್ತಲಿನ ಕಗ್ಗಲಿಪುರಕ್ಕೂ ಸಹ ಇಲ್ಲಿಂದಲೇ ನೀರು ಸರಬರಾಜು ಆಗುತ್ತದೆ.

ಇನ್ನು ಕೃಷಿಗೆ ಅಗತ್ಯವಾದ ನೀರಿಗಾಗಿ ಮಳೆಯನ್ನು ಅವಲಂಬಿಸಬೇಕಾದ ಪರಿಸ್ಥಿತಿ ಇದೆ. ಇಳಿಜಾರಿನಿಂದ ಕೂಡಿರುವ ಈ ಪ್ರದೇಶದಲ್ಲಿ ಎರಡು ಕೆರೆಗಳು ಹರಿಯುವ ನೀರನ್ನು ನಿಲ್ಲುವಂತೆ ಮಾಡಲಾಗಿದ್ದರೂ ಬೇಸಾಯಕ್ಕೆ ಅಷ್ಟಾಗಿ ಉಪಯೋಗವಾಗುತ್ತಿಲ್ಲ. ಈ ಎರಡು ಕೆರೆಗಳು ಇತ್ತೀಚಿನ ದಿನಗಳಲ್ಲಿ ಕಾಲೋನಿಯ ಜನರಿಗೆ ಮಾರಕವಾಗಿ ಪರಿಣಮಿಸಿವೆ. ನೀರು ಕುಡಿಯಲು ಅರಣ್ಯದಿಂದ ಆನೆಗಳ ಹಿಂಡು ಇಲ್ಲಿ ಬರುವುದಲ್ಲದೇ, ಬೆಳೆದ ಬೆಳೆಗಳನ್ನು ನಾಶ ಮಾಡುತ್ತಿವೆ. ಹೀಗಾಗಿ ಬೆಳೆಗಳಲ್ಲದೇ, ಎಷ್ಟೋ ಬಾರಿ ಮನುಷ್ಯರೂ ಆನೆ ತುಳಿತಕ್ಕೆ ಒಳಗಾಗಿದ್ದಾರೆ. ೧೦ ವರ್ಷದಿಂದ ಬೆಳೆಗಳ ನಾಶದ ಜೊತೆ ಜೊತೆಗೆ ಭಯದಿಂದ ಬದುಕುವ ಪರಿಸ್ಥಿತಿ ಇಲ್ಲಿ ನಿರ್ಮಾಣವಾಗಿದೆ. ಅರಣ್ಯ ಇಲಾಖೆಯವರು ವಿದ್ಯುತ್ ಬೇಲಿಯನ್ನು ಹಾಕಿದ್ದರೂ ಸಹ ಆನೆಗಳ ಹಾವಳಿ ತಡೆಯಲಾಗುತ್ತಿಲ್ಲ. ಇತ್ತೀಚಿಗೆ ೧೦ ಆನೆಗಳು ಬೆಂಗಳೂರು ನಗರದ ಸಮೀಪದವರೆಗೂ ಬಂದಿರುವುದನ್ನು ಗಮನಿಸಬಹುದು. ಹೀಗಾಗಿ ಆನೆಗಳಿಂದ ಭಯದ ವಾತಾವರಣದಲ್ಲಿ ಜೀವನ ಸಾಗಿಸುತ್ತಿರುವ ಹಕ್ಕಿಪಿಕ್ಕಿಯರಿಗೆ ನೀರಿನ ಮೂಲವಾದ ಕೆರೆಗಳಿಂದಲೇ ಪ್ರಾಣಕ್ಕೆ ಅಪಾಯವಿರುವುದು ಒಂದು ವ್ಯಂಗವೇ ಸರಿ.

**ರಸ್ತೆಗಳು**

ಹಕ್ಕಿಪಿಕ್ಕಿಯರ ಕಾಲೋನಿಯಲ್ಲಿ ೪ ಬೀದಿಗಳು ಕಂಡು ಬಂದರೂ ಸಹ ಯಾವುದೇ ವಿಧವಾದ ರಸ್ತೆಗಳು ನಿರ್ಮಾಣವಾಗಿಲ್ಲ. ಕಾಲೋನಿಯ ಮುಖ್ಯರಸ್ತೆಯಿಂದ ಕಾಲೋನಿಯವರೆಗೂ ಕಲ್ಲಿನಿಂದ ಕೂಡಿದ್ದ ಮಣ್ಣಿನ ರಸ್ತೆಯನ್ನು ಹಾಕಲಾಗಿದೆ. ಆದರೆ ಕಾಲೋನಿಯಲ್ಲಿ ವ್ಯವಸ್ಥಿತವಾದ ಮಾರ್ಗ ಅಥವಾ ಮನೆಗಳು ನಿರ್ಮಾಣವಾಗಿಲ್ಲ. ಹೀಗಾಗಿ ಜನರು ಇಷ್ಟ ಬಂದ ಹಾಗೆ ಎಲ್ಲಾ ಮನೆಗಳು ಕಟ್ಟಿಕೊಂಡಿರುವುದು ಕಾಣಬಹುದು. ಬಹುತೇಕ ಕಾಲೋನಿಯ ರಸ್ತೆಗಳು ಮಣ್ಣಿನಿಂದ ಕೂಡಿದ ರಸ್ತೆಗಳಾಗಿವೆ. ಮಳೆಗಾಲದ ಓಡಾಟಕ್ಕೆ ಬೇಸರ ತರುವ ಪರಿಸ್ಥಿತಿಯನ್ನು ಕಾಣಬಹುದು. ರಸ್ತೆಗಳು, ಜನರು ವ್ಯವಸ್ಥಿತವಾದ ಜೀವನ ರೂಪಿಸಿಕೊಳ್ಳುವಲ್ಲಿ ಹಾಗೂ ಉತ್ತಮ ಆರೋಗ್ಯ ಕಾಪಾಡಿಕೊಳ್ಳುವಲ್ಲಿ ಸಹಕಾರಿಯಾಗುತ್ತವೆ. ರಸ್ತೆಗಳ ನಿರ್ಮಾಣದಿಂದ ವ್ಯವಸ್ಥಿತವಾದ ಕಾಲೋನಿಯಾಗಿ ಕಂಡು ಬರುವುದಲ್ಲದೆ ಉತ್ತಮ ಜೀವನ ನಿರ್ವಹಣೆಗೆ ಸಹಕಾರಿಯಾಗುತ್ತದೆ. ರಸ್ತೆಗಳ ನಿರ್ಮಾಣದಿಂದ ಉಳಿದ ವ್ಯವಸ್ಥೆಗಳೊಡನೆ ಉತ್ತಮ ಸಂಬಂಧವನ್ನು

ಹೊಂದಲು ಸಹಕಾರಿಯಾಗುವುದಲ್ಲದೆ ಒಳಚರಂಡಿ ವ್ಯವಸ್ಥೆಯಿಂದ ಕಾಲೋನಿಯ ಶುಚಿತ್ವವನ್ನು ಕಾಪಾಡಿಕೊಂಡಂತಾಗುತ್ತದೆ. ಆದರೆ ಇವುಗಳ ಯಾವ ಪರಿವೇ ಇಲ್ಲದೇ ಹಕ್ಕಿಪಿಕ್ಕಿಯರು ಕಾಲೋನಿಯಲ್ಲಿ ವಾಸಿಸುತ್ತಿರುವುದು ಶೋಚನೀಯವಾಗಿದೆ. ಜಿಲ್ಲಾ ಪಂಚಾಯತಿ, ಗ್ರಾಮ ಪಂಚಾಯತಿ ಈ ನಿಟ್ಟಿನಲ್ಲಿ ಇನ್ನು ಯಾವುದೇ ವಿಧವಾದ ಕ್ರಮಗಳನ್ನು ಕೈಗೊಳ್ಳದೇ ಇರುವುದು, ಕಾಲೋನಿಯ ಜನರನ್ನು ನೋಡುವ ಸ್ವಭಾವ ಬದಲಾಗಬೇಕಾಗಿದೆ. ಕಾಲೋನಿಯ ಜನರಿಗೂ ಉತ್ತಮ ಆರೋಗ್ಯದ ವ್ಯವಸ್ಥೆಯನ್ನು ಮಾಡಬೇಕಾದ ಸರಕಾರ ಈ ನಿಟ್ಟಿನಲ್ಲಿ ಕ್ರಮ ಕೈಗೊಂಡು ರಸ್ತೆಗಳನ್ನು ಅಭಿವೃದ್ಧಿಪಡಿಸಿ ವ್ಯವಸ್ಥಿತವಾದ ಕಾಲೋನಿಯನ್ನು ರೂಪಿಸಬೇಕಿದೆ.

### ಆರೋಗ್ಯ

ಗ್ರಾಮೀಣ ಪರಿಸರವೇ ನೈಜ ಭಾರತವಾಗಿದೆ ಎಂದು ನಂಬಿದ್ದ ಗಾಂಧೀಜಿಯವರು ಬಹುತೇಕ ಮಂದಿ ಗ್ರಾಮೀಣ ಜನರು ವಾಸಿಸುವ ಪ್ರದೇಶಗಳಲ್ಲಿ ಆರೋಗ್ಯ ಇಲಾಖೆಯವರು ಉತ್ತಮವಾಗಿ ಕೆಲಸ ನಿರ್ವಹಿಸಬೇಕಾಗಿದೆ ಎಂದಿದ್ದರು. ಆದರೆ ಬುಡಕಟ್ಟು ಸಮುದಾಯಗಳು ವಾಸಿಸುವ ಪರಿಸರವನ್ನೇ ಆರೋಗ್ಯ ಇಲಾಖೆ ಮರೆತಂತಿದೆ. ಸಾಮಾಜಿಕವಾಗಿ ಪ್ರತ್ಯೇಕ ಅಸ್ತಿತ್ವ ಕಾಪಾಡಿಕೊಂಡು ಬಂದಿರುವ ಈ ಸಮುದಾಯದ ಜನರು ಆರೋಗ್ಯ ಇಲಾಖೆಯ ಪರಿವೇ ಇಲ್ಲದೆ ಬೆಳೆದವರು. ತಮ್ಮ ಪಾರಂಪರಿಕ ಔಷಧ ಪದ್ಧತಿಯಿಂದಲೇ ಬೆರಗುಗೊಳಿಸುತ್ತಾರೆ. ಸರಕಾರದ ಕಾಯ್ದೆಗಳಿಂದಾಗಿ ಅರಣ್ಯ ಪ್ರವೇಶ ರದ್ದಾದ ನಂತರ, ಈ ನಾಟಿ ವೈದ್ಯ ಪದ್ಧತಿ ನಶಿಸುವ ಅಂತ ತಲುಪಿದೆ. ಹೀಗಾಗಿ ಈ ಜನರು ಈಗ ಇಂಗ್ಲೀಷ್ ಮಾತ್ರೆಗಳನ್ನು ಅವಲಂಬಿಸುವಂತಾಗಿದೆ. ಇಂದು ಈ ಸಮುದಾಯದ ಜನರು ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೆ ತೆರಳಿ ಚಿಕಿತ್ಸೆಯನ್ನು ಪಡೆಯುವ ಹಂತಕ್ಕೆ ತಲುಪಿದ್ದಾರೆ. ಹೀಗಾಗಿ ಈ ಸಮುದಾಯದ ಜನರಲ್ಲಿ ಬದಲಾದ ಆರೋಗ್ಯದ ಕಾಳಜಿಯನ್ನು ಗಮನಿಸಬಹುದು. ಆರೋಗ್ಯ ಇಲಾಖೆಯುದಿಂತಹ ಕಾಲೋನಿಗಳಿಗೆ ವಾರಕ್ಕೊಮ್ಮೆ ಭೇಟಿ ನೀಡಿ ಆರೋಗ್ಯದ ಬಗ್ಗೆ ವಿಶೇಷವಾದ ತಿಳುವಳಿಕೆ ಮೂಡಿಸುವುದರ ಜೊತೆಗೆ, ಆ ಸೌಲಭ್ಯವನ್ನು ಎಲ್ಲರೂ ಪಡೆಯುವಂತೆ ಮಾಡಬೇಕಿದೆ.

ಆರೋಗ್ಯ ಇಲಾಖೆಯು ಕಾಲೋನಿಯಲ್ಲಿ ಯಾವುದೇ ರೀತಿಯ ಸೌಲಭ್ಯಗಳನ್ನು ಕಲ್ಪಿಸಿದ ನಿದರ್ಶನಗಳೇ ಇಲ್ಲ. ಹೀಗಾಗಿ ಕಾಲೋನಿಯ ಜನರಿಗೂ ಆರೋಗ್ಯದ ಬಗ್ಗೆ ವಿಶೇಷವಾದ ತಿಳುವಳಿಕೆ ನೀಡಿ ಅಗತ್ಯವಾದ ಸೌಲಭ್ಯಗಳನ್ನು ಪಡೆದು ಕುಟುಂಬ ನಿಯಂತ್ರಣದ ಮೂಲಕ ಜೀವನ ಮಟ್ಟ ಸುಧಾರಣೆಯ ಕಡೆಗೆ ಇಂತಹ ಸಮುದಾಯಗಳನ್ನು ಸರಕಾರ ತೆಗೆದುಕೊಂಡು ಹೋಗಬೇಕಿದೆ.

### ಶಿಕ್ಷಣ

ಶಿಕ್ಷಣವು ಆರ್ಥಿಕ ಮತ್ತು ಸಾಮಾಜಿಕ ರಂಗಗಳಲ್ಲಿ ನಿಶ್ಚಿತ ಚಲನೆಯನ್ನುಂಟು ಮಾಡಿ ಜೀವನದ ಗುಣ ಮಟ್ಟವನ್ನು ಎತ್ತರಕ್ಕೊಯ್ಯುವ ಸಾಧನವಾಗಿದೆ. 'ದುರ್ಬಲ ವರ್ಗದವರನ್ನು ಮೇಲಕ್ಕೆತ್ತಲು ಶಿಕ್ಷಣ ಬಿಟ್ಟರೆ ಅನ್ಯ ಮಾರ್ಗವೇ ಇಲ್ಲೆನ್ನುತ್ತಾರೆ ಗಾಂಧೀಜಿ'. ಮನುಷ್ಯನು ಸುಖವಾಗಿ ಜೀವನ ನಡೆಸಬೇಕಾದರೆ

ಗಾಳಿ, ನೀರು, ಆಹಾರ, ಉಡುಪು, ವಸತಿ ಅವಶ್ಯಕ. ಆದರೆ ಬದಲಾಗುತ್ತಿರುವ ಪ್ರಪಂಚದ ಅರಿವು ಆ ಸಮಾಜದ ಅವಶ್ಯಕತೆಗಳು ಕಾಲದ ಮೌಲ್ಯ ಇವುಗಳನ್ನು ಅರ್ಥ ಮಾಡಿಕೊಳ್ಳಬೇಕಾದರೆ ಶಿಕ್ಷಣದ ಅವಶ್ಯಕತೆಯು ಮಾನವನಿಗೆ ಅತಿ ಮುಖ್ಯವಾಗಿರಬೇಕು. ಶಿಕ್ಷಣದಿಂದ ಮಾತ್ರ ಮನುಷ್ಯ ಸಮಾಜದಲ್ಲಿ ಮನುಷ್ಯನಾಗಿ ಬಾಳುವುದರ ಜೊತೆಗೆ ಉಳಿದ ಎಲ್ಲಾ ಅವಶ್ಯಕತೆಗಳಿಗಿಂತ ವಿಭಿನ್ನವಾಗಿರುತ್ತಾನೆ. ವಿದ್ಯೆಯು ಮನುಷ್ಯನಿಗೆ ಶ್ರೇಷ್ಠವಾದ ಸೌಂದರ್ಯವನ್ನು ಕಲ್ಪಿಸುತ್ತದೆ. ಶೋಷಿತ ಬುಡಕಟ್ಟು ಸಮುದಾಯವಾದ ಹಕ್ಕಿಪಿಕ್ಕಿಯರಿಗೆ ಶಿಕ್ಷಣ ಅಷ್ಟಾಗಿ ಲಭಿಸಿಲ್ಲ. ಇದಕ್ಕೆ ಅವರುಗಳ ಅಲೆಮಾರಿತನವೂ ಕಾರಣ ಎನ್ನಬಹುದು. ಶೋಷಣೆಯಿಂದ ಮುಕ್ತವಾಗಬೇಕಾದರೆ, ಎಗತ್ಯ ಶಿಕ್ಷಣದಿಂದ ಸಮುದಾಯ ಎಚ್ಚೆತ್ತುಕೊಳ್ಳಬೇಕು. ಎಂದು ಡಾ. ಅಂಬೇಡ್ಕರ್‌ರು ಶಿಕ್ಷಣದ ಮಹತ್ವದ ಕುರಿತು ಹೇಳುತ್ತಾರೆ.

ಅಪಾರ ಪಾರಂಪರಿಕ ಜ್ಞಾನಭಂಡಾರವನ್ನು ಹೊಂದಿರುವ ಹಕ್ಕಿಪಿಕ್ಕಿಯರು ಆಧುನಿಕ ಶಿಕ್ಷಣದಿಂದ ವಂಚಿತರಾಗಿದ್ದಾರೆ. ಈ ಶಿಕ್ಷಣದಿಂದ ಮಾನವನಲ್ಲಿರುವ ಆಂತರಿಕ ಶಕ್ತಿಗಳ ಹೊರ ಹೊಮ್ಮುವಿಕೆ ಸಾಧ್ಯವಾಗುತ್ತದೆ. ಇಲ್ಲಿ ಗಮನಿಸಬೇಕಾದದ್ದು ಆದಿ ಮಾನವನನ್ನು ಮಾನವನನ್ನಾಗಿ ಮಾಡಿ ತನ್ನ ಹಕ್ಕು ಮತ್ತು ಕರ್ತವ್ಯಗಳ ಕುರಿತು ಎಚ್ಚರಿಕೆ ಮೂಡಿಸುವಲ್ಲಿ ಶಿಕ್ಷಣದ ಪಾತ್ರ ದೊಡ್ಡದು. ಹೀಗಾಗಿ ಶಿಕ್ಷಣ ಪಡೆಯುವಲ್ಲಿ ದೊಡ್ಡ ನಗರದ ಸಮೀಪದಲ್ಲಿರುವ ಕಾಲೋನಿಯ ಜನರು ಬಹಳಷ್ಟು ಹಿಂದೆ ಬಿದ್ದಿದ್ದಾರೆ. ಕಾಲೋನಿಯ ಸಾಕ್ಷರತೆಯನ್ನು ಗಮನಿಸಿದರೆ ಸರಕಾರ ರೂಪಿಸುವ ಶೈಕ್ಷಣಿಕ ಕಾರ್ಯಯೋಜನೆಗಳು ಹಾಳೆಗಳಲ್ಲಿ ಮಾತ್ರ ಉಳಿಯುತ್ತವೆ ಎನ್ನದಲಿ ವಿಧಿಯಿಲ್ಲ. ಕಾಲೋನಿಯಲ್ಲಿ ಸರಕಾರ ಆರಂಭಿಸಿದ ಗಿರಿಜನ ಆಶ್ರಮ ಶಾಲೆ ಕುಂಟುತ್ತಾ ನಿಷ್ಪ್ರಯೋಜಕವಾಗಿ ಸಾಗುತ್ತಿದೆ.

ಗಿರಿಜನ ಆಶ್ರಮ ಶಾಲೆಯ ಸಿಬ್ಬಂದಿ ೬ ರಿಂದ ೭ ಜನ ಎಂದು ಸರಕಾರ ಘೋಷಿಸಿದೆ. ಇಬ್ಬರು ಬೋಧಕೇತರ ಸಿಬ್ಬಂದಿ ಸೇರಿ ಇಲ್ಲಿರುವವರು ೩ ಮಂದಿ ಮಾತ್ರ. ಆಶ್ರಮ ಶಾಲೆಯು ದಿನ ನಿತ್ಯವೂ ತೆರೆದಿರಬೇಕು ಹಾಗು ಅಗತ್ಯವಾಗಿ ವಿದ್ಯಾರ್ಥಿಗಳು ಅಲ್ಲಿಯೇ ವಾಸವಿರಬೇಕು. ಆದರೆ ಇಲ್ಲಿನ ವ್ಯವಸ್ಥೆಗಳೇ ಬೇರೆ. ಗಿರಿಜನ ಆಶ್ರಮಶಾಲೆ ಬೆಳಿಗ್ಗೆ ೧೦ ರಿಂದ ಸಂಜೆ ೬ ಗಂಟೆಗೆ ಮಾತ್ರ ಕೆಲಸ ನಿರ್ವಹಿಸುತ್ತಿರುವುದು ಶೋಚನೀಯ.

ಇನ್ನು ಆಶ್ರಯ ಶಾಲೆಯಲ್ಲಿನ ವಿದ್ಯಾರ್ಥಿಗಳ ಸಂಖ್ಯೆ ೫೦ ಮಂದಿ. ದಿನಕ್ಕೆ ೨ ಬಾರಿ ಊಟ ಮತ್ತು ಬೆಳಿಗ್ಗೆ ತಿಂಡಿ ನೀಡಲಾಗುತ್ತಿದ್ದರೂ ಪೌಷ್ಠಿಕಾಂಶ ಇಲ್ಲದ ತಿಳಿಸಾರು, ಮುದ್ದೆ, ಅನ್ನ ನೀಡಲಾಗುತ್ತಿದೆ. ಆಶ್ರಮಶಾಲೆಯ ತಿಂಡಿಗಳ ಪಟ್ಟಿಯಲ್ಲಿ ಮಾತ್ರ ವಿಶೇಷವಾದ ತಿಂಡಿಗಳನ್ನು ನೀಡುತ್ತಿರುವುದಾಗಿ ಬರೆದು ಹಾಕಿದ್ದಾರೆ. ವಾರಕ್ಕೊಮ್ಮೆ ಮೊಟ್ಟೆ, ಬಾಳೆಹಣ್ಣು ನೀಡುವಂತೆ ಸರಕಾರದ ಆದೇಶವಿದ್ದರೂ ತಿಂಗಳಿಗೊಮ್ಮೆಯೂ ಸಹ ನೀಡುತ್ತಿಲ್ಲ. ಅಧ್ಯಾಪಕರೇ ಇಲ್ಲದ ಆಶ್ರಮ ಶಾಲೆಗೆ ಅಡುಗೆ ಸಹಾಯಕರು ಇಬ್ಬರು, ಒಬ್ಬ ವಾರ್ಡನ್ ಮಾತ್ರ ಶಾಲೆಗೆ ಬರುತ್ತಾರೆ. ಸುಮಾರು ಆರು ವರ್ಷಗಳಿಂದ ಒಂದನೇ

ತರಗತಿಯಿಂದ ೪ನೇ ತರಗತಿಯವರೆಗೆ ಪಾಠ ಹೇಳಿಕೊಡಲು ಶಿಕ್ಷಕರಿಲ್ಲದೇ ಆರು ವರ್ಷಗಳಿಂದ ಈ ಶಾಲೆ ನಡೆದು ಬಂದಿದೆ. ಹೀಗಾಗಿ ಇಲ್ಲಿ ಮಕ್ಕಳು ಏನು ಕಲಿಯುತ್ತಾರೆ ಎಂಬುದೇ ಪ್ರಶ್ನೆಯಾಗಿದೆ.

ಶಿಕ್ಷಕರಿಗಾಗಿ ಪ್ರತ್ಯೇಕವಾದ ಮನೆಗಳನ್ನು ಸರಕಾರ ನಿರ್ಮಿಸಿದ್ದರೂ ಯಾರೂ ಇಲ್ಲಿ ನೆಲೆಸಿಲ್ಲ ಹಾಗು ಆಶ್ರಮ ಶಾಲೆಯ ಮಕ್ಕಳಿಗೆ ಪಾಠ ಹೇಳಿಕೊಡಲು ಯಾರೂ ಕಾಲೋನಿಗೆ ಬರುವುದಿಲ್ಲ. ಇನ್ನು ಮಕ್ಕಳು ಕಲಿಯಲು ಏನು ಮಾಡಬೇಕು ಎನ್ನುವುದೇ ಪ್ರಶ್ನೆಯಾಗಿದೆ. ಸರಕಾರದಿಂದ ಯೋಜನೆಗಳು ರೂಪಗೊಂಡರೂ ಅವು ಅನುಷ್ಠಾನಗೊಳ್ಳುವಲ್ಲಿ ವಿಫಲವಾಗುತ್ತಿವೆ. ಇಲ್ಲಿ ಕಲಿತ ಎಷ್ಟೋ ವಿದ್ಯಾರ್ಥಿಗಳು ಗಿರಿಜನ ಆಶ್ರಮ ಶಾಲೆಯ ಮೇಲೆ ಆಕ್ರೋಶ ವ್ಯಕ್ತ ಪಡಿಸಿದ್ದಾರೆ. ಸುಮಾರು ೧೦ ರಿಂದ ೧೫ ಜನ ವಿದ್ಯಾರ್ಥಿಗಳು ಬನ್ನೇರುಘಟ್ಟದ ಪ್ರೌಢಶಾಲೆಗೆ ಹೋಗುತ್ತಿದ್ದಾರೆ. ಈ ವಿದ್ಯಾರ್ಥಿಗಳಲ್ಲಿ ೧೦ ನೇ ತರಗತಿ ಓದುತ್ತಿರುವ ಶ್ರೀಕಾಂತ್ ಎನ್ನುವಾತ ಮಾತ್ರ ತನ್ನ ಸಮಸ್ಯೆಯನ್ನು ತೋಡಿಕೊಂಡ ರೀತಿ ಆಶ್ಚರ್ಯಕರವಾಗಿತ್ತು. ಅವನು 'ನಮ್ಮ ಆಶ್ರಮಶಾಲೆ ಏನೂ ಕಲಿಸಿಲ್ಲ. ಸುಮ್ಮನೆ ಊಟ ಹಾಕುತ್ತಾರೆ. ಅದು ಬರೀ ನೀರು ಸಾರು, ರಾಗಿ ಮುದ್ದೆ. ನಮಗೆ ಪಾಠ ಹೇಳಿಕೊಡುವುದಕ್ಕೆ ಮೇಷ್ಟ್ರು ಕೂಡಾ ಇಲ್ಲಿಗೆ ಬರುವುದಿಲ್ಲ ಸಾರ್. ನಾವು ಹಕ್ಕಿಪಿಕ್ಕಿಯರೆಂದರೆ ಕೀಳಾಗಿ ನೋಡುತ್ತಾರೆ ಸಾರ್. ದಯವಿಟ್ಟು ನಮ್ಮ ಕಾಲೋನಿಗೆ ಒಳ್ಳೆಯ ಮೇಷ್ಟ್ರುಗಳನ್ನು ಹಾಕಿಸಿ ನಮ್ಮನ್ನು ಓದುವಂತೆ ಮಾಡಿ ಸಾರ್' ಎಂದು ತನ್ನ ದುಃಖವನ್ನು ತೋಡಿಕೊಂಡನು.

ಇದು ಕಾಲೋನಿಯ ಆಶ್ರಮ ಶಾಲೆಯ ಕಾರ್ಯವೈಕರಿಯನ್ನು ತಿಳಿಸುತ್ತದೆ. ಬೆಂಗಳೂರು ನಗರದ ಸಮೀಪದಲ್ಲಿ ಇರುವ ಈ ಕಾಲೋನಿಗೆ ಮೂಲಭೂತವಾಗಿ ಅಗತ್ಯ ಶಿಕ್ಷಣವನ್ನು ಕೊಡುವ ಕೆಲಸ ತುರ್ತಾಗಿ ಆಗಬೇಕಿದೆ. ಹೀಗಾಗಿ ಸರಕಾರ ಶಿಕ್ಷಣವನ್ನು ಕಾಲೋನಿಯ ಜನರಿಗೆ ದೊರೆಕುವಂತೆ ಮಾಡಬೇಕಾದರೆ, ಕಾಲೋನಿಯ ಪರಿವೀಕ್ಷಣೆ ಮಾಡಿ ಶಿಕ್ಷಣವನ್ನು ಹಕ್ಕಿಪಿಕ್ಕಿಯರ ಅಭಿವೃದ್ಧಿಗೆ ಹಾಗು ಸಾಮಾಜಿಕ ಬದಲಾವಣೆಗೆ ಸ್ಪಂದಿಸುವಂತೆ ಮಾಡಬೇಕಾಗಿದೆ.

## ೨. ಸಾಮಾಜಿಕ ಸಂರಚನೆ

'ಸಮಾಜವೆಂದರೆ ಪರಸ್ಪರ. ವಿವಿಧ ಬಗೆಯ ಕುಟುಂಬ, ಕುಲ, ವೃಂದ, ಸಂಬಂಧವುಳ್ಳ ಜನತೆಯ ಸಮುದಾಯದ ಒಂದು ಆಂತರಿಕ ವ್ಯವಸ್ಥೆ.' ಹಕ್ಕಿಪಿಕ್ಕಿಯರಲ್ಲಿ ಸಾಮಾಜಿಕ ಸಂಘಟನೆಯು ಆದಿಮ ಕಾಲದಿಂದ ಬೆಳೆದು ಬಂದಿದೆ. ಯಾವುದೇ ಇತರ ಸಮುದಾಯಗಳ ಪ್ರಭಾವಕ್ಕೆ ಒಳಗಾಗದೇ, ತಮ್ಮ ಸಂಪ್ರದಾಯದಂತೆ ಜೀವನ ನಿರ್ವಹಿಸುವ ಬುಡಕಟ್ಟು ಸಮುದಾಯ ಇದಾಗಿದೆ. ಇಂತಹ ಸಂಘಟನೆಯು ಆದಿಮ ಕಾಲದಿಂದ ಮಾನವನು ದಿನ ನಿತ್ಯದ ಆಹಾರಕ್ಕಾಗಿ ಕಾಡು, ಮೇಡು, ಗುಡ್ಡಗಳನ್ನು ಸುತ್ತಾಡಿ ಪ್ರಾಣಿ, ಪಕ್ಷಿ, ಗಡ್ಡೆ, ಗೆಣಸು ತಿನ್ನುತ್ತಾ ಜೀವನ ಸಾಗಿಸುವ ಹಂತದಿಂದ ನಡೆದು ಬಂದಿದ್ದಾನೆ. ಬೇಟೆ ಮತ್ತು ಆಹಾರ ಸಂಗ್ರಹಣೆಯ ಮೂಲಕ ವ್ಯವಸ್ಥಿತವಾಗಿ ಸಂಘಟಿತವಾಗುತ್ತಾ ಒಂದು ಕಡೆಯಿಂದ

ಇನ್ನೊಂದು ಕಡೆಗೆ ವಲಸೆ ಹೋಗುತ್ತಾ ಜೀವನ ರೂಪಿಸಿಕೊಂಡು ಬರತೊಡಗಿದ ಸಮಯದಲ್ಲಿ ಅವರು ಶುದ್ಧ ಅಲೆಮಾರಿಗಳಾಗಿದ್ದರು. ಬೇಟೆಯಿಂದ ವ್ಯವಸಾಯಕ್ಕೆ ಮಾರ್ಪಡಾದ ನಂತರ ನೆಲೆ ನಿಂತು ಒಟ್ಟಾಗಿ ಬಾಳುವುದರೊಂದಿಗೆ ಮೂಲಭೂತವಾದ ಅವಶ್ಯಕತೆಗಳನ್ನು ಪೂರೈಕೆ ಮಾಡಿಕೊಳ್ಳುವುದರಿಂದ ತಮ್ಮದೇ ಆದ ಸಾಮಾಜಿಕ ವ್ಯವಸ್ಥೆಯನ್ನು ಕಾಲಾಂತರದಲ್ಲಿ ರುಪಿಸಿಕೊಂಡರು. ಈ ಜನರು ವಿಶೇಷವಾಗಿ ಹಳ್ಳಿಗಳ ಮತ್ತು ನಗರದ ಲಕ್ಷಣಗಳನ್ನು ಸಮ್ಮಿಳಿಸಿಕೊಂಡು ಬದಲಾದ ವ್ಯವಸ್ಥೆಯಲ್ಲಿ ವ್ಯವಸ್ಥಿತವಾದ ಸಂರಚನೆಯನ್ನು ಗುರುತಿಸಿಕೊಂಡರು.

ಕಾಲೋನಿಯು ರೂಪಗೊಂಡ ಆರಂಭದಲ್ಲಿ ಆರಂಭದ ಹಂತದಲ್ಲಿ ಸಾಮಾಜಿಕ ವ್ಯವಸ್ಥೆಯು ಮಾತೃ ಪ್ರಧಾನವಾಗಿದ್ದು, ಇಂದಿಗೂ ಸಹ ಮಾತೃ ಪ್ರಧಾನ್ಯತೆಯನ್ನು ಉಳಿಸಿಕೊಂಡು ಬಂದಿರುವುದು ಹಕ್ಕಿಪಿಕ್ಕಿಯರ ವಿಶೇಷತೆ. ಅವಿಭಕ್ತ  ಕುಟುಂಬವನ್ನು ಹೊಂದಿದ ಈ ಜನರು, ಕುಟುಂಬದ ಸದಸ್ಯರ ಸಂಖ್ಯೆ ಹೆಚ್ಚುತ್ತಾ ಬಂದಂತೆ ವಿಭಕ್ತ ಕುಟುಂಬಗಳಾಗಿ ವಿಂಗಡಣೆಗೊಂಡಿದ್ದಾರೆ. ಹಿರಿಯರು ಗಳಿಸಿದ ಖ್ಯಾತಿಯನ್ನು ಉಳಿಸಿಕೊಳ್ಳದೆ ಸಾಮಾಜಿಕ ಬದಲಾವಣೆಯನ್ನು ಬಯಸಿರುವುದು ವಾಸ್ತವವಾಗಿದೆ. ಅಲೆಮಾರಿಗಳಾದ ಈ ಜನರು ಇನ್ನು ಅಲೆಮಾರಿತನವನ್ನು ಸಂಪೂರ್ಣವಾಗಿ ಬಿಡದೇ ಇರುವುದು ಕಂಡುಬರುತ್ತದೆ.

ಸುತ್ತಲ ಸಮುದಾಯಗಳ ಒಡನಾಟದಿಂದ ಇವರ ಸಂಪ್ರದಾಯ, ಧಾರ್ಮಿಕತೆ, ಭಾಷೆ, ಆಚರಣೆಗಳಲ್ಲಿ ಸಾಕಷ್ಟು ಬದಲಾವಣೆಗಳಾಗಿವೆ. ಅಲೆಮಾರಿಗಳಾಗಿದ್ದಾಗ ಡೇರೆಗಳನ್ನು , ಗುಡಿಸಲುಗಳನ್ನು ವಾಸಸ್ಥಳವನ್ನಾಗಿ ಮಾಡಿಕೊಂಡಿದ್ದ ಇವರುಗಳು ನೆಲೆಯೂರಿದ ಮೇಲೆ ಅನಿವಾರ್ಯವಾಗಿ ಮನೆಗಳನ್ನು ತಾವೇ ಕಟ್ಟಿಕೊಂಡು ನಿರ್ದಿಷ್ಟ ಪ್ರದೇಶದಲ್ಲಿ ವಾಸವಾಗಿದ್ದಾರೆ. ಇನ್ನು ಕಾಲೋನಿಯಲ್ಲಿ ಗುಡಿಸಲು, ಹೆಂಚಿನ ಮನೆಗಳೇ ಹೆಚ್ಚು ಮತ್ತು ಮಾಳಿಗೆ ಮನೆಗಳು ಕಡಿಮೆ ಎನ್ನಬಹುದು. ಅವು ಸರಕಾರ ನಿರ್ಮಿಸಿ ಕೊಟ್ಟವುಗಳಾಗಿವೆ. ಆಧುನಿಕತೆ ಹಕ್ಕಿಪಿಕ್ಕಿಯರ ಮೇಲೆ ಪ್ರಭಾವ ಬೀರಿದರೂ ಸಹ ಇನ್ನು ಈ ಜನರಲ್ಲಿ ಗ್ರಾಮೀಣ ಪರಿಸರದ ನರುಗಂಪು ಹೋಗಿಲ್ಲ. ಹೀಗಾಗಿ ಹಕ್ಕಿಪಿಕ್ಕಿಯರು ವಾಸಿಸುವ ಕಾಲೋನಿಯ ಪರಿಸರ ಇನ್ನು ಬಹುಮಟ್ಟಿಗೆ ಪಾರಂಪರಿಕವಾಗಿರುವುದನ್ನು  ಕಾಣಬಹುದು.

ಬದಲಾದ ವ್ಯವಸ್ಥೆಯಲ್ಲಿ ಕಾಲೋನಿಯಲ್ಲಿ ಯಾವುದೇ ರೀತಿಯ ಗುಡಿ, ದೇವಸ್ಥಾನಗಳು ಕಂಡು ಬರುವುದಿಲ್ಲ. ತನ್ನ ಎಲ್ಲಾ ಸಂಪ್ರದಾಯಗಳು ಬಹುವಾಗಿ ಕಣ್ಮರೆಯಾಗುತ್ತಾ ಬಂದಿವೆ. ಸಂಪ್ರದಾಯಗಳು, ನ್ಯಾಯತೀರ್ಮಾನ, ಹಬ್ಬಗಳು, ಆಚರಣೆಗಳು ಸಾಕಷ್ಟು ಮಹತ್ವವನ್ನು ಕಳೆದುಕೊಂಡಿವೆ. ಕಾಲೋನಿಯಲ್ಲಿ ಎಷ್ಟೋ ಜನರು ಕನ್ನಡವನ್ನು ಮಾತೃ ಭಾಷೆಯಾಗಿ ಪರಿಗಣಿಸುವವರಾಗಿದ್ದಾರೆ. ತಮ್ಮ ವೇಷ ಭೂಷಣಗಳು, ಆಹಾರ ಪದ್ಧತಿ ಆಚರಿಸುವ ಹಬ್ಬಗಳು ಸುತ್ತಲ ಹಳ್ಳಿಗಳ ಪ್ರಭಾವ ಎದ್ದು ಕಾಣುತ್ತದೆ. ಈ ಬದಲಾವಣೆಗಳು ಸಾಮಾನ್ಯವಾದರೂ ಸಮುದಾಯದ ಹಿರಿಯರು ಬಹಳಷ್ಟು ಮಂದಿ ಇನ್ನೂ ತಮ್ಮ ತಲೆಯ ಮುಡಿಯ (ಕೂದಲನ್ನು)ನ್ನು ಜಡೆ ಕಟ್ಟುವುದು ಬಿಡದೆ ಉಳಿಸಿಕೊಂಡು ಬಂದಿರುವುದು ವಿಶೇಷವಾಗಿದೆ.

ಕಾಲೋನಿಯಲ್ಲಿ ೧೦೨ ಕುಟುಂಬಗಳಿದ್ದರೂ ಸಹ ಇಲ್ಲಿನ ವ್ಯವಸ್ಥೆಯಲ್ಲಿರುವ ಭಿನ್ನತೆಯೆಂದರೆ, ಯಾವುದೇ ರೀತಿಯ ಅಂಗಡಿ, ಹೋಟೆಲ್‌ಗಳು ಇಲ್ಲಿ ಕಾಣಬರುವುದಿಲ್ಲ. ಸಮುದಾಯದ ಜನರು ಅಗತ್ಯ ವಸ್ತುಗಳನ್ನು ಪಡೆಯಬೇಕಾದರೆ ಪಕ್ಕದ ಹಳ್ಳಿಗಳಿಗೆ ಹೋಗಲೇಬೇಕು. ಹೀಗಾಗಿ ಈ ಹಳ್ಳಿಗಳ ಪ್ರಭಾವವು ಹೆಚ್ಚಾಗಿವೆ.

ಹಕ್ಕಿಪಿಕ್ಕಿಯರು ವಾಸಿಸುವ ನೆಲೆಗಳು ಹಳ್ಳಿಗಳಿಂದ ದೂರವೇ ಉಳಿದಿದ್ದರೂ ಸಹ ಇವರುಗಳು ವಾಸಿಸುವ ಸ್ಥಳಗಳಿಗೆ ಪ್ರತ್ಯೇಕವಾದ ಹೆಸರುಗಳಿಲ್ಲ. ತಾವುಗಳು ವಾಸಿಸುವ ಸುತ್ತಲಿನ ಅವಲಂಬಿತ ಪರಿಸರದ ಹಳ್ಳಿಯ ಹೆಸರಿನಿಂದಲೇ ಕಾಲೋನಿಯನ್ನು ಗುರುತಿಸಿಕೊಳ್ಳುತ್ತಾರೆ. ಹೀಗಾಗಿ ಹಕ್ಕಿಪಿಕ್ಕಿಯರು ಇತರ ಸಮುದಾಯದಲ್ಲಿ ಬೆರೆಯದೇ ಪ್ರತ್ಯೇಕವಾಗಿ ವಾಸಿಸುವುದರಲ್ಲಿ ಅವರಿಗೆ ವಿಶೇಷ ಆಸಕ್ತಿ ಇರುವುದು ತಿಳಿದುಬರುತ್ತದೆ. ತಮ್ಮ ಮನೆಗಳನ್ನು ಕಲ್ಲು, ಮಣ್ಣಿನಿಂದ ಗೋಡೆಗಳನ್ನು ಕಟ್ಟಿ ಹೆಂಚಿನಿಂದ ಜೋಡಿಸಿದ್ದಾರೆ. ನಡುಮನೆಯ ಎಡಕ್ಕೆ ಅಡುಗೆ ಮನೆಯನ್ನು, ಬಾಗಿಲಿನ ಎದುರಿಗೆ ಕುಳಿತುಕೊಳ್ಳಲು ಜಗಲಿಯನ್ನು ನಿರ್ಮಿಸಿಕೊಂಡಿದ್ದಾರೆ. ಗುಡಿಸಲು, ಮನೆಗಳ ಸುತ್ತಲೂ ಬೇಲಿಯನ್ನು ಹಾಕಿಕೊಂಡಿದ್ದಾರೆ. ಬೇಲಿಯ ಒಳಗೆ ತೆಂಗಿನ ಸಸಿಗಳನ್ನು ಸಹ ನೆಟ್ಟಿದ್ದಾರೆ.

ಕಾಲೋನಿಯಲ್ಲಿ ಸುತ್ತಲಿನ ಸಮುದಾಯಗಳ ಹಳ್ಳಿಗಳಲ್ಲಿದ್ದಂತೆ ನಾಗರಕಟ್ಟೆಯನ್ನು ನಿರ್ಮಿಸಿಕೊಂಡಿದ್ದಾರೆ. ಈ ನಾಗರಕಟ್ಟೆಯು ೨೦ ಅಡಿ ಉದ್ದ ಹಾಗು ೧೨ ಅಗಲದ ೪ ಅಡಿ ಎತ್ತರದ ಕಟ್ಟೆಯಲ್ಲಿ ಬೇವಿನಮರ, ರಾಗಿಮರ ಮತ್ತು ನಾಗರಕಲ್ಲುಗಳನ್ನು ಪ್ರತಿಷ್ಠಾಪಿಸಿದ್ದಾರೆ. ಈ ಹಿಂದೆ ಈ ಕಟ್ಟೆಯ ಮೇಲೆ ಕುಳಿತು ನ್ಯಾಯ ತೀರ್ಮಾನ ಮಾಡಲಾಗುತ್ತಿತ್ತು. ಸಾಮಾಜಿಕ ಸಂಘಟನೆಯಲ್ಲಿ ಹಕ್ಕಿಪಿಕ್ಕಿಯರು ಇಂದು ಹಳ್ಳಿಗಳ ವಾತಾವರಣವನ್ನೇ ಸೃಷ್ಟಿಸಿಕೊಂಡು, ಅವರುಗಳಲ್ಲಿಯೇ ಗುಂಪುಗಳಾಗಿ ಪ್ರತಿಯೊಂದು ಆಗು ಹೋಗುಗಳಿಗೆ ಅವರುಗಳೇ ಹೋರಾಟ ಮಾಡಿಕೊಳ್ಳುವಂತಾಗಿದ್ದಾರೆ. ಸಮುದಾಯದ ಅನೇಕರು ಪಕ್ಕದ ಹಳ್ಳಿಗಳಲ್ಲಿ ಕೆಲಸಗಳಿಗೆ ಹೋಗುವುದರಿಂದ ಅನೇಕ ಬಾರಿ ಜಗಳ ಕಿತ್ತಾಟಗಳಲ್ಲಿ ನ್ಯಾಯ ತೀರ್ಮಾನಗಳು ಈ ಹಳ್ಳಿಗಳ ನಾಯಕರುಗಳಿಂದಲೇ ಆಗುತ್ತಿವೆ. ಹಳ್ಳಿಗಳಲ್ಲಿ ಮನೆ ಕೆಲಸ ಮಾಡುವುದರಿಂದ ಹಣದ ಸಹಾಯ ದೊರೆಯುವುದು. ಇದರಿಂದ ಈ ಜನರು ಇನ್ನು ಸಾರಾಯಿ ಕುಡಿಯುವುದನ್ನು ಬಿಟ್ಟಿಲ್ಲ. ಸಂಜೆಯಾದರೆ ಕಾಲೋನಿಯಲ್ಲಿ ಒಬ್ಬ ಏಜೆಂಟರನ್ನು ನೇಮಿಸಿ ಸಾರಾಯಿಯನ್ನು ಮಾರಾಟ ಮಾಡುವ ವ್ಯವಸ್ಥೆ ಮಾಡಿದ್ದಾರೆ. ಕುಡಿಯಲು ಇಲ್ಲಿ ಸಾಲದ ಸೌಲಭ್ಯ ಹೆಚ್ಚು. ಹೀಗಾಗಿ ಕಾಲೋನಿಯ ಬದಲಾದ ವ್ಯವಸ್ಥೆಯಲ್ಲಿ ಸಂಪೂರ್ಣ ಹಳ್ಳಿಯು ಅಲ್ಲದ ಹಾಗು ಬುಡಕಟ್ಟು ಲಕ್ಷಣಗಳನ್ನು ಕ್ರಮೇಣ ಕಳೆದುಕೊಳ್ಳುತ್ತಿರುವುದು ಕಂಡುಬರುತ್ತಿದೆ.

### ೩. ಅಲೆಮಾರಿ ಬದುಕಿನ ಸಂಕ್ಷಿಪ್ತ ಇತಿಹಾಸ

ಮೂಲತಃ ಹಕ್ಕಿಪಿಕ್ಕಿಯರು ಅಲೆಮಾರಿ ಬುಡಕಟ್ಟು ಸಮುದಾಯದವರಾಗಿದ್ದು, ತಮ್ಮ ಜೀವನ ನಿರ್ವಹಣೆಯಲ್ಲಿ ಅಲೆಮಾರಿತನವನ್ನು ಅವಲಂಬಿಸಿರುವುದು ಸಾಮಾನ್ಯವಾಗಿದೆ. ಈ ಸಮುದಾಯದ

ಜನರು ಒಂದೆಡೆ ನೆಲೆನಿಲ್ಲುವುದು ಬಹು ಕಷ್ಟದ ಕೆಲಸ. ಸುಮಾರು ೨೦೦ ವರ್ಷಗಳ ಹಿಂದೆ ವ್ಯಾಪಾರ ಮಾಡುತ್ತಾ ಉತ್ತರ ಭಾರತದಿಂದ ವಲಸೆ ಬಂದವರಾಗಿದ್ದಾರೆ. ಕರ್ನಾಟಕದಲ್ಲಿ ಇವರ ಅಲೆಮಾರಿತನ ಸುಮಾರು ವರ್ಷಗಳಿಂದ ನಡೆಯುತ್ತಾ ಬಂದಿದೆ. ಆರಂಭದಲ್ಲಿ ಜಿಗಣೆ, ಹಾರಗಡ್ಡೆ, ಆನೇಕಲ್ ತಾಲೂಕುಗಳಲ್ಲಿ ಗುಡಾರ ಮತ್ತು ಗುಡಿಸಲುಗಳನ್ನು ನಿರ್ಮಿಸಿಕೊಂಡು ಪ್ರತ್ಯೇಕವಾಗಿ ಹಳ್ಳಿಗಳಿಂದ ಮತ್ತು ಗ್ರಾಮಗಳಿಂದ ದೂರವೇ ವಾಸಿಸುತ್ತಿದ್ದರು.

ಅಲೆಮಾರಿಗಳಾಗಿ ಹಕ್ಕಿಪಿಕ್ಕಿಯರು ವ್ಯಾಪಾರ ಮಾಡುತ್ತಾ ತಮಿಳುನಾಡಿನ ಡಂಕಣೆಕೋಟೆ, ಪೆರಂಡಫಲ್ಲಿ ಕಾಡುಗಳಲ್ಲಿ ಹಾಗು ಕೃಷ್ಣಗಿರಿ, ಕಾರಿಮಂಗಲದಂತಹ ಅರಣ್ಯದ ಸಮೀಪದಲ್ಲಿ ಸುಮಾರು ವರ್ಷಗಳ ಕಾಲ ವಾಸವಾಗಿದ್ದರು. ನಂತರ ವ್ಯಾಪಾರ ಉದ್ದೇಶದಿಂದ ಮೈಸೂರಿಗೆ ಬಂದರು. ಸುಮಾರು ವರ್ಷಗಳ ಕಾಲ ಮೈಸೂರಿನಲ್ಲಿ ವಾಸವಾಗಿದ್ದು, ಅಲ್ಲಿಂದ ಮಂಡ್ಯ ಜಿಲ್ಲೆಯಲ್ಲಿ ವಾಸಿಸತೊಡಗಿದರು. ತಮ್ಮ ವ್ಯಾಪಾರ ಉದ್ದೇಶಕ್ಕೆ ಹೊಂದಿಕೆ ಕಾಣುವಂತಹ ಪರಿಸರದಲ್ಲಿ ಸುಮಾರು ವರ್ಷಗಳ ಕಾಲ ನೆಲೆ ನಿಂತರು. ಮಂಡ್ಯ ಜಿಲ್ಲೆಯ ಹಲವು ರಾಜಕೀಯ ನಾಯಕರು ಇವರನ್ನು ಗುರುತಿಸತೊಡಗಿದರು. ಅಲ್ಲಿನ ನಾಯಕರು ಜಮೀನು ಕೊಡಿಸುವುದಾಗಿ ಭರವಸೆ ನೀಡಿ ಮೋಸ ಮಾಡಿದರು. ನಂತರದ ದಿನಗಳಲ್ಲಿ ಮಂಡ್ಯ ಜಿಲ್ಲೆಯ ಮಳವಳ್ಳಿಯಲ್ಲಿ ವಾಸಿಸತೊಡಗಿದರು. ಇಲ್ಲಿನ ಜನರು ಈ ಸಮುದಾಯದ ಜನರನ್ನು ಕೋಳಿ ಹಿಡಿಯುವವರು, ಕಳ್ಳತನ ಮಾಡುವವರೆಂದು ತಿಳಿದು ಅಲ್ಲಿಂದ ಓಡಿಸಿದರು. ಹೀಗೆ ಅಲೆಮಾರಿಯಾಗಿ ಜೀವಿಸುತ್ತಾ ಮಳವಳ್ಳಿಯಿಂದ ಕೆಂ.ಎಂ.ದೊಡ್ಡಿಯಲ್ಲಿ ನೆಲೆ ನಿಲ್ಲಲು ಪ್ರಾರಂಭಿಸಿದರು. ಮೂರು ತಿಂಗಳ ಕಾಲ ಇಲ್ಲಿನ ಪರಿಸರದಲ್ಲಿ ವಾಸವಾಗಿದ್ದರು. ಈ ಜನರು ವಾಸಿಸುತ್ತಿದ್ದ ಪಕ್ಕದ ಗ್ರಾಮವಾದ ಅನ್ ಕೇರಿಯುಲ್ಲಿ ಜಮೀನ್ದಾರನು ೫೦೦ ಎಕರೆ ಭೂಮಿಯನ್ನು ಸಾಗುವಳಿ ಮಾಡುತ್ತಿದ್ದ. ಇವರ ತೋಟದಲ್ಲಿ ಕೂಲಿ ಮಾಡಲು (ಕೆಲಸ ಮಾಡಲು) ಅನುವುಮಾಡಿಕೊಟ್ಟನು. ಅದೇ ಸಮಯದಲ್ಲಿ ಬುಡಕಟ್ಟು ಸಮುದಾಯಕ್ಕೆ ಸರಕಾರದ ವತಿಯಿಂದ ಹಲವು ಸೌಲಭ್ಯಗಳನ್ನು ನೀಡುತ್ತಿರುವುದು ಮನಗಂಡು ಈ ಜನರಿಗೆ ಭೂಮಿಯನ್ನು ಕೊಡಿಸುವುದಾಗಿ ಹೇಳಿ ಎಲ್ಲರಿಂದಲೂ ಹಣವನ್ನು ಪಡೆದು ಈ ಜನರಿಗೆ ಮೋಸ ಮಾಡಿದರು.

ಹಲವು ವರ್ಷಗಳ ನಂತರ ಅನ್‌ಕೇರಿಯ ಸಮೀಪದಲ್ಲಿರುವ ತುಪನಕೇರಿ ಗ್ರಾಮದಲ್ಲಿ ವಾಸಿಸುತ್ತಿರುವಾಗ, ಪಕ್ಕದಲ್ಲಿಯೇ ಸರ್ಕಾರಿ ಜಮೀನು ಇರುವುದಾಗಿ ತಿಳಿಯಿತು, ಇದರಿಂದ ಸ್ಥಳೀಯ ನಾಯಕ ಸೀತಾರಾಂ ಎಂಬುವವರು, ಈ ಸ್ಥಳದ ಬಗ್ಗೆ ತಿಳಿದು ಹಕ್ಕಿಪಿಕ್ಕಿಯರಿಗೆ ಕೊಡಿಸುವುದಕ್ಕಾಗಿ ಪ್ರಯತ್ನಿಸ ತೊಡಗಿದರು. ಆ ಸ್ಥಳದಲ್ಲಿನ ಸುತ್ತಲಿನ ರೈತರು ಸರ್ಕಾರಿ ಜಮೀನಲ್ಲಿ ಬೆಳೆಗಳನ್ನು ಬೆಳೆದಿದ್ದರು. ಈ ಸಂದರ್ಭದಲ್ಲಿ ಭೂಮಿಯನ್ನು ಪಕ್ಕಿಪಿಕ್ಕಿ ಸಮುದಾಯಕ್ಕೆ ಕೊಡಿಸುವುದಾಗಿ ತಿಳಿದ ಮೇಲೆ ಸುತ್ತಲಿನ ರೈತರು ಪಕ್ಕಿಪಿಕ್ಕಿಯರನ್ನು ಹೊಡೆದು ಅಲ್ಲಿಂದ ಬೇರೆ ಕಡೆಗೆ ಹೋಗುವಂತೆ ಹಿಂಸೆ ಮಾಡತೊಡಗಿದರು. ಸರ್ಕಾರದ ಭೂಮಿಯ ಸಮೀಪಕ್ಕೆ ಹಕ್ಕಿಪಿಕ್ಕಿಯರು ಹೋದರೆ ಸುತ್ತಲಿನ ರೈತರು ಹೊಡೆಯಲು ಬಂದ

ಪರಿಣಾಮವಾಗಿ ರಾತ್ರೋರಾತ್ರಿ ಆ ಸ್ಥಳವನ್ನು ಬಿಟ್ಟು ಪರ್ಯಾಯ ಸ್ಥಳವನ್ನು ಹುಡುಕಿಕೊಂಡು ಹೊರಟ ಸಮುದಾಯದ ಜನರು ಬಂದು ಸೇರಿದ್ದು ಬನ್ನೇರುಘಟ್ಟದ ಕಾಡಿನ ಹಿಂಭಾಗದ ಗುಡ್ಡಗಾಡು ಪ್ರದೇಶಕ್ಕೆ. ಹೀಗೆ ಅನೇಕ ಗ್ರಾಮಗಳಿಂದ ಹಿಂಸೆಯನ್ನು ಅನುಭವಿಸುತ್ತಾ ಕೊನೆಗೆ ಬಂದು ಸೇರಿದ್ದು ಬನ್ನೇರುಘಟ್ಟದ ಭೂತಾನಹಳ್ಳಿ ಪರಿಸರಕ್ಕೆ. ಇಂದಿಗೂ ಸಹ ಈ ಸ್ಥಳದಲ್ಲಿ ಖಾಯಂ ಆಗಿ ಇವರು ನೆಲೆ ನಿಂತಿದ್ದಾರೆ. ಆದರೆ ಇತ್ತೀಚಿನ ದಿನಗಳಲ್ಲಿ ಇಲ್ಲಿಯು ಸಹ ಅರಣ್ಯ ಇಲಾಖೆಯವರಿಂದ ಕಿರುಕುಳ ಪ್ರಾರಂಭವಾಗಿದೆ.

ಕಾಲೋನಿಯು ಪ್ರಾರಂಭದಲ್ಲಿ ಕುರುಚಲು ಕಾಡು ಬಿದಿರು ಮರಗಳಿಂದ ತುಂಬಿದ ಕಡಿದಾದ ಬೆಟ್ಟವಾಗಿದ್ದಿತು. ಇಲ್ಲಿ ಪ್ರಾಣಿ, ಪಕ್ಷಿಗಳು, ಹೇರಳವಾಗಿ ದೊರೆಯುತ್ತಿದ್ದರಿಂದ ಇಲ್ಲಿ ನೆಲೆಸಿದ ಇವರು ಸುತ್ತಲ ಗ್ರಾಮಗಳಿಂದ ಅನೇಕ ತೊಂದರೆಗಳನ್ನು ಅನುಭವಿಸಿದರು. ಆ ಸಮಯದಲ್ಲಿ ಎಲ್ಲಾ ಜನರು (ಗಂಡಸರು, ಹೆಂಗಸರು, ಮುದಕರು, ಮಕ್ಕಳು) ವಿಧಾನಸೌಧಕ್ಕೆ ಬಂದು ಸಮಸ್ಯೆಗಳನ್ನು ನಿವೇದಿಸಿದ ನಂತರ ಡಿ. ಬಿ. ರಾಚಯ್ಯನವರು ತಕ್ಷಣವೇ ಈ ಕಾಲೋನಿಯ ಪರಿಸರಕ್ಕೆ ಭೇಟಿ ನೀಡಿ ಪರಿಸ್ಥಿತಿಯನ್ನು ಅವಲೋಕಿಸಿದರು. ಇದರ ಪರಿಣಾಮವಾಗಿ ಕೆಲವೇ ದಿನಗಳಲ್ಲಿ ಬಸವಲಿಂಗಪ್ಪನವರು ಮತ್ತು ಅರಸುರವರು ಈ ಸಮುದಾಯವನ್ನು ಅಭಿವೃದ್ಧಿಯ ಪ್ರಕ್ರಿಯೆಗೆ ತರುವ ಪ್ರಯತ್ನ ಮಾಡಿದರು. ಇದರ ಫಲವಾಗಿ ಸಮುದಾಯದ ಸಾಮಾಜಿಕ-ಆರ್ಥಿಕ ಸ್ಥಿತಿ ಉತ್ತಮಗೊಳ್ಳುವಂತಾಯಿತು. ಇದರ ಪರಿಣಾಮವಾಗಿ ಇವರ ಸಹಜ ಅಲೆಮಾರಿತನಕ್ಕೆ ಒಂದು ತೆರೆ ಬಿದ್ದು ಸ್ಥಿರವಾಗಿ ನೆಲೆ ನಿಲ್ಲಲು ಸಾಧ್ಯವಾಯಿತು.

ಬನ್ನೇರುಘಟ್ಟದ ಪರಿಸರದಲ್ಲಿನ ಸರ್ಕಾರದ ದರ್ಕಾಸ್ತು ಭೂಮಿಯನ್ನು ಸಮುದಾಯದ ಜನರಿಗಾಗಿ ೩೫೦ ಎಕರೆ ಭೂಮಿಯನ್ನು ಹಂಚಿಕೆ ಮಾಡಿದರು. ಬಸವಲಿಂಗಪ್ಪನವರು ಪ್ರತಿ ಕುಟುಂಬಕ್ಕೆ ೪ ಎಕರೆ, ಭೂಮಿ, ವ್ಯವಸಾಯದ ಸಾಮಾಗ್ರಿಗಳಾದ ರಾಸುಗಳು, ನೇಗಿಲು, ಕಾಳುಗಳು ಸರ್ಕಾರದ ವತಿಯಿಂದ ದೊರೆಯುವಂತೆ ಮಾಡಿದರು. ಇದರಿಂದ ವ್ಯವಸಾಯ ಪ್ರಾರಂಭಿಸಿದ ಜನರು ತಮ್ಮ ಜೀವನಕ್ಕೆ ಪರ್ಯಾಯ ಮಾರ್ಗ ಕಂಡುಕೊಳ್ಳತೊಡಗಿದರು. ಸರಕಾರದ ಯೋಜನೆಗಳಿಂದ ಮನೆಗಳನ್ನು ನಿರ್ಮಿಸಿಕೊಳ್ಳ ತೊಡಗಿದರು. ಈ ಪರಿಸರದ ವ್ಯವಸ್ಥೆಯ ಬದಲಾವಣೆಗೆ ಅಡಿಪಾಯ ಹಾಕಿದವರು ಅರಸುರವರೆಂದು ಇಂದಿಗೂ ಹಕ್ಕಿಪಿಕ್ಕಿಯರು ನೆನೆಯುತ್ತಾರೆ.

ಕಾಲೋನಿಯ ನಿವಾಸಿಗಳು ತಿಳಿಸುವಂತೆ ೩೫೦ ಎಕರೆ ಭೂಮಿಯು ಕಲ್ಲುಗಳಿಂದ ತುಂಬಿದ್ದು, ಅರಸು ರವರ ಆದೇಶದ ಮೇರೆಗೆ ೫ ದೊಡ್ಡ ಬುಲ್‌ಡೋಜರ್‌ಗಳು ಬಂದು ಭೂಮಿಯನ್ನು ಸಮತಟ್ಟಾಗಿ ಮಾಡಿದವು. ಇದರಿಂದ ಭೂಮಿಯು ವ್ಯವಸಾಯಕ್ಕೆ ಅನುಕೂಲವಾಯಿತು. ವ್ಯವಸಾಯ ಮಾಡಲು ಸರ್ಕಾರದ ವತಿಯಿಂದ ಸೌಲಭ್ಯಗಳು ದೊರೆತವು. ಇದರಿಂದ ವ್ಯವಸಾಯ ಪ್ರಾರಂಭಿಸಿದ ನಾವು ನಮ್ಮ ಜೀವನಕ್ಕೆ ಪರ್ಯಾಯ ಉದ್ಯೋಗ ಹಾಗೂ ಆದಾಯದ ಮಾರ್ಗವನ್ನು ಕಂಡುಕೊಂಡಿದ್ದೇವೆ ಎನ್ನುತ್ತಾರೆ.

ಈ ಪರಿಸರದಲ್ಲಿ ೩೦ ವರ್ಷಗಳು ವ್ಯವಸಾಯ ಮಾಡಿಕೊಂಡು ಜೀವನ ಸಾಗಿಸಿದ್ದ ಇವರು ೫೦ ರಿಂದ ೬೦ ಕಂಡಗ ರಾಗಿ ಬೆಳೆಯುತ್ತಿದ್ದರು. ಇದರ ಜೊತೆಗೆ ಬೇಟೆಯನ್ನು ಮಾಡುತ್ತಲೇ ಪಶುಪಾಲನೆ

ಮಾಡಲು ಪ್ರಾರಂಭಿಸಿದರು. ವ್ಯವಸಾಯದಿಂದ ರಾಗಿ, ಜೋಳ, ಸೂರ್ಯಕಾಂತಿ, ಅವರೆ ಮುಂತಾದ ಬೆಳೆಗಳನ್ನು ಬೆಳೆದು ತಮ್ಮ ಉತ್ಪಾದನಾ ವಿಧಾನವನ್ನ ಬದಲಾಯಿಸಿಕೊಂಡರು. ಇತ್ತೀಚಿನ ದಿನಗಳಲ್ಲಿ ಅಂದರೆ ೧೫ ವರ್ಷಗಳಿಂದ ರಾಷ್ಟ್ರೀಯ  ಉದ್ಯಾನವನ ಪ್ರಾರಂಭಗೊಂಡ ನಂತರ ಸಮುದಾಯದ ಜನರಿಗೆ ಉದ್ಯಾನವನವು ಮಾರಕವಾಗಿ ಪರಿಣಮಿಸಿದೆ. ಇನ್ನು ವ್ಯವಸಾಯವು ಇವರ ಪ್ರಾಣಕ್ಕೆ ಕುತ್ತು ತರುತ್ತಿದೆ. ರಾಷ್ಟ್ರೀಯ ಉದ್ಯಾನವನದಲ್ಲಿ ಆನೆಗಳು, ಕರಡಿ, ಹುಲಿಗಳನ್ನು ಬಿಟ್ಟಿರುವುದು ಸಮುದಾಯದ ಜನರಿಗೆ ಆತಂಕ ಉಂಟುಮಾಡಿದೆ.

ಇತ್ತೀಚಿಗೆ ನಡೆದ ಘಟನೆಯಲ್ಲಿ ೩ ತಿಂಗಳ ಹಿಂದೆಯಷ್ಟೇ ಆನೆಗಳು ಹಿಂಡು, ಹಿಂಡಾಗಿ ಬಂದು ಒಬ್ಬ ಮಹಿಳೆಯನ್ನು ಕೊಂದುಹಾಕಿದವು. ಇದರ ಜೊತೆಗೆ ಅರಣ್ಯದ ಅಧಿಕಾರಿಗಳ ಜೊತೆ ಜಗಳ ಪ್ರಾರಂಭವಾಗಿದೆ. ಅರಣ್ಯದ ಅಧಿಕಾರಿಗಳು ಈ ಭೂಮಿಯು ನಮ್ಮದು ನೀವು ಇಲ್ಲಿಂದ ಬೇರೆ ಕಡೆಗೆ ಹೋಗಿ ಎಂದು ಜಗಳ ಮಾಡುವುದು ಸಾಮಾನ್ಯವಾಗಿದೆ. ಜೊತೆಗೆ ಈ ಭೂಮಿಯ ಸಾಗುವಳಿ ಪತ್ರಗಳನ್ನು ನೀಡದೇ ಇರುವುದು, ಈ ಜನಸಮುದಾಯದ ಅಲೆಮಾರಿತನ ಇನ್ನು ಕೊನೆ ಕಾಣದೆ ಸಂಘರ್ಷದಲ್ಲಿರುವುದು ಕಾಣಬಹುದು. ಸಮುದಾಯದ ಜನರು ೩ ತಿಂಗಳ ಕಾಲ ವ್ಯಾಪಾರ ಮಾಡಲು ಪರ ಊರುಗಳಿಗೆ ಹೋಗುವುದು ಸಾಮಾನ್ಯವಾಗಿದೆ. ಇದರ ಜೊತೆಗೆ ಭೂಮಿಯನ್ನು ಸುತ್ತಲಿನ ಸಮುದಾಯದ ಹಳ್ಳಿಗಳ ರೈತರಿಗೆ ಗೇಣಿಗೆ ನೀಡಿರುವುದು ಕಂಡುಬರುತ್ತದೆ.

## ೪. ಸುತ್ತಲ ಸಮುದಾಯಗಳ ಜೊತೆಗಿನ ಸಂಬಂಧ

ಜಗತ್ತಿನ ಉದ್ದಕ್ಕೂ ಇವತ್ತು ಮಾನವ ಸಮುದಾಯಗಳು ಪ್ರತ್ಯೇಕವಾಗಿ ಬದಕಲು ಸಾಧ್ಯವಿಲ್ಲ. ಸಮಾಜದ ಸಮಸ್ಯೆಗಳ ಜೊತೆಗೆ ಬದುಕುವ ಮಾನವನು ಅನೇಕ ಸಂಘರ್ಷಗಳ ಜೊತೆಗೆ ಆಚಾರ-ವಿಚಾರ, ಸಂಸ್ಕೃತಿಯನ್ನು ರೂಪಿಸಿಕೊಂಡಿರುತ್ತಾನೆ. ಇನ್ನು ಆಧುನಿಕತೆಯ ಪರಿಣಾಮ ಬೀರಿದ ಮೇಲೆ ಜಗತ್ತಿನ ಎಲ್ಲಾ ಸಾಮಾಜಿಕ ವ್ಯವಸ್ಥೆಗಳು ಒಂದಲ್ಲ ಒಂದು ರೀತಿಯಲ್ಲಿ. ಅಲ್ಲಿನ ವ್ಯವಸ್ಥೆಯ ಮೂಲದಂತೆ ರೂಪಾಂತರಗೊಳ್ಳುತ್ತಿರುವುದು ಕಂಡು ಬರುತ್ತಿದೆ.

ಆಧುನಿಕ ಜಗತ್ತಿನ ಹೊಸ ಜನಾಂಗದ ಜನತೆಯ ಆಶೋತ್ತರಗಳ ಜೊತೆಗೆ ಹಳ್ಳಿಯ ಬದುಕಿನ ಸಾಂಪ್ರದಾಯಿಕ ಸ್ಥಿರತೆಯ ಮೂಲಗಳು ಕಣ್ಮರೆಯಾಗಲು ಪ್ರಾರಂಭವಾಗಿವೆ. ಈ ಸಂಪ್ರದಾಯದ ವರ್ತನೆಗಳು ತಲ ತಲಾಂತರದಿಂದ ಬಂದಿದ್ದ ಜಾತಿ, ವರ್ಗ, ಅಸಮಾನತೆಗಳ ಮೇಲೆ ನಿಂತಿದ್ದು, ನಗರದ ಹೊಸ ಜನತೆಯ ಶಕ್ತಿಯ ಬೆಳವಣಿಗೆಯೊಂದಿಗೆ ನಶಿಸಿ ಅಂತ್ಯ ಕಾಣುವುದಿಲ್ಲ. ಆದರೂ ಸಹ ಪಲವು ಬದಲಾವಣೆಗಳು ಕಾಣಬಹುದು.

ಸಾಮಾನ್ಯವಾಗಿ ಬುಡಕಟ್ಟು ಸಮುದಾಯದ ಜನರು ಎಂದರೆ ಆರ್ಥಿಕ ದೃಷ್ಟಿಯಿಂದ ನಿಕೃಷ್ಟ ಜೀವನದ ಕೆಳಜಾತಿಗಳು ಎಂದೇ ಗುರುತಿಸಲಾಗುತ್ತಿದೆ. ಅಲೆಮಾರಿ ಬುಡಕಟ್ಟುಗಳು ಇಂದು ಆಧುನಿಕತೆಯತ್ತ

ಮುಖ ಮಾಡಿರುವುದು ಸಮುದಾಯಗಳಲ್ಲಾಗುತ್ತಿರುವ ರೂಪಾಂತರವೆಂದೇ ಗುರುತಿಸಬಹುದು. ಅಲೆಮಾರಿಯಾಗಿ ಊರುಗಳಿಂದ ದೂರವೇ ವಾಸಿಸುತ್ತಿದ್ದ ಹಕ್ಕಿಪಿಕ್ಕಿಯರು ಇಂದು ಸುತ್ತಲಿನ ಸಮುದಾಯದ ಜೊತೆಗೆ ಹೊಸ ಮೈತ್ರಿ ಸಂಬಂಧವನ್ನ ಹೊಂದಿರುವುದು ಕಾಣಬಹುದು. ಅಲೆಮಾರಿ ಬುಡಕಟ್ಟು ಸಮುದಾಯವಾದ ಈ ಜನರು ಪೂರ್ವದಲ್ಲಿ ಹಳ್ಳಿಗಳು ಮತ್ತು ನಗರದ ಜನ ಸಂಪರ್ಕದಿಂದ ದೂರವೇ ಉಳಿದಿದ್ದರು. ಜೊತೆಗೆ ಹಲವು ರೀತಿಯ ಶೋಷಣೆಗಳನ್ನು ಅನುಭವಿಸುತ್ತಿದ್ದರು. ಸುತ್ತಿಲಿನ ಹಳ್ಳಿಯ ಜನರು ಈ ಸಮುದಾಯದ ಜನರನ್ನು ಕಳ್ಳರೆಂದು ಗುರ್ತಿಸಿ ಹಿಂಸೆ ಮಾಡತೊಡಗಿದ್ದರು. ಈ ಹಿಂಸೆಯು ಸಹ ಹಕ್ಕಿಪಿಕ್ಕಿಯರ ಅಲೆಮಾರಿತನಕ್ಕೆ ಕಾರಣವೆಂದೇ ನಂಬಲಾಗಿತ್ತು. ಹೀಗಾಗಿ ಅಲೆಮಾರಿಯಾಗಿ ಅಲೆಯುತ್ತಾ ಈ ಜನರು ಊರುಗಳಿಂದ ದೂರವೇ ವಾಸಿಸುತ್ತಿದ್ದರು.

**ಕಾಲೋನಿ ರೂಪಗೊಂಡ ಆರಂಭದ ಹಂತ**

ಅಲೆಮಾರಿಯಾದ ಹಕ್ಕಿಪಿಕ್ಕಿ ಸಮುದಾಯವು ಸ್ಥಿರವಾಗಿ ನೆಲೆ ನಿಲ್ಲಲು ಹಾಗೂ ಜೀವನದ ನಿರ್ವಹಣೆಗಾಗಿ ಸರ್ಕಾರವು ಸಮುದಾಯದ ಜನರನ್ನು ಅಭಿವೃದ್ಧಿಯ ತೆಕ್ಕೆಗೆ ತರಲು ಪ್ರಯತ್ನಿಸಿದಾಗ ಸುತ್ತಲ ಸಮುದಾಯದ ಜನರು ಈ ಜನರನ್ನು ತಿರಸ್ಕಾರದಿಂದ ನೋಡುವುದು ಸಾಮಾನ್ಯವಾಗಿತ್ತು. ಆದ್ದರಿಂದ ಈ ಜನರು ಪ್ರತ್ಯೇಕವಾಗಿ ದೂರದ ಪ್ರದೇಶಗಳಲ್ಲಿ ವಾಸಿಸುತ್ತಿದ್ದರು. ಇನ್ನು ಆರಂಭದಲ್ಲಿ ಹಕ್ಕಿಪಿಕ್ಕಿ ಸಮುದಾಯವು ತನ್ನ ಅಸ್ತಿತ್ವವನ್ನು ಗುರ್ತಿಸಿಕೊಂಡ ರೀತಿ ಬಹು ಕಷ್ಟದ ಕೆಲಸವಾಗಿತ್ತು. ಸುತ್ತಲಿನ ಹಳ್ಳಿಗಳ ಜನರಿಂದ ಬಹುಪಾಲು ಕಷ್ಟವೇ ಅನುಭವಿಸುತ್ತಿದ್ದ ಈ ಜನರು ದನಕರುಗಳನ್ನು ಸಾಕುವುದಕ್ಕೂ ತೊಂದರೆ ನೀಡುತ್ತಿದ್ದರು. ಸಮುದಾಯದ ಜನರ ದನ ಕರುಗಳು, ಹಸುಗಳು ಹಿಡಿದುಕೊಳ್ಳುವುದು, ತೋಟಗಳಲ್ಲಿ ಮೇಯಿಸುತ್ತಾರೆಂದು ಜಗಳ ಮಾಡುವುದು ಸಾಮಾನ್ಯವಾಗಿತ್ತು.

ಇನ್ನು ಪ್ರತ್ಯೇಕವಾದ ಕಾಲೋನಿಯನ್ನು ನಿರ್ಮಾಣ ಮಾಡಿಕೊಂಡ ಮೇಲೆ ಕಾಲೋನಿಗೆ ದಾರಿಯನ್ನು ಬಿಡದೆ ಹಿಂಸೆ ಮಾಡತೊಡಗಿದರು. ಸುತ್ತಲಿನ ಹಳ್ಳಿಗಳಲ್ಲಿ ಭಿಕ್ಷೆಗೆ ಹೋದಾಗ ನಾಯಿಗಳನ್ನು ಬಿಟ್ಟು ಓಡಿಸುತ್ತಿದ್ದರು. ನಂತರದ ದಿನಗಳಲ್ಲಿ ಸರ್ಕಾರದ ಅಭಿವೃದ್ಧಿಯ ತೆಕ್ಕೆಗೆ ಸೇರಿದ ನಂತರ ಸೌಲಭ್ಯಗಳನ್ನು ಪಡೆದ ಈ ಸಮುದಾಯದ ಜನರು ಸುತ್ತಮುತ್ತಲಿನ ಹಳ್ಳಿಗಳ ಜೊತೆಗೆ ವಿಶೇಷವಾದ ಸಂಬಂಧಗಳನ್ನು ಏರ್ಪಡಿಸಿಕೊಂಡಿದ್ದಾರೆ. ಇದರಿಂದ ಕಾಲೋನಿಯಲ್ಲಿ ವಿಶೇಷವಾದ ಸಾಮಾಜಿಕ ಆರ್ಥಿಕ-ಸ್ಥಿತಿಗತಿ ಬದಲಾವಣೆಯಾಗತೊಡಗಿದೆ.

**ಸರಕಾರದ ಯೋಜನೆಗಳು**

ಸರ್ಕಾರದ ಅಭಿವೃದ್ಧಿಯ ಫಲವಾಗಿ ದರ್ಕಾಸ್ತು ಭೂಮಿಯನ್ನು ಸಮುದಾಯದ ಎಲ್ಲಾ ಜನರಿಗೂ ಹಂಚಿಕೆ ಮಾಡಿದ ನಂತರ ಸುತ್ತಮುತ್ತಲಿನ ಹಳ್ಳಿಗಳ ಜನರ ಜೀವನ ವಿಧಾನದಲ್ಲಿ ಬದಲಾವಣೆಗಳು ಕಾಣಲಾರಂಭಿಸಿದವು. ಈ ಸಮುದಾಯಕ್ಕೆ ಬಟ್ಟೆ ಸಾರಾಯಿಯನ್ನು ತಂದು ಕಾಲೋನಿಯಲ್ಲಿ ಮಾರಾಟ

ಮಾಡುವುದು ಪ್ರಾರಂಭಗೊಂಡ ನಂತರ ಸುತ್ತಮುತ್ತಲಿನ ಹಳ್ಳಿಗಳ ಜೊತೆಗಿನ ಸಂಬಂಧವೂ ಗಾಢವಾಗತೊಡಗಿತು. ಇದರಿಂದ ಅನೇಕ ರೀತಿಯ ಉಪಯೋಗಗಳನ್ನು ಬುಡಕಟ್ಟು ಸಮುದಾಯವು ಪಡೆಯುವಂತಾಯಿತು. ಹಾಗೂ ಸುತ್ತಮುತ್ತಲಿನ ಹಳ್ಳಿಗಳ ಜನರು ಆದಾಯದ ಮೂಲವಾಗಿ ಈ ಕಾಲೋನಿಯನ್ನು ಬಳಸಿಕೊಳ್ಳತೊಡಗಿದರು. ಸಮುದಾಯದ ಜನರಿಗೆ ಕುಡಿಯಲು ಸಾಲ ನೀಡುವುದು, ಹಬ್ಬಗಳಿಗೆ, ಮತ್ತು ವ್ಯಾಪಾರಕ್ಕೆ ಸಾಲದ ಹಣ ನೀಡಿ, ಆ ಹಣಕ್ಕೆ ಬಡ್ಡಿ ವ್ಯಾಪಾರ ಮಾಡುವುದು ಕಾಲೋನಿಯಲ್ಲಿ ಪ್ರಾರಂಭವಾಯಿತು. ವ್ಯಾಪಾರಕ್ಕೆ ಬಂಡವಾಳ ಒದಗಿಸುವ ಮೂಲವಾಗಿ ಇಂದು ಬಹಳ ಪ್ರಸಿದ್ಧಿಯನ್ನು ಪಡೆದಿದ್ದಾರೆ.

ಸರ್ಕಾರ ಭೂಮಿಯನ್ನು ನೀಡಿದ ಫಲವಾಗಿ ಸುತ್ತಲಿನ ಹಳ್ಳಿಗಳ ಭೂಮಾಲೀಕರ ನಡುವಳಿಕೆಗಳಲ್ಲಿ ಬದಲಾವಣೆಗಳಾಗಿವೆ. ಹಕ್ಕಿಪಿಕ್ಕಿಯರ ಹೆಚ್ಚಿನ ಭೂಮಿಯನ್ನು ಉಳುಮೆ ಮಾಡುತ್ತಿರುವವರಾಗಿದ್ದಾರೆ. ಪಕ್ಕದ ಹಳ್ಳಿಗಳ ಭೂಮಾಲಿಕರು ಇವರ ಭೂಮಿಯನ್ನು ಒತ್ತುವರಿ ಮಾಡಿಕೊಂಡಿದ್ದಾರೆ. ಅರಣ್ಯ ಸಿಬ್ಬಂದಿಯಿಂದ ಹಲವು ತೊಂದರೆಗಳು ಉದ್ಭವಗೊಂಡಿವೆ. ಗಿರಿಜನ ಆಶ್ರಮ ಶಾಲೆಯಲ್ಲಿ ಊಟದ ವ್ಯವಸ್ಥೆಗೆ ಹಣ್ಣು ಮತ್ತು ತರಕಾರಿಗಳನ್ನು ತರುವುದರಿಂದ ಹಲವು ಹೊಸ ಜನರ ಪರಿಚಯವಾಗಿದೆ. ಆಶ್ರಮ ಶಾಲೆಯ ಅಡುಗೆ ಸಹಾಯಕರು ಪಕ್ಕದ ಹಳ್ಳಿಯಿಂದಲೇ ಬರುತ್ತಿರುವುದರಿಂದ ಹಲವು ಪ್ರಯೋಜನಗಳು ಪಡೆಯುವಂತಾಗಿದೆ. ಸಂಭವಿಸುವ ಹಲವು ಸಮಸ್ಯೆಗಳಿಗೆ ಪರಿಹಾರಗಳನ್ನು ಈ ಹಳ್ಳಿಗಳ ಜನರಿಂದಲೇ ಪಡೆಯುತ್ತಿದ್ದಾರೆ. ಬದಲಾದ ವ್ಯವಸ್ಥೆಯಲ್ಲಿ ಅಲ್ಪ ಭೂಮಿಯ ಒಡೆಯರಾದ ಇವರು ಸುತ್ತಮುತ್ತಲಿನ ಭೂಮಾಲಿಕರ ಜೊತೆಗೆ ಹೆಚ್ಚಿನ ಸಂಬಂಧವನ್ನ ಹೊಂದಿದ್ದಾರೆ. ಅದೇ ರೀತಿಯಾಗಿ ಸುತ್ತಮುತ್ತಲಿನ ಹಳ್ಳಿಗಳ ವ್ಯವಸಾಯಗಾರರು ಇಂದು ಈ ಜನರನ್ನೆ ಅವಲಂಬಿಸಿದ್ದಾರೆ. ತಮ್ಮ ತೋಟಗಳಲ್ಲಿ ಕೂಲಿ ಕೆಲಸಕ್ಕಾಗಿ ಇವರನ್ನೇ ಅವಲಂಬಿಸಿದ್ದಾರೆ. ದಿನನಿತ್ಯದ ಕೆಲಸದಿಂದ ಹಿಡಿದು ಮನೆ ಕೆಲಸಗಳವರೆಗೂ ಇಂದು ಹಕ್ಕಿಪಿಕ್ಕಿಯರು ಇವರ ಸೇವೆಯನ್ನು ಮಾಡುತ್ತಿದ್ದಾರೆ. ಇಂದು ಹಕ್ಕಿಪಿಕ್ಕಿಯರ ಬದಲಾದ ವ್ಯವಸ್ಥೆಯಲ್ಲಿ ವ್ಯಾಪಾರ, ಕೃಷಿ ಮುಂತಾದ ಹಲವು ವಿಧವಾದ ವೃತ್ತಿಗಳಿಗೆ ಮಾರ್ಗದರ್ಶಕರಾಗಿದ್ದಾರೆ. ಹಕ್ಕಿಪಿಕ್ಕಿಯರು ತಮ್ಮ ಹೊಲದಲ್ಲಿ ನಾಟಿ, ಬಿತ್ತನೆ, ಉಳುಮೆಗೆ ಇಂದು ಪಕ್ಕದ ಹಳ್ಳಿಗಳನ್ನು ಅವಲಂಬಿಸಿದ್ದಾರೆ. ಉಳುಮೆಯ ಕಾಲದಲ್ಲಿ ಪಕ್ಕದ ಶ್ರೀಮಂತ ಭೂಮಾಲಿಕರ ಟ್ರ್ಯಾಕ್ಟರ್ ಬಳಕೆಗೆ ಅವರುಗಳನ್ನು ಅವಲಂಬಿಸಿದ್ದಾರೆ.

ಕ್ಷೇತ್ರಕಾರ್ಯದಲ್ಲಿ ಕಂಡು ಬಂದ ನಿದರ್ಶನವೆಂದರೆ ಸಮುದಾಯಕ್ಕೆ ಸರ್ಕಾರ ನೀಡಿರುವ ಭೂಮಿಯಲ್ಲಿ ಹೆಚ್ಚು ಭಾಗ ವ್ಯವಸಾಯ ಪಕ್ಕದ ಹಳ್ಳಿಗಳ ರೈತರು ಮಾಡುತ್ತಿರುವುದು ಕಂಡುಬರುತ್ತದೆ. ಬೆಳೆದ ಬೆಳೆಯಲ್ಲಿ ೧/೩ ಭಾಗ ಭೂಮಾಲಿಕನಿಗೆ ಸಂದಾಯವಾಗುತ್ತಿದೆ. ಉಳಿದ ಭಾಗ ವ್ಯವಸಾಯಗಾರನು ಪಡೆಯುತ್ತಿದ್ದಾನೆ.

ಸರ್ಕಾರದ ಅಭಿವೃದ್ಧಿ ನೀತಿಯ ಪರಿಣಾಮದಿಂದ ಹಕ್ಕಿಪಿಕ್ಕಿಯರು ವ್ಯವಸ್ಥಿತವಾದ ಸಾಮಾಜಿಕ ವ್ಯವಸ್ಥೆಯನ್ನು ಹೊಂದುವಂತಾಗಿದ್ದಾರೆ. ಇದರಿಂದ ಹಲವಾರು ಪ್ರಯೋಜನಗಳು, ಮತ್ತು ಅನಾನುಕೂಲಗಳು ಸಂಭವಿಸಿವೆ. ಆದರೂ ಒಂದು ಜೀವನ ವಿಧಾನವನ್ನು ರೂಪಿಸಿಕೊಳ್ಳುವಲ್ಲಿ ಅನುಸರಿಸಬೇಕಾದ ಹಲವಾರು ಅಂಶಗಳನ್ನು ಕಂಡುಕೊಂಡಿದ್ದಾರೆ. ಇತ್ತೀಚಿನ ದಿನಗಳಲ್ಲಿ ಪಕ್ಕದ ಹಳ್ಳಿಗಳಲ್ಲಿಯೇ ಬೆಳಿಗ್ಗೆಯಿಂದ ಸಂಜೆಯ ತನಕ ವಿವಿಧ ವೃತ್ತಿಗಳಲ್ಲಿ ತೊಡಗಿಕೊಂಡಿರುತ್ತಾರೆ.



# ಹಕ್ಕಿಪಿಕ್ಕಿ ಸಮುದಾಯದ ಚಾರಿತ್ರಿಕ ಬೆಳವಣಿಗೆ

ಕರ್ನಾಟಕದಲ್ಲಿ ಬುಡಕಟ್ಟುಗಳ ಬಗ್ಗೆ ನಡೆದ ಅಧ್ಯಯನಗಳು ಬಹಳಷ್ಟು ಕಡಿಮೆ ಆದರೂ, ಅದರಲ್ಲೂ ಹಕ್ಕಿಪಿಕ್ಕಿಯರ ಬಗ್ಗೆ ಅಧ್ಯಯನಗಳು ಅಷ್ಟಾಗಿ ನಡೆದಿಲ್ಲ.'ಇತಿಹಾಸದ ಪೂರ್ವ ಕಾಲಕ್ಕೆ ಸಂಬಂಧಿಸಿದಂತೆ ಕ್ರಿ.ಪೂ. ೪೦೦.೦೦೦ ರಿಂದ ೨೦೦.೦೦೦ರ ನಡುವೆ ನಡೆದಿರುವುದು ಎಂಬ ವಾಸ್ತವಾಂಶವಿದೆ. ಆಗಿನ ಕಾಲದ ಜನಜೀವನದ ಬಗ್ಗೆ ಕಲ್ಪನೆ ಮೂಡುತ್ತದೆ'[೧]. ಹೀಗಾಗಿ ಇತಿಹಾಸದ ದೃಷ್ಟಿಯಿಂದಲೇ ಪೂರ್ವಜರನ್ನು ಗುರುತಿಸಲು ಸಾಧ್ಯವಿಲ್ಲ. ಹಾಗೆಯೇ ಇವರುಗಳ ಮೂಲವನ್ನು ಖಚಿತವಾಗಿ ಹೇಳಲು ಸಾಧ್ಯವಿಲ್ಲ. ಒಂದೇ ಕಡೆ ಸ್ಥಿರವಾಗಿ ಜೀವನ ಕಂಡವರು ಅಲ್ಲ. ಒಂದು ಕಡೆಯಿಂದ ಮತ್ತೊಂದು ಕಡೆಗೆ ಆಹಾರದ ಸಲುವಾಗಿ ಅಲೆಯುತ್ತಾ ಗಡ್ಡೆಗೆಣಸು, ಹಣ್ಣುಹಂಪಲು, ಬೇಟೆಗಾಗಿ ಓಡಾಡುತ್ತಾ ಜೀವನ ವಿಧಾನವನ್ನು ರೂಪಿಸಿಕೊಂಡಿದ್ದರು. ಆದ್ದರಿಂದಲೇ ಹಕ್ಕಿಪಿಕ್ಕಿ ಸಮುದಾಯದ ಆದಿಮ ಸಮಾಜದ ಸ್ವರೂಪವನ್ನು ಗುರುತಿಸುವಲ್ಲಿ ಮಾನವಶಾಸ್ತ್ರಜ್ಞರು ಹೆಚ್ಚು ಫಲಕಾರಿಯಾದ ಫಲಿತಾಂಶವನ್ನು ನೀಡಲು ಸಾಧ್ಯವಾಗಿಲ್ಲ. 'ಇನ್ನೂ ಹಕ್ಕಿಪಿಕ್ಕಿಯರ ಬೆಳವಣಿಯನ್ನು ಗುರುತಿಸುವಾಗ ಥರ್ ಸ್ಟನ್ ಪುಸ್ತಕದಲ್ಲಾಗಲಿ, ಹಯವದನರಾವ್ ಪುಸ್ತಕದಲ್ಲಾಗಲಿ ಇವರುಗಳ ಬಗ್ಗೆ ಯಾವುದೇ ಮಾಹಿತಿ ದೊರೆಯುವುದಿಲ್ಲ'[೨]. ಇವೆಲ್ಲದಕ್ಕೂ ಇವರುಗಳ ಅಲೆಮಾರಿತನವೇ ಕಾರಣವೆನ್ನಬಹುದು.

ಈ ಸಮುದಾಯದ ಬೆಳವಣಿಗೆಯನ್ನು ಗುರುತಿಸಲು ನಮಗೆ ಮುಖ್ಯವಾದ ಆಧಾರವೇ 'ಡ್ರಾಪರ್ ಅಂಡ್ ಸೆಲ್ಲರ್' ಎಂಬ ಕೃತಿಯು ಮುಖ್ಯವಾದದ್ದು. ಹಕ್ಕಿಪಿಕ್ಕಿ ಸಮುದಾಯದ ಚಾರಿತ್ರಿಕ ಬೆಳವಣಿಗೆಯ ಹಂತಗಳನ್ನು ಗಮನಿಸಿದಾಗ ವಂಶವಾಹಿನಿಯಾಗಿ ತಲೆಮಾರಿನಿಂದ ತಲೆಮಾರಿಗೆ ಆದ ಬೆಳವಣಿಗೆಗಳಲ್ಲಿ ಅನೇಕ ಬಗೆಯ ಬದಲಾವಣೆಗಳು ಸಾಧ್ಯವಾಗಿವೆ. ಬದಲಾಗುತ್ತಿರುವ ಜೀವನ ವಿಧಾನದ ಜೊತೆ ಜೊತೆಗೆ ಸಾಂಸ್ಕೃತಿಕ ಅಂಶಗಳೊಳಗಿನಿಂದ ಬಂದಂತಹ ಸಾಮಾಜಿಕ, ರಾಜಕೀಯ, ಧಾರ್ಮಿಕ, ಆರ್ಥಿಕ ವ್ಯವಸ್ಥೆಯ

ವಿಧಿ ವಿಧಾನಗಳು, ಸ್ಥಿತ್ಯಂತರವಾಗುವುದು ಸಾಮಾನ್ಯವಾಗಿದೆ. ಹೀಗಾಗಿ ಸ್ವಾತಂತ್ರ್ಯದ ನಂತರ ದಿನಗಳಲ್ಲಿ ಸಮಾಜದ ಮುಖ್ಯವಾಹಿನಿಯ ಜೊತೆಗೆ ಬದಲಾದ ಸಮಾಜದ ಹಾಗೆಯೇ ಹರಿದು ಬರುತ್ತಿರುವುದು ಸಹಜ. ಸಮಾಜದಲ್ಲಿ ಸಂಭವಿಸುವ ಈ ಬದಲಾವಣೆಗಳನ್ನು ಹಲವು ಸಮಾಜ ಶಾಸ್ತ್ರಜ್ಞರು ಗುರುತಿಸಿದ್ದಾರೆ. ಅವರಲ್ಲಿ ಮುಖ್ಯವಾದವೆಂದರೆ ಮಜುಂದಾರ್ ಮೆಕೈವರ್ ಮತ್ತು ಪೇಜ್ ರವರು.

ಮಜುಂದಾರ್ ಹೇಳುವಂತೆ 'ಜನರು ಜೀವನದಲ್ಲಿ ಅಥವಾ ಸಮಾಜದ ಕ್ರಿಯೆಯಲ್ಲಿ ಹಳೆಯದರ ಬದಲಾಗಿ ಹೊಸದನ್ನು ಅಳವಡಿಸುವ ವಿನೂತನವಾದ ಶೋಭಾಚಾರ ಮತ್ತು ಪದ್ಧತಿಗೆ ಸಾಮಾಜಿಕ ಪರಿವರ್ತನೆ'[೨] ಎನ್ನುತ್ತಾರೆ.

ಮೆಕೈವರ್ ಮತ್ತು ಪೇಜ್‌ರವರು ಹೇಳುವಂತೆ 'ಸಾಮಾಜಿಕ ಸಂಬಂಧಗಳಲ್ಲಿ ಆಗುವ ಪರಿವರ್ತನೆಗಳನ್ನು ಸಾಮಾಜಿಕ ಪರಿವರ್ತನೆ ಎನ್ನುತ್ತೇವೆ' ಹೀಗೆ ಸಮಾಜಿಕ ಪರಿವರ್ತನೆಯ ಬಗೆಗೆ ವಿವಿಧ ವಿದ್ವಾಂಸರು ವಿವಿಧ ರೀತಿಯ ವ್ಯಾಖ್ಯಾನಗಳನ್ನು ನೀಡಿದ್ದಾರೆ.

ಆಸೆಬುರುಕ ಪ್ರಾಣಿಯಾದ ಮನುಷ್ಯ ಹೊಸತು ಕಂಡಾಗ ಆಸೆ ಪಡುವುದು ಸಾಮಾನ್ಯ. ಹೀಗಾಗಿ ಅಂತಹ ಆಸೆ ಪೂರಕವಾಗಿರಬಹುದು. ಆದಿಮ ಕಾಲದ ನೆಲೆಯ ಗುರುತುಗಳು ಮಾಸುತ್ತಿರುವ ಇಂದಿನ ಸ್ಥಿತಿಯಲ್ಲಿ ಹೊಸತನ್ನು ಆಶ್ರಯಿಸಿರುವ ಸಮುದಾಯಗಳಲ್ಲಿ ಹಕ್ಕಿಪಿಕ್ಕಿಯರು ನಿಲ್ಲುತ್ತಾರೆ. ಇಂತಹ ಬದಲಾವಣೆಗಳಿಗೆಲ್ಲಾ ಮೂಲ ಕಾರಣ ಉತ್ಪಾದನಾ ವಿಧಾನದಲ್ಲಿನ ಬೆಳವಣಿಗೆಯ ವಿಧಾನ, ಪರಿಕರಗಳು, ಹಂಚಿಕೆ, ಉಳಿತಾಯಗಳಲ್ಲಿನ ಏರುಪೇರುಗಳು ಸಮಾಜವನ್ನು ಬದಲಾವಣೆಯತ್ತ ಕರೆದೊಯ್ಯುತ್ತವೆ. ಹೀಗಾಗಿ ಆರ್ಥಿಕ ಸ್ಥಿತಿಗತಿಗಳು ಹೊಸ ಸಾಮಾಜಿಕ ರಚನೆಯನ್ನು ಪ್ರಾರಂಭಿಸುತ್ತವೆ. 'ಮಾರ್ಕ್ಸ್'ರವರು ಹೇಳಿರುವಂತೆ 'ಮಾನವ ಸಮಾಜವು ವಿವಿಧ ಹಂತಗಳ ಮೂಲಕ ಸಾಗುತ್ತದೆ. ಪ್ರತಿಯೊಂದು ಹೊಸ ಹಂತವು ಸಾಮಾಜಿಕ ವ್ಯವಸ್ಥೆಯನ್ನು ವ್ಯವಸ್ಥಿತಗೊಳಿಸಿ, ಭದ್ರಗೊಳಿಸಿ ಒಂದು ಹಂತದಿಂದ ಇನ್ನೊಂದು ಹಂತಕ್ಕೆ ಸಾಗುವಾಗ ಘರ್ಷಣೆಗಳು ಸಾಮಾನ್ಯ' ಹೀಗೆ ಸೃಷ್ಟಿಯ ಮೇಲೆ ಮಾನವನ ಉಗಮದಿಂದ ಆಹಾರಕ್ಕಾಗಿ ವಿವಿಧ ಮೂಲಗಳಿಗೆ ಸಂಚರಿಸುವುದು ಕಂಡುಬರುತ್ತದೆ.

ಮೂಲತಃ ಹಕ್ಕಿಪಿಕ್ಕಿಯರು ತಮ್ಮ ಬೆಳವಣಿಗೆಯನ್ನು ವೃತ್ತಿನಾಮದಿಂದಲೇ ಗುರುತಿಸಿಕೊಂಡಿದ್ದಾರೆ. ಹೀಗಾಗಿ ನೆಲೆನಿಂತ ಪರಿಸರದಂತೆ ತಮ್ಮ ಸಮುದಾಯದ ದಂತಕಥೆಗಳನ್ನು ಹೇಳುತ್ತಾರೆ. ಪೂರ್ವದಲ್ಲಿ ರಜಪೂತ ವಂಶಕ್ಕೆ ಸೇರಿದ ಇವರುಗಳು ಕ್ಷತ್ರಿಯರೆಂದು ಮಹಾರಾಷ್ಟ್ರ, ಗುಜರಾತ್, ರಾಜಸ್ಥಾನಗಳಲ್ಲಿ ಗುರುತಿಸಿಕೊಂಡಿದ್ದರು. ಬಹಳ ಶ್ರೀಮಂತ ಜೀವನವನ್ನು ರೂಪಿಸಿಕೊಂಡಿದ್ದ ಇವರುಗಳು ಶಿವಾಜಿ ಮಹಾರಾಜರನ್ನು ಗುರುವಾಗಿ ಚಾಮುಂಡೇಶ್ವರಿಯನ್ನು ಕುಲದೇವತೆಯಾಗಿ ಪೂಜಿಸುತ್ತಿದ್ದರು. 'ಅಕ್ಬರ್ ಮತ್ತು ರಾಣಾ ಪ್ರತಾಪ್ ಸಿಂಗ್‌ರ ಯುದ್ಧದಿಂದ ಕುಲದೇವತೆಯ ಮಾತು ತಪ್ಪಿದ ಪರಿಣಾಮವಾಗಿ ಕಾಡು ಸೇರಬೇಕಾಯಿತು. ಅಲ್ಲಿಂದ ಅಲೆಮಾರಿಗಳಾಗಿ ಕಾಡುಗಳಲ್ಲೇ ವಾಸಿಸುವುದು, ಕಾಡೇ ನಮಗೆ ಎಲ್ಲಾ ಆಯಿತು'[೩] ಇದರಿಂದಾಗಿ ಕಾಡಿನ ಉತ್ಪನ್ನಗಳ ಬಳಕೆ ಮತ್ತು ಹಕ್ಕಿ ಹಿಡಿಯುವುದು ಪ್ರಾರಂಭ ಮಾಡಿದ

ಮೇಲೆ ನಮಗೆ ಹಕ್ಕಿಪಿಕ್ಕಿಯರೆಂದು ನಮಗೂ ಮತ್ತು ನಮ್ಮ ಕಸುಬಿಗೂ ಗಂಟುಹಾಕಿದರು. ಹೀಗಾಗಿ ಅಲೆಮಾರಿಯಾಗಿ ಜೀವಿಸುತ್ತಿದ್ದೇವೆ ಎನ್ನುತ್ತಾರೆ. .

ಇನ್ನು ಭಾರತದಲ್ಲಿ ಬುಡಕಟ್ಟು ಸಮುದಾಯವೆಂದ ತಕ್ಷಣ ನಿಶ್ಚಿತ ಕಟ್ಟುಪಾಡುಗಳಲ್ಲಿ ಕಂಡುಬರುವುದು. ವಿಶೇಷವಾಗಿ ಅರಣ್ಯಜೀವನ, ಮಾಂಸಹಾರ, ಸಾಂಸ್ಕೃತಿಕ ಚಹರೆ, ಧಾರ್ಮಿಕ ದೃಷ್ಟಿಕೋನ, ಸಡಿಲವಾಗಿರದ ಆಚರಣೆಗಳು, ಸಾಮಾಜಿಕ ಸಂಘಟನೆ ಇವೆಲ್ಲಾ ಮುಖ್ಯವಾದವುಗಳು.

ಬುಡಕಟ್ಟು ಸಮುದಾವೆಂದ ಮೇಲೆ ಅದರ ಬೆಳವಣಿಗೆಯಲ್ಲಿ ಭೂಮಿ, ಅರಣ್ಯದ ಪಾತ್ರ ಅತಿಮುಖ್ಯವಾದದ್ದು. ಹೀಗಾಗಿ ಸಮುದಾಯದ ಎಲ್ಲಾ ಬೆಳವಣಿಗೆಗಳು ಅದರ ಆರ್ಥಿಕ ರೂಪಾಂತರಗಳಿಂದ ಸಂಭವಿಸಿವೆ. ಅರಣ್ಯದಲ್ಲೇ ಬೇಟೆಯನ್ನು ಮಾಡುತ್ತಾ ಜೀವಿಸುತ್ತಿದ್ದ ಇವರುಗಳು ವಿಶೇಷವಾದ ಪಾರಂಪರೆಯನ್ನು ಕಟ್ಟಿಕೊಂಡು ಜೀವನವನ್ನು ರೂಪಿಸಿಕೊಂಡಿದ್ದರು. ಆಧುನಿಕ ಜಗತ್ತಿನಲ್ಲಿ, ಸಮುದಾಯ ಹೊಸ ಬದುಕನ್ನು ರೂಪಿಸಿಕೊಳ್ಳಲು ಯತ್ನಿಸಿತು.'ಬ್ರಿಟಿಷ್‌ರು ಸ್ವಾತಂತ್ರ್ಯದ ಪೂರ್ವದಲ್ಲಿ ಅರಣ್ಯದಲ್ಲೇ ಜೀವಿಸುತ್ತಿದ್ದ ಪ್ರದೇಶಗಳನ್ನು ಹಾಗು ಅವುಗಳ ಆಡಳಿತವನ್ನು ಪ್ರತ್ಯೇಕವಾಗಿಯೇ ಇರುವಂತೆ, ಇತರ ಎಲ್ಲಾ ಆಡಳಿತಗಳಲ್ಲಿ ಅಳವಡಿಸ ಬಾರದೆಂದು ಸೂಚಿಸಿದರು.'[೪] ಅರಣ್ಯದ ಉತ್ಪನ್ನಗಳಿಂದ ಆಹಾರ ಮತ್ತು ಆದಾಯದ ಮೂಲ ಎರಡನ್ನೂ ಪಡೆದು ಜೀವಿಸುತ್ತಿದ್ದರು. ಹೀಗೆ ಸಮುದಾಯದ ಬೆಳವಣಿಗೆಯಲ್ಲಿ ಅರಣ್ಯ ಮಹತ್ವದ ಪಾತ್ರ ವಹಿಸುತ್ತದೆ. ಆಹಾರದ ಮೂಲವಾಗಿ ಪ್ರಾರಂಭವಾದ ಅಲೆಮಾರಿತನ ಸಮುದಾಯಕ್ಕೆ ವಿಶೇಷವಾದ ಕೊಡುಗೆಗಳನ್ನು ನೀಡಿದೆ.

ಇಂದು ಮುಖ್ಯವಾಗಿ ಈ ಸಮುದಾಯದ ಜನರು ನೆಲೆನಿಂತ ಪರಿಸರದಂತೆ ಜೀವನ ವಿಧಾನವನ್ನು ರೂಪಿಸಿಕೊಳ್ಳುವವರಾಗಿದ್ದಾರೆ. ಹೀಗಾಗಿ ಸಮುದಾಯದ ಹೆಚ್ಚಿನ ಜನರು ಬದಲಾದ ವ್ಯವಸ್ಥೆಯಿಂದ ಹಲವಾರು ಹೊಸ ಮಾರ್ಗಗಳಲ್ಲಿ ತೊಡಗಿಕೊಂಡಿದ್ದಾರೆ. ವ್ಯಾಪಾರದ ಪ್ರಾಮುಖ್ಯತೆಯನ್ನು ಅರಿತು, ಇಂದು ಬಹುಜನರು ವ್ಯಾಪಾರದಲ್ಲಿ ತೊಡಗಿಕೊಂಡಿರುವುದು, ಅವರ ವ್ಯಾಪಾರಿ ಮನೋಧರ್ಮವನ್ನು ತೋರಿಸುತ್ತದೆ. ಹಕ್ಕಿಪಿಕ್ಕಿಯರು 'ಇದರಿಂದ ಕರ್ನಾಟಕದಲ್ಲಿ ಆರಂಭದಲ್ಲಿ ಅಲೆಮಾರಿಯಾಗಿ ಸುಮಾರು ೨೦೦ ವರ್ಷಗಳ ಹಿಂದೆ ಬಂದು ನೆಲೆಸಿದ್ದಾರೆ ಎನ್ನಬಹುದು'[೫]

ಹೀಗಾಗಿ ಬೆಳವಣಿಗೆ ಎಂದೊಡನೆ ಅಭಿವೃದ್ಧಿ ಹಂತವೆಂದು ಊಹೆ ಮಾಡಬಹುದು. ಸಮುದಾಯದ ಚಾರಿತ್ರಿಕ ಬೆಳವಣಿಗೆಯ ಹಿನ್ನಲೆಯಲ್ಲಿ ಅಭಿವೃದ್ಧಿ ಕೇವಲ ಗಣನೆ ಮಾತ್ರ. ಮಾನವನ ಅಭಿವೃದ್ಧಿ ಹಂತದಲ್ಲಿ ಇನ್ನು ಬಹಳಷ್ಟು ದೂರವೇ ಉಳಿದಿರುವುದು ನಿಜಸಂಗತಿ. ಬೇಟೆಯಿಂದಲೇ ಪ್ರಾರಂಭಗೊಂಡ ಹಕ್ಕಿಪಿಕ್ಕಿ ಸಮುದಾಯ ಚಾರಿತ್ರಿಕ ಬೆಳವಣಿಗೆ, ಮುಖ್ಯವಾಗಿ ಉತ್ಪಾದನಾ ವಿಧಾನದ ಮೂಲಕ ಎಂದು ಗುರುತಿಸಬಹುದಾಗಿದೆ.

## ೧. ಪಾರಂಪರಿಕ ಉತ್ಪಾದನಾ ವಿಧಾನ

ಮಾನವನ ಚರಿತ್ರೆಯ ಬೆಳವಣಿಗೆಯ ಘಟ್ಟಗಳು ಕೇವಲ ಗೊತ್ತು ಗುರಿ ಇಲ್ಲದ ಸಂಸ್ಕೃತಿಯನ್ನು ಪರಿಚಯಿಸುವುದಿಲ್ಲ. ಇತಿಹಾಸದಲ್ಲಿನ ಎಲ್ಲಾ ಸೂತ್ರಗಳು ಮಾನವನ ಬದುಕಿನ ವಿಧಾನದಲ್ಲಿನ ಬೆಳವಣಿಗೆಯ ಹಂತದಿಂದ ಕೂಡಿದ್ದುವಂಥದ್ದೇ ಆಗಿದೆ. ಇನ್ನು ಅಲೆಮಾರಿ ಬಡಕಟ್ಟು ಸಮುದಾಯವಾದ ಹಕ್ಕಿಪಿಕ್ಕಿಯರ ಚಾರಿತ್ರಿಕ ಬೆಳವಣಿಗೆಗಳು ದುಡಿಮೆಯ ಆಧಾರದ ಮೇಲೆ ತನ್ನ ನೆಲೆಯನ್ನು ಗುರುತಿಸಿಕೊಂಡಿದ್ದಾರೆ. ಹಕ್ಕಿಪಿಕ್ಕಿಯರ ಪರಂಪರಾಗತವಾದ ಇತಿಹಾಸವನ್ನು ಗಮನಿಸಿದಾಗ, ಸಮುದಾಯದ ಬೆಳವಣಿಗೆಯಲ್ಲಿ ಪ್ರಕೃತಿಯ ಅವಲಂಬನೆ ಸ್ಪಷ್ಟವಾಗಿ ಗೋಚರಿಸುವುದು. ಪ್ರಕೃತಿಸ್ಥಿತಿಯಿಂದಲೇ ಸಂಸ್ಕೃತಿ ಸ್ಥಿತಿಗೇರುವ ವಿವಿಧ ಹಂತಗಳಲ್ಲಿನ ಎಲ್ಲಾ ಹೋರಾಟಗಳು ಉತ್ಪಾದನೆ, ವಿತರಣೆ, ಹಂಚಿಕೆ, ಅನುಭೋಗದ ವ್ಯವಸ್ಥೆಯಲ್ಲಿನ ಬದಲಾವಣೆಯಿಂದ ಕೂಡಿದ್ದಂಥವುಗಳೇ ಆಗಿವೆ. ಇಂತಹ ಎಲ್ಲಾ ಬದಲಾವಣೆಗಳು ಸಂಘರ್ಷದಿಂದಲೇ ಬಂದವುಗಳು. ಪ್ರಾಚೀನ ಕಾಲದ ತಲೆಮಾರಿನಿಂದ ಬುಡಕಟ್ಟು ಸಮುದಾಯವಾದ ಹಕ್ಕಿಪಿಕ್ಕಿಯರು ತಮ್ಮ ನೆಲೆಗಾಗಿ ಹೋರಾಟ ಮಾಡುತ್ತಾ ಬಂದಿರುವುದನ್ನು ಗಣವ್ಯವಸ್ಥೆಯ ಪದ್ಧತಿಯಿಂದಲೇ ಕಾಣಬಹುದು.

ಪ್ರಾಚೀನ ಕಾಲದಿಂದಲೂ ಬುಡಕಟ್ಟು ಸಮುದಾಯ ಶೋಷಣೆಯನ್ನು ಅನುಭವಿಸುತ್ತಾ, ಪ್ರಭಾವಿ ಜನ ಸಮುದಾಯಗಳು ಇವರನ್ನು ತಿರಸ್ಕೃತ ಜನರಂತೆ ಕಾಣುತ್ತಿದ್ದಾರೆ. ಸಾಮಾಜಿಕ ಶ್ರೇಣೀಕರಣದ ಕಾರಣಗಳನ್ನು ಮುಂದೆ ಮಾಡಿ ನಿರಂತರವಾಗಿ ಶೋಷಿಸುತ್ತಿರುವುದು ವಾಸ್ತವದ ಸಂಗತಿ. ಹೀಗಾಗಿ ಹಕ್ಕಿಪಿಕ್ಕಿ ಸಮುದಾಯದ ಬೆಳಗಣಿಗೆಯ ವಿಧಾನಗಳು ಉತ್ಪಾದನಾ ವಿಧಾನದಲ್ಲಿನ ಬದಲಾವಣೆಗನುಗುಣವಾಗಿ ಬೆಳೆದು ಬಂದಂತವುಗಳು. ನಿಸರ್ಗ ನೀಡಿದ್ದ ನೈಸರ್ಗಿಕ ಸಂಪನ್ಮೂಗಳನ್ನು ಬಳಸಿಕೊಂಡು ಜೀವನೋಪಾಯ ವಿಧಾನಗಳನ್ನು ವಿಸ್ತರಿಸತೊಡಗಿದರು. ಹೀಗಾಗಿ ಸ್ಥಳದಿಂದ ಸ್ಥಳಕ್ಕೆ ತಮಗೆ ಬೇಕಾದ ಪ್ರಶಸ್ತವಾದ ಸ್ಥಳವನ್ನು ಹುಡುಕುತ್ತಾ ತಿರುಗಾಡಬೇಕಾದ ಪರಿಸ್ಥಿತಿಯು ಸಂಪತ್ತಿನ ಬಳಕೆಗೆ ಮೂಲವಾಗಿದ್ದಿತು.

ಪ್ರಗತಿಯ ಹಾದಿಯನ್ನು ನಿರ್ಮಿಸ ಹೊರಟ ಮಾನವ, ತನ್ನೆಲ್ಲಾ ಬದಲಾವಣೆಗೆ ಉತ್ಪಾದನಾ ವಿಧಾನದಲ್ಲಿನ ಬದಲಾವಣೆಯ ಮಾನದಂಡಗಳೇ ಕಾರಣವೆಂಬುದು ತಿಳಿದಿರಲಿಲ್ಲ. ತಾನು ವಾಸಿಸುವ ನೆಲೆಯ ಪರಿಸರದಲ್ಲಿನ ಅರಣ್ಯ, ಭೂಸಂಪತ್ತು ತನ್ನೆಲ್ಲಾ ಬಯಕೆಗಳನ್ನು ಈಡೇರಿಸುವ ಶಕ್ತಿಯನ್ನು ಹೊಂದಿದೆ ಎಂದೇ ನಂಬಿದ್ದ. ಹೀಗಾಗಿ ತನ್ನಲ್ಲಿನ ಪ್ರಕೃತಿಯನ್ನು ಆರಾಧಿಸುತ್ತಾ, ಜೊತೆಜೊತೆಗೆ ತಮ್ಮ ಉತ್ಪಾದನಾ ವಿಧಾನವನ್ನು ರೂಪಿಸ ಹೊರಟ ಇವರುಗಳು ಆಹಾರದ ಮೂಲವಾಗಿ ಜೀವಿಸುವ ಪರಿಸರವನ್ನು ಹುಡುಕುತ್ತಾ, ಜೀವನಾವಶ್ಯಕ ವಸ್ತುಗಳ ಸಂಪತ್ತನ್ನು ಹುಡುಕುತ್ತಾ ಅಲೆಮಾರಿಯಾಗಿ ಹಂತದಿಂದ ಹಂತಕ್ಕೆ ಪರಿವರ್ತನೆಯಾಗತೊಡಗಿದರು. ಇಂತಹ ಬದಲಾವಣೆಯು ಕೇವಲ ಆಹಾರೋತ್ಪಾದನೆಯ ಮೂಲವಾಗಿ ಭೂಮಿಯ ಮೇಲೆ ಹರಡಿಕೊಂಡು ಗೊತ್ತಾದ ಸ್ಥಳಗಳಲ್ಲಿ ಸ್ವತಂತ್ರ್ಯವಾಗಿ ಜೀವಿಸುವಂತೆ ಅಲೆಯತೊಡಗಿದ ಸಂದರ್ಭದಲ್ಲಿ ಕಾಡು ಮುಖ್ಯವಾದ ಕೇಂದ್ರವಾಗತೊಡಗಿತು.

ಪ್ರಾಕೃತಿಕ ಸಂಪನ್ಮೂಲಗಳನ್ನು ಬಳಸಿಕೊಂಡು ಬೇಟೆಯಾಡುವುದು ಜೀವನಕ್ಕೆ ಆಹಾರವನ್ನು ಒದಗಿಸುವ ಮೂಲವಾಗಿತ್ತು. ಆಹಾರ ಪದಾರ್ಥಗಳ ಉತ್ಪನ್ನಗಳನ್ನು ಪಡೆಯುವ ಸಲುವಾಗಿ ಬೇಟೆಯನ್ನು ಅವಲಂಬಿಸಬೇಕಾಯಿತು. ಇಂತಹ ಬೇಟೆಯ ಪದ್ಧತಿಯು ಹೊಟ್ಟೆಪಾಡಿನ ಬಹುದೊಡ್ಡ ಮಾರ್ಗವಾಗಿ ಕಾಣತೊಡಗಿತ್ತು. ಈ ಸಮುದಾಯ ಆಹಾರದ ಸಂಗ್ರಹಣೆಯಿಂದಲೇ ಬೇಟೆಗೆ ಸ್ಥಿತ್ಯಂತರಗೊಳ್ಳತೊಡಗಿತು. ಬೇಟೆಯ ಉಪಯೋಗವು ಆರ್ಥಿಕ ಸಂಪನ್ನರಾಗಿ ಮಾಡುವಂತೆ ಕಂಡು ಬರತೊಡಗಿದ ಪರಿಣಾಮವಾಗಿ ಆಹಾರದ ಮೂಲ ಹಾಗು ಮಾರಾಟದ ಮೂಲವಾಗಿ ಬೇಟೆಯಲ್ಲಿ ತೊಡಗುವಂತೆ ಮಾಡಿತ್ತು. ಹೀಗಾಗಿ ಪಾರಂಪರಿಕ ಉತ್ಪಾದನಾ ವಿಧಾನದಲ್ಲಿ ಬೇಟೆ ಮತ್ತು ವ್ಯಾಪಾರ ಪ್ರಮುಖ ಸ್ಥಾನಗಳಿಸಿತ್ತು.

**ಬೇಟೆ**

ವಾನರಾವಸ್ಥೆಯಿಂದ ಮಾನವಸ್ಥೆಯವರೆಗಿನ ಮಾನವನ ಇತಿಹಾಸವನ್ನು ನಾವು ಗಮನಿಸಿದಾಗ, ಬೇಟೆಯ ವಿವಿಧ ಹಂತಗಳ ಬಗ್ಗೆ ತಿಳಿದು ಬರುತ್ತದೆ. ಮನುಷ್ಯನ ಹುಟ್ಟಿನೊಂದಿಗೆ ಬಂದ ಹಸಿವು ಆತನ ಅಂತ್ಯದವರೆಗೂ ಬಿಟ್ಟಿಲ್ಲ. ಆರಂಭದಲ್ಲಿ ಗಡ್ಡೆಗೆಣಸು, ಹಣ್ಣುಹಂಪಲುಗಳನ್ನು ತಿಂದು ಜೀವಿಸುತ್ತಿದ್ದ. ಕಾಡು ಪ್ರಾಣಿಗಳ ಆಹಾರ ಉತ್ಪಾದನಾ ಚಟುವಟಿಕೆಗಳನ್ನು ಗಮನಿಸಿದ. ಕಾಲಾಂತರದಲ್ಲಿ ತನ್ನ ಆಹಾರ ಉತ್ಪಾದನಾ ವಿಧಾನದಲ್ಲಿ ಬದಲಾವಣೆಗಳನ್ನು ತಂದು ಕೊಂಡ, ಕೆಲವು ಪ್ರಾಣಿಗಳನ್ನು ಆಹಾರಕ್ಕಾಗಿ ಬೇಟೆಯಾಡುವುದು, ಇನ್ನು ಕೆಲವನ್ನು ಪಳಗಿಸಿ ತನ್ನ ಸಂಗಾತಿಯನ್ನಾಗಿ ಮಾಡಿಕೊಂಡ. ಹೀಗಾಗಿ ಬೇಟೆಯು ಅಂದಿನ ಪ್ರಮುಖ ಆಹಾರ ಉತ್ಪಾದನಾ ಮೂಲವಾಗಿತ್ತು. 'ಬೇಟೆಗಾಗಿ ಬಳಸುತ್ತಿದ್ದ ಕಲ್ಲು,ಕೋಲುಗಳು, ಸತ್ತ ಪ್ರಾಣಿಗಳನ್ನು ಕಟ್ಟಲು ಬಳಸುತ್ತಿದ್ದ ಬೇರುಗಳು, ಬಳ್ಳಿಗಳು, ನಾರುಗಳು, ಕಾಲಕಳೆದಂತೆ ಬೇರೆ ಬೇರೆ ರೂಪಗಳನ್ನು ಪಡೆದು ಬೇಟೆಗಾಗಿಯೇ ತಯಾರಿಸಿದ ಆಯುಧಗಳಾಗಿ, ಬಲೆಗಳಾಗಿ ಬದಲಾದವು.'[೬].ಬೇಟೆಯು ಸಹ ಪ್ರದೇಶದಿಂದ ಪ್ರದೇಶಕ್ಕೆ, ಸಮುದಾಯದಿಂದ ಸಮುದಾಯಕ್ಕೆ ಕೆಲವು ಅನಿವಾರ್ಯ ಬದಲಾವಣೆಗಳೊಂದಿಗೆ ಸಾಗಿ ಬರುತ್ತಿರುವುದನ್ನು ನಾವು ಕಾಣಬಹುದು.

ಹಕ್ಕಿಪಿಕ್ಕಿಯರು ಉತ್ತಮ ಬೇಟೆಗಾರರು. ಸಾಮಾನ್ಯವಾಗಿ ಒಬ್ಬರೇ ಬೇಟೆಗೆ ಹೋಗುವುದು ರೂಢಿ. ಕೆಲವು ಬಾರಿ ಕೂಡು ಬೇಟೆಯನ್ನು ಸಹ ಮಾಡುವುದು ಈ ಜನರ ವಾಡಿಕೆಯಂತೆ. ಬೇಟೆಗೆ ಹೋಗುವ ಮುನ್ನ ಹಿರಿಯರ ಮಾರ್ಗದರ್ಶನ ಪಡೆದು ಕುಲದೇವತೆಯಲ್ಲಿ ಪೂಜೆ ಸಲ್ಲಿಸಿ ಹೊರಡುವರು. ಇನ್ನು ಕೆಲವರು ಬೇಟೆಗೆ ಹೋಗಲು ಅನಾನುಕೂಲವಾದರೆ ತಮ್ಮ ಕುಟುಂಬದಿಂದ ಒಬ್ಬ ಸದಸ್ಯನನ್ನು ಮತ್ತು ತಮ್ಮಲ್ಲಿರುವ ಬೇಟೆಯ ಆಯುಧಗಳನ್ನು ಬೇರೊಬ್ಬರಿಗೆ ಕೊಡುವರು. ಬೇಟೆಗೆ ಹೋಗಲು ಬೆಳಿಗ್ಗೆ ೬ ಗಂಟೆಗೆ ಒಳ್ಳೆಯ ಸಮಯವಂತೆ. ಬೆಳಿಗ್ಗೆ ಬೇಟೆಗೆ ಹೋದರೆ ಬರುವುದು ಮಧ್ಯಾನ್ಹ ೧೨ ಗಂಟೆಗೆ. ಮಧ್ಯಾನ್ಹ ಬಂದು ಬೇಟೆಯಾಡಿದ್ದ ಪ್ರಾಣಿ ಅಥವಾ ಹಕ್ಕಿಯನ್ನು ಮನೆಯಲ್ಲಿಟ್ಟು, ಮನೆಯಲ್ಲಿನ ರಾಗಿಯನ್ನು ಕಲ್ಲಿನಿಂದ ಬೀಸಿ ರೊಟ್ಟಿಯನ್ನು ಗಂಡಸರೇ ಮಾಡಿ ತಿನ್ನುತ್ತಿದ್ದರು. ಹೆಂಗಸರು ಹಳ್ಳಿಗಳ

ಮೇಲೆ ವ್ಯಾಪಾರ ಮಾಡಲು ಹೋಗಿರುತ್ತಿದ್ದರು. ಗಂಡಸರು ಮತ್ತೆ ಸಂಜೆ ೪ ಗಂಟೆಗೆ ಬೇಟೆಗೆ ಹೋಗುತ್ತಿದ್ದರು. ಸಂಜೆಯ ಬೇಟೆಯು ಇವರುಗಳಿಗೆ ವಿಶೇಷವಾಗಿತ್ತು. ಸಂಜೆ ಬೇಟೆಯಿಂದ ಮರಳಿ ಬರುವ ವೇಳೆಗೆ ಮಹಿಳೆಯರು ಬಂದು ಮನೆಯಲ್ಲಿ ಊಟದ ವ್ಯವಸ್ಥೆಗೆ ಅಣಿಗೊಳಿಸುತ್ತಿದ್ದರು. ಪುರುಷರು ಬೇಟೆಯಿಂದ ಬರುವ ವೇಳೆಗೆ ಮನೆಯಲ್ಲಿ ಮಾಂಸಹಾರಕ್ಕೆ ಬೇಕಾದ ಎಲ್ಲಾ ಸಾಮಾಗ್ರಿಗಳನ್ನು ಮಹಿಳೆಯರು ಹೊಂದಿಸಿಕೊಳ್ಳುತ್ತಿದ್ದರು. ಸಿಕ್ಕ ಬೇಟೆಯು ದೊಡ್ಡದಾಗಿದ್ದರೆ ಹಲವು ಬಾರಿ ವ್ಯಾಪಾರಕ್ಕೂ ಬಳಸಿಕೊಳ್ಳುತ್ತಿದ್ದರು. ಹೀಗಾಗಿ ಬೇಟೆಯಿಂದ ತರುವ ಪ್ರಾಣಿಯು ಅಂದಿನ ಪ್ರಮುಖ ಆಹಾರವಾಗಿರುತ್ತಿತ್ತು.

ಬೇಟೆಯ ವಿಷಯದಲ್ಲಿ ಹಕ್ಕಿಪಿಕ್ಕಿಯರು ಎತ್ತಿದ ಕೈ. ಸಿಕ್ಕರೆ ಶಿಕಾರಿ ಎಂಬ ಗಾದೆಯನ್ನು ಸುಳ್ಳು ಮಾಡುವಂತವರು. ಬೇಟೆಯು ಮೂಲ ಕಸಬು. ಹೀಗಾಗಿ ಬೇಟೆಯ ಅವಲಂಬನೆ ಹಕ್ಕಿಪಿಕ್ಕಿಯರಲ್ಲಿ ಸಾಮಾನ್ಯವಾಗಿತ್ತು. ಕೆಲವು ಬಾರಿ ಆಹಾರದ ಬೇಟೆಯು ವಿಶೇಷವಾಗಿರುತ್ತಿತ್ತು. ಅಂತಹ ಬೇಟೆಯಲ್ಲಿ ಒಬ್ಬನೇ ಭಾಗವಹಿಸುತ್ತಿದ್ದನು. ಇನ್ನು ವ್ಯಾಪಾರದ ಉದ್ದೇಶಕ್ಕೆ ವಿಶೇಷವಾಗಿ ಹಲವಾರು ರೀತಿಯ ಮುಂಚಿತವಾದ ತಿಳುವಳಿಕೆ ಗುರುತಿಸಿಕೊಂಡು ವ್ಯಾಪಾರಕ್ಕೆ ಬೇಕಾದ ಪ್ರಾಣಿ, ಹಕ್ಕಿಗಳನ್ನು ಮಾತ್ರ ಬೇಟೆಯಾಡುತ್ತಿದ್ದರು. ಆದರೆ ಬೇಟೆಯಾಡುವ ಸಮಯದಲ್ಲಿ ಸೂಕ್ಷ್ಮ ಸ್ವಭಾವದಿಂದ ವರ್ತಿಸುವುದರಿಂದ ಮೊದಲುಗೊಂಡು ಬೇಟೆಯ ಪ್ರಾಣಿಯನ್ನು ಗುರಿಮಾಡಿ ಒಡೆಯುವವರೆಗೂ ಅತಿ ಜಾಗ್ರತೆಯಿಂದ ನಡೆದು ಕೊಳ್ಳುತ್ತಿದ್ದರು. ತನಗೆ ಬೇಕಾದ ಪ್ರಾಣಿಯನ್ನು ಪಡೆದೇ ಪಡೆಯುವ ನೇರ ಗುರಿ ಹೊಂದಿರುತ್ತಿದ್ದರು. ಯಾವುದೇ ಪ್ರಾಣಿಯನ್ನು ಕಂಡ ತಕ್ಷಣ ಬೇಟೆಗಾರನಿಗೆ ಆ ಪ್ರಾಣಿಯನ್ನು ಒಡೆಯುವ ವಿಧಾನಗಳು ತಟ್ಟನೆ ಜ್ಞಾಪಕಕ್ಕೆ ಹೊಳೆಯುತ್ತಿದ್ದವು. ಈ ರೀತಿಯ ಬುದ್ಧಿವಂತಿಕೆಯಿಂದ ತಕ್ಷಣವೇ ಕ್ರಿಯಾಶೀಲನಾಗುತ್ತಾ ಬೇಟೆಗಾರ ಕ್ಷಣಾರ್ಧದಲ್ಲಿ ಬೇಟೆಯನ್ನು ಹೊಡೆದು ಉರುಳಿಸುತ್ತಿದ್ದನು. ಇನ್ನು ಇವರುಗಳು ಬಳಸುವ ಬೇಟೆಯ ತಂತ್ರಗಳು ಅಷ್ಟು ಸುಲಭವಾಗಿ ಯಾರಿಗಾದರೂ ಹೇಳಿಕೊಡಲು ಬರುತ್ತಿದ್ದರೂ ಸಹ ಯಾರಿಗೂ ಹೇಳಿಕೊಡುತ್ತಿರಲಿಲ್ಲ. ಬೇಟೆಗೆ ಹೋಗುವಾಗ ಹಲವು ವಿಧವಾದ ಬಲೆ, ಕೊಡಲಿ, 'X' ಆಕಾರವ ಕಡ್ಡಿಯ ಬಲೆ, ಊರುಲು, ಚಾಟ್ ಬಿಲ್, ಜಿರುಕುಣಿಕೆ, ಪಾಜಿ, ಕಾಲುರುಲು, ಕಾಂದರೂ ಇತ್ಯಾದಿಗಳನ್ನು ಬಳಸುತ್ತಿದ್ದರು. ಈ ಎಲ್ಲಾ ವಸ್ತುಗಳನ್ನು ಅತ್ಯಂತ ಕಲಾತ್ಮಕ ಹಾಗು ವೈಜ್ಞಾನಿಕವಾಗಿ ನಾರಿನಿಂದ ಕೆಲವು ಬಾರಿ ತಂಗೂಸ್ ತಂತಿಯಿಂದ ಹಾಗು ಬಿದಿರಿನ ಸಣ್ಣ ಕಡ್ಡಿಗಳಿಂದ ತಯಾರಿಸಿಕೊಂಡಿರುತ್ತಿದ್ದರು.

ಪ್ರಾಣಿ ಮತ್ತು ಪಕ್ಷಿಗಳು ಯಾವ ಕಾಲದಲ್ಲಿ ಹೆಚ್ಚಾಗಿ ಎಲ್ಲೆಲ್ಲಿ ಸಿಕ್ಕುತ್ತವೆ ಎನ್ನುವ ಪರಿಜ್ಞಾನವೂ ಹಕ್ಕಿಪಿಕ್ಕಿಯರಿಗೆ ಇದೆ. ಹೀಗಾಗಿ ಕೆಲವು ಬಾರಿ ಕಾಲಮಾನದಿಂದಲೇ ಇಂಥದೇ ಬೇಟೆ ಮಾಡಬೇಕು ಎಂದು ಸಹ ನಿರ್ಧರಿಸಿಕೊಳ್ಳುತ್ತಿದ್ದರು. ಅನಾವಶ್ಯಕವಾಗಿ ಬೇಟೆಗೆ ಹೋಗುವ ಸ್ವಭಾವದವರಲ್ಲ. ಇನ್ನು ಬೇಟೆಯು ಅಭಯಾರಣ್ಯದಲ್ಲಿನ ಬೇಟೆ ಹಾಗು ಗುಡ್ಡ ಅಥವಾ ಕುರುಚಲು ಕಾಡಿನ ಬೇಟೆಗಿಂತ ಬೇರೆಯಾಗಿತ್ತು. ಕುರುಚಲು ಕಾಡಿನಲ್ಲಿ ಬೇಟೆಯಾಡುವ ಪ್ರಾಣಿ, ಪಕ್ಷಿಗಳ ಬಗ್ಗೆ ಅವುಗಳು ವಾಸಿಸುವ

ಸ್ಥಳದ ಬಗ್ಗೆ, ಬೇಟೆಯ ಸ್ಥಳದಲ್ಲಿ ನೆಲೆಸಿರುವ ಬಗ್ಗೆ ವಿಶೇಷವಾಗಿ ಮೊದಲೇ ತಿಳಿದಿರುತ್ತಿದ್ದರು. ಜೊತೆಗೆ ಬೇಟೆ ಮಾಡುವ ಪ್ರಾಣಿ, ಹಕ್ಕಿಗಳ ಜೀವಶಾಸ್ತ್ರದ ಅರಿವು ಹೆಚ್ಚು ಹಕ್ಕಿಪಿಕ್ಕಿಯರಿಗೆ ಇದೆ. ಹೀಗೆ ಮರಸು ಬೇಟೆಯಿಂದ ಹಿಡಿಯುವ ಹಕ್ಕಿಗಳು ಉತ್ತಮ ಆದಾಯವನ್ನು ತಂದು ಕೊಡುತ್ತಿದ್ದವು. ಎತ್ತು ಅಥವಾ ಹಸುಗಳನ್ನು ಉಪಯೋಗಿಸಿ ಹಕ್ಕಿಯನ್ನು ಹಿಡಿಯಲು ಈ ಪ್ರಾಣಿಗಳನ್ನು ಸಾಕುತ್ತಿದ್ದರು. ಇದಕ್ಕಾಗಿಯೇ ಈ ಪ್ರಾಣಿಗಳನ್ನು ಚೆನ್ನಾಗಿ ಪಳಗಿಸಿಕೊಂಡು ಬೇಟೆಗೆ ಹಾಗು ಪಶುಪಾಲನೆಗೆ ಸಹಕಾರಿಯಾಗುವಂತೆ ಮಾಡಿಕೊಂಡಿರುತ್ತಿದ್ದರು.

ಆಹಾರದ ಮೂಲವಾಗಿ ಅವಲಂಬಿಸಿದ ಬೇಟೆಯು ಹಕ್ಕಿಪಿಕ್ಕಿಯರ ಮೂಲ ವೃತ್ತಿಯು ಹೌದು. ಈ ಬೇಟೆಯಿಂದಲೇ ಜೀವನ ವಿಧಾನವನ್ನು ರೂಪಿಸಿಕೊಂಡಿದ್ದ ಕಾಲೋನಿಯ ಜನರು ಬೇಟೆಯ ಬಗ್ಗೆ ವಿಶೇಷ ನಿಲುವು ಹೊಂದಿದ್ದರು. ಇಲ್ಲಿನ ನಿವಾಸಿಗಳು ಹೇಳುವಂತೆ, ಬೇಟೆಯ ಬಗ್ಗೆ, ಬೇಟೆ ಮಾಡೊದು ವಂಶ ಪರಂಪರ್ಯವಾಗಿ ಬಂದದ್ದು. ಆರಂಭದಲ್ಲಿ ಬೇಟೆ ಹಲವು ವಿಶೇಷತೆಗಳಿಂದ ಕೂಡಿದ್ದಿತು. ಹೀಗಾಗಿ ಬೇಟೆಯ ಬಗ್ಗೆ ತಿಳುವಳಿಕೆ, ರಕ್ತಗತವಾಗಿ ಬಂದಿದೆ ಎನ್ನುತ್ತಾರೆ. ನಮ್ಮ ಪೂರ್ವಿಕರ ಕಾಲದ ಬೇಟೆಯಿಂದಲೇ ನಾವು ಸಂತೋಷವಾಗಿದ್ದೇವೆ. ನಮ್ಮ ಎಲ್ಲಾ ಹಬ್ಬಗಳು, ಆಚರಣೆಗಳು, ಸಂಪ್ರದಾಯಗಳು ಬೇಟೆಮಾಡಿ ಬರುವ ಹಣದಿಂದಲೇ ನಡೆಯುತ್ತಿತ್ತು. ಬೇಟೆಯ ವಸ್ತುವನ್ನು ಸುತ್ತಲಿನ ಹಳ್ಳಿಗಳ ಮೇಲೆ ಹೋಗಿ ಮಾರಾಟ ಮಾಡುತ್ತಿದ್ವಿ. ಅಲ್ಲಿಂದ ರಾಗಿ, ಅಸೀಟ್ಟು, ಕಾಸು (ಹಣ) ತರುತ್ತಿದ್ದೀವಿ. ಕಾಡು-ನಾಡು ನಮಗೆ ಜೀವನಕ್ಕೆ ಬೇಕಾದ ಊಟ ಕೊಡುತ್ತಿತ್ತು. ಅದಕ್ಕೆ ನಾವು ಎಲ್ಲಿ ಸರಿಯಾಗಿ ಇರುತ್ತಿರಲಿಲ್ಲ. ೬ ದಿನ ಆದ ಮೇಲೆ ಜಾಗ ಬದಲಾಯಿಸುತ್ತಿದ್ದೀವಿ ಎನ್ನುತ್ತಾರೆ.

ಬನ್ನೇರುಘಟ್ಟದ ಭೂತಾನಹಳ್ಳಿ ಹಕ್ಕಿಪಿಕ್ಕಿ ಕಾಲೋನಿಯ ಹಿರಿಯರು. ತಮ್ಮ ಜೀವನ ವಿಧಾನದಲ್ಲಿಯ ಆಹಾರ ಸಂಗ್ರಹಣೆಯ, ಪಾರಂಪರಿಕ ತಿಳುವಳಿಕೆಯನ್ನು ಈ ರೀತಿ ಹೇಳುತ್ತಾರೆ.

'ನಮ್ಮದು ಬೇಟೆ ಮಾಡೋದು ಕೆಲಸ. ಅದು ನಮ್ಮ ತಾತಾ ಮುತ್ತಾತನವರು ಮಾಡಿಕೊಂಡು ಬಂದ ಅವರಿಂದಲೇ ನಾವು ಕಲಿತದ್ದು. ಆ ಕಾಲದಲ್ಲಿ ನಾವು ಕಾಡಿನಲ್ಲಿ ಹಕ್ಕಿಗಳನ್ನು ಹಿಡಿದು ಆಹಾರಕ್ಕೆ ಬಳಸುತ್ತಿದ್ದೆವು, ಉಳಿದ ಹಕ್ಕಿಗಳನ್ನು ಮಾರಾಟ ಮಾಡಿ ಜೀವನ ಮಾಡುತ್ತಿದ್ದೆವು. ನಮಗೆ ರೇಷನ್ ಬಿಕ್ಕಟ್ಟು ಇರಲಿಲ್ಲ. ಆದರೆ ದುಡ್ಡು ಬಿಕ್ಕಟ್ಟಿತ್ತು. ಒಂದು ರೂಪಾಯಿ ಒಂದು ವಾರ ಖರ್ಚು ಮಾಡುತ್ತಿದ್ದೆವು. ಬೇಟೆ ಮಾಡಿ ಬಂದ ದುಡ್ಡಿನಿಂದ ದೇವರಿಗೆ ಮೀಸಲು ಕಟ್ಟುತ್ತಿದ್ದೆವು. ನಮ್ಮ ಹಿರಿಯರು ಬೇಟೆಗೆ ಹೋಗಬೇಕೆಂದರೆ ಶಾಸ್ತ್ರ ಕೇಳಿ ಕಬ್ಬಾಳಮ್ಮನ ಪೂಜೆ ಮಾಡಿ ಬೇಟೆಗೆ ಹೋಗುತ್ತಿದ್ದರು. ಕಾಡಿನಲ್ಲಿ ಎಲ್ಲಾ ಹಕ್ಕಿಗಳನ್ನು ಹಿಡಿಯುತ್ತಿದ್ದೆವು. ಆ ಹಕ್ಕಿಗಳಿಂದ ಚರ್ಮ, ಎಣ್ಣೆ, ಮಾಂಸ ತೆಗೆದುಕೊಂಡು ಬೇಕಾದದ್ದು ಮಾಡಿಕೊಂಡು ತಿನ್ನುತ್ತಿದ್ದೆವು. ಹೆಚ್ಚಿಗೆ ಬೇಟೆ ಆದರೆ ಹಕ್ಕಿಗಳನ್ನು ಮಾರಾಟ ಮಾಡುತ್ತಿದ್ದೆವು. ಆಗಲೇ ಸುಮಾರು ೫೦೦ ರೂಪಾಯಿ ಕೂಡಿ ಹಾಕುತ್ತಿದ್ದೆವು. ಅದರಲ್ಲಿ

ಒಂದು ಮೇಕೆ ತಂದು ದೇವರಿಗೆ ಕಟ್ಟುವುದು. ಆಮೇಲೆ ದೇವರು ಮಾಡುವುದು, ನಾವೆಲ್ಲಾ ಸೇರಿ ಒಬ್ಬ ಪೂಜಾರಿನಾ ಇಟ್ಟದ್ದೀವಿ. ಎಲ್ಲಾ ಹಿರಿಕರು ಸೇರಿ ಅಮ್ಮನಿಗೆ ಕೈಬಿಡೊದು ಬೇಡ ಅಂತ ಹೇಳಿ ಚೆನ್ನಾಗಿ ಬ್ಯಾಟೆ ಕೊಡಮ್ಮ ಅಂತಾ ಕೇಳುತ್ತಿದ್ದೆವು. ಈಂಗೆ ನಮ್ಮ ಜೀವನ ಬ್ಯಾಟೆದಾಗ ಇತ್ತು' ಎನ್ನುತ್ತಾರೆ. ಕಾಲೋನಿಯ ಆರಂಭದ ಕಾಲದಲ್ಲಿ ಬೇಟೆಯು ಸಮುದಾಯದ ಆಹಾರದ ಸಂಗ್ರಹಣೆಯಾಗಿರದೇ ಅದಕ್ಕೂ ಬಹುದೊಡ್ಡದಾದ ಸಾಂಸ್ಕೃತಿಕ ಪರಂಪರೆಯನ್ನು ಕಟ್ಟಿಕೊಟ್ಟಿತ್ತು. ಬೇಟೆಯಿಂದಲೇ ಆದಾಯಗಳಿಸುತ್ತಿದ್ದ ಇವರುಗಳು ಬೇಟೆಯೊಂದಿಗೆ ಸಾಂಸ್ಕೃತಿಕ ಹಾಗು ಧಾರ್ಮಿಕ ಆಚರಣೆಯ ವಿಶೇಷವಾದ ಪರಂಪರೆಯನ್ನು ಆಚರಿಸುತ್ತಿದ್ದರು. ಬೇಟೆಯಿಂದ ಕುಟುಂಬಗಳಿಗೆ ಆಹಾರವನ್ನು ಒದಗಿಸುವುದಲ್ಲದೇ ಹಣರೂಪಿ ಅದಾಯವನ್ನು ಸಹ ತರುತ್ತಿತ್ತು.

ಬೇಟೆಯ ಹಂತದಲ್ಲಿನ ಹಕ್ಕಿಪಿಕ್ಕಿಯರ ಸಾಮಾಜಿಕ ಮತ್ತು ಭೌಗೋಳಿಕ ವಾತಾವರಣವೂ ಹೆಚ್ಚು ಶ್ರೀಮಂತವಾದ ಆರ್ಥಿಕ ಸ್ಥಿತಿಯನ್ನು ನಿರ್ಮಿಸಿಕೊಟ್ಟದ್ದಿತು. ಬೇಟೆಯು ಪ್ರಧಾನವಾಗಿ ಆಹಾರದ ಸಂಗ್ರಹಣೆಯಾಗಿದ್ದು ಎಷ್ಟೋ ಸಲ ಬೇಟೆಯಿಂದ ಗಳಿಸಿದ ಆದಾಯದಿಂದ ಹಿರಿಯ ಮಗನ ಮದುವೆ ಮಾಡಿದ ಪ್ರಸಂಗವನ್ನು ಸಹ ಇಲ್ಲಿನ ನಿವಾಸಿಗಳು, ಆ ಕಾಲದಲ್ಲಿ ಪ್ಯಾಟೆ (ಪಟ್ಟಣ) ಸಂಪರ್ಕ ಇರಲಿಲ್ಲ. ಕಾಡೇ ನಮಗೆ ಎಲ್ಲಾ. ಆ ಕಾಲದಾಗ ಶೆಡ್ ಹಾಕಿ ೪ ದಿನ ಇರುತ್ತಿದ್ದಿವಿ. ಬೇಟೆಯ ವಸ್ತುಗಳ ಮಾರಾಟದಿಂದ ಬಂದ ಹಣದಿಂದಲೇ ಮಕ್ಕಳ ಮದುವೆ ಮಾಡುತ್ತಿದ್ದಿವಿ. ಸಾಲ ಮಾಡೊಂಗೇ ಇಲ್ಲ.ಹೆಣ್ಣಿನವರಿಗೆ ತೆರ ೩೫ ರೂಪಾಯಿ, ಅಕ್ಕಿ, ಸೀರೆ, ತುಪ್ಪ ಎಲ್ಲಾ ಗಂಡಿನವರು ಕೊಡಬೇಕು. ಆ ಸೊಸೆಗೆ ಯಾವ ಕೆಲಸ ಬರೋದಿಲ್ಲ. ಹಿಂಗೆ ಹೆಣ್ಣಿನ ಕಡೆಯಿಂದ ಯಾವುದೇ ಖರ್ಚು ಇರಲಿಲ್ಲ. ಕಾಡಿನಲ್ಲಿಯೇ ಗುಂಪು ಗುಂಪಾಗಿ ವಾಸಿಸುತ್ತಿದ್ದೇವೆ ಎನ್ನುತ್ತಾರೆ. ಇವರುಗಳಿಗೆ ಬೇಟೆಯಾಡುವುದು ಆಯಾಸವ ಕೆಲಸವಾಗಲಿ ಅಥವಾ ಶ್ರಮದ ಕೆಲಸವಾಗಿರಲಿಲ್ಲ. ಹಕ್ಕಿಪಿಕ್ಕಿಯರು ಚಾಟಿಬಿಲ್ಲಿನೋ ಅಥವಾ ತಟ್ಟೆಬಿಲ್ಲಿನೋ, ಕವಣೆಯನ್ನೇ ಹಿಡಿದು ಹೊರಟರೆ ಕೆಲವೇ ಗಂಟೆಗಳಲ್ಲಿ ಹಕ್ಕಿಗಳನ್ನು ಹೊಡೆದು ತರುತ್ತಿದ್ದರು. ಅದು ಅಂದಿನ ಮಾಂಸಹಾರದ ಸಾರಿಗೆ ಗ್ರಾಸವನ್ನೊದಗಿಸುತ್ತಿತ್ತು. ಹಕ್ಕಿಪಿಕ್ಕಿಯರ ಬೇಟೆಯ ಕ್ರಮವನ್ನು ಈ ರೀತಿ ವಿಭಜಿಸಬಹುದು.

೧ ಪ್ರಾಣಿಗಳ ಬೇಟೆ

೨ ಹಕ್ಕಿಗಳ ಬೇಟೆ

೩ ಜಲಜೀವಿಗಳ ಬೇಟೆ

೪ ಜೇನು ಬೇಟೆ

ಎಷ್ಟೋ ಸಲ ಹಕ್ಕಿಪಿಕ್ಕಿಯರು ವಾಸಿಸುವ ಸ್ಥಳಗಳ ಸುತ್ತಮುತ್ತಲಿನ ಪ್ರದೇಶಗಳಲ್ಲಿಯೇ ಚಾಣಾಕ್ಷತೆಯಿಂದ ಹಲವಾರು ಹಕ್ಕಿಗಳನ್ನು ಹೊಡೆದು ತರುತ್ತಿದ್ದರು. ಹೀಗಾಗಿ ಮೇಲಿನ ೪ ಹಂತದ ಬೇಟೆಯ ವಿಧಾನದಿಂದ ಪ್ರಾಣಿಗಳ ಉತ್ಕೃಷ್ಟ ಮಾಂಸ, ಎಣ್ಣೆ ಮತ್ತು ಚರ್ಮ ಬಹಳ ಬೆಲೆಯುಳ್ಳ

ವಸ್ತುಗಳನ್ನು ಸಂಗ್ರಹಿಸುತ್ತಿದ್ದರು. ಇಂತಹ ವಸ್ತುಗಳ ಮಾರಾಟದಿಂದಲೂ ಸಹ ಹಣದ ರೂಪದಲ್ಲಿ ಆದಾಯಗಳಿಸುತ್ತಿದ್ದರು. ಕೆಲವೊಂದು ವಸ್ತುಗಳ ಮಾರಾಟ ಇಂದಿಗೂ ಸಹ ಬಿಡದೆ ವ್ಯಾಪಾರ ಮಾಡುತ್ತಿರುವುದು ಭೂತಾನಹಳ್ಳಿ ಕಾಲೋನಿಯ ಜನರಲ್ಲಿ ಕಾಣಬಹುದು.

ಪ್ರಾಣಿಗಳ ಬೇಟೆಯಲ್ಲಿ ಹಕ್ಕಿಪಿಕ್ಕಿಯರು ಪರಿಣಿತರು. ಆದಿಕಾಲದಿಂದಲೂ ಬಂದಂತಹ ಬೇಟೆಯು ವಿಧಿ ವಿಧಾನಗಳನ್ನು ಅನುಸರಿಸಿದರೂ ತಮ್ಮ ತಂತ್ರಜ್ಞಾನ ಹಾಗು ಸೂಕ್ಷ್ಮ ಮತೀಯ ಬುದ್ದಿ ಶಕ್ತಿಯಿಂದ ಹಲವು ವಿಧವಾದ ಸೂಕ್ಷ್ಮ ಪ್ರಾಣಿಗಳ ಬೇಟೆಯಾಡಲು ಸುಲಭವಾಗುತ್ತಿತ್ತು. ಪ್ರಾಣಿಗಳ ಬೇಟೆಯು ಮುಖ್ಯವಾಗಿ ಆದಾಯಗಳಿಸುವ ಉದ್ದೇಶದಿಂದಲೇ ಬೇಟೆಯಾಡುತ್ತಿದ್ದರು. ಹೀಗಾಗಿ ಹಕ್ಕಿಪಿಕ್ಕಿಯರು ವಾಸಿಸುವ ಸ್ಥಳಗಳಿಗೆ ಅನುಗುಣವಾಗಿ ತಮಗೆ ಅನುಕೂಲವಾದ ಪ್ರಾಣಿಗಳನ್ನು ಬೇಟೆಮಾಡಲು ಮುಂದಾಗುತ್ತಿದ್ದರು. ಇನ್ನು ಮುಖ್ಯವಾಗಿ ಪ್ರಾಣಿಗಳ ಬೇಟೆಯಾಡುವ ಮುಂಚೆ ಬೇಟೆಯ ಪ್ರಾಣಿಗಳ ಉಪಯೋಗ ಹಾಗು ಆದಾಯ ತರುವ ಪ್ರಮುಖ ಅಂಗಗಳನ್ನು ಗುರುತಿಸುತ್ತಿದ್ದರು.

ಪ್ರಾಣಿಗಳ ಬೇಟೆಯಲ್ಲಿ ರಾತ್ರಿ ಬೇಟೆಯು ಸಹ ಮುಖ್ಯವಾಗಿತ್ತು. ರಾತ್ರಿ ಬೇಟೆಯಿಂದ ಮೊಲಗಳನ್ನು ಹಿಡಿಯುತ್ತಿದ್ದರು. ಕೆಲವು ಬಾರಿ ಜಿಂಕೆಗಳನ್ನು ಹಿಡಿಯುತ್ತಿದ್ದರು. ರಾತ್ರಿಯ ಬೇಟೆಯಲ್ಲಿ ಸಾಮಾನ್ಯವಾಗಿ ಕೂಡು ಬೇಟೆಯಿಂದಲೇ ತಮ್ಮ ಬೇಟೆಯನ್ನು ಆರಂಭಿಸುತ್ತಿದ್ದರು. ದೊರೆತ ಪ್ರಾಣಿಯ ಪಾಲು ಸಹ ಸರ್ವರಿಗೂ ಸಮಪಾಲು ಎಂಬಂತೆ ವಿಂಗಡಿಸುತ್ತಿದ್ದರು. ನಂತರ ಮಾಂಸವನ್ನು ಎಲ್ಲರೂ ಸಮವಾಗಿ ಹಂಚಿಕೊಳ್ಳುತ್ತಿದ್ದರು. ಅಷ್ಟೇ ಅಲ್ಲ, ಬೇಟೆಗೆ ಬರಲಾಗದವರು ತಮ್ಮಲ್ಲಿನ ಆಯುಧಗಳನ್ನೇನಾದರು ಬೇಟೆಗಾರರ ಜೊತೆ ಕಳುಹಿಸಿದ್ದರೆ, ಆ ಆಯುಧಗಳಿಗೂ ಸಹ ಬೇಟೆಯ ಪಾಲನ್ನು ತೆಗೆದಿಡುತ್ತಿದ್ದರು. ತಲೆ ಹಾಗು ಕಾಲುಗಳನ್ನು ಕಾಲೋನಿಯ ಪೂಜಾರಿಗೆ ಅಥವಾ ಹಿರಿಕನಿಗೆ ಕಳುಹಿಸಿ ಕೊಡುತ್ತಿದ್ದರು. ಪ್ರಮುಖ ರಾತ್ರಿಯ ಬೇಟೆಯ ಪ್ರಾಣಿಗಳೆಂದರೆ ಹಂದಿಗಳು, ಜಿಂಕೆ, ನರಿ ಇತ್ಯಾದಿ ಪ್ರಾಣಿಗಳನ್ನು ಗುರುತಿಸಬಹುದು.

ಪ್ರಾಣಿಗಳ ಬೇಟೆಯಲ್ಲಿ ಹಲವು ವಿಶೇಷವಾದ ಬಲೆ, ತಂತ್ರಜ್ಞಾನವನ್ನು ಸಹ ಉಪಯೋಗಿಸುತ್ತಿದ್ದರು ಮತ್ತು ಪ್ರಾಣಿಗಳ ಬೇಟೆಯಿಂದ ಬಂದ ಚರ್ಮವನ್ನು ಮಾರಾಟ ಮಾಡುತ್ತಿದ್ದರು. ಜಿಂಕೆಯ ಮಾಂಸ ಹಾಗು ಹಂದಿಗಳ ಮಾಂಸವನ್ನು ಸುತ್ತಲಿನ ಹಳ್ಳಿಗಳ ಜನರು ಕೇಳಿ ಪಡೆಯುತ್ತಿದ್ದುದ್ದು ಉಂಟು.ಹಕ್ಕಿಪಿಕ್ಕಿಯವರಿಗೆ ಪ್ರಾಣಿಬೇಟೆಯು ಆಹಾರದ ಮೂಲವೂ ಹೌದು ಆದಾಯದ ಮೂಲವೂ ಹೌದು. ಹೀಗಾಗಿ ವಿವಿಧ ಬಗೆಯ ಪ್ರಾಣಿಗಳನ್ನು ಬೇಟೆ ಮಾಡಲು ವಿವಿಧ ರೀತಿಯ ತಂತ್ರಗಳನ್ನು ಉಪಯೋಗಿಸುತ್ತಿದ್ದರು. ಅಂತಹ ಬೇಟೆಯಲ್ಲಿ ಪ್ರಮುಖವು ಈ ಕೆಳಗಿನಂತೆ ಇವೆ.

**ನರಿಬೇಟೆ**

ಹಕ್ಕಿಪಿಕ್ಕಿಯರಿಗೆ ಪ್ರಿಯವಾದ ಬೇಟೆ ನರಿಬೇಟೆ ಎನ್ನಬಹುದು. ನರಿಗೆ ವಿಶೇಷವಾದ ಬುದ್ದಿ ಇರುವುದರಿಂದ ಅಂತಹ ಪ್ರಾಣಿಯನ್ನು ಬೇಟೆಯಾಡುವುದರಿಂದ ನಮಗೆ ಇನ್ನೂ ಹೆಚ್ಚಿನ ಬುದ್ದಿ

ಲಭಿಸುತ್ತದೆ ಎಂಬ ಭಾವನೆ ಅವರಲ್ಲಿದೆ. ಈ ನರಿಯು ಸೂಕ್ಷ್ಮ ಸ್ವಭಾವದ್ದು. ಹೀಗಾಗಿ ಇದನ್ನು ಬೇಟೆಯಾಡಲು ಕಾಂದರೂ, ಪಾಜಿ ಎಂಬ ಉರುಲು ಬಳಸುತ್ತಿದ್ದರು. ರಾತ್ರಿಯ ವೇಳೆಯಲ್ಲಿ ಗಿಡ ಮರಗಳ ದಟ್ಟ ಪೊದೆಯಲ್ಲಿ ಹಾಗು ಕಲ್ಲು ಬಂಡೆಗಳಿರುವ ಗುಡ್ಡಗಾಡುಪ್ರದೇಶದಲ್ಲಿನ ಸಂದಿಗಳಲ್ಲಿ ನರಿಯ ಹೆಜ್ಜೆಗುರುತು ಹಾಗು ಮಲಗುವ ಪ್ರದೇಶವನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದರು. ಆ ಸ್ಥಳದಲ್ಲಿಯೇ ಬಲೆಯನ್ನು ರಾತ್ರಿ ವೇಳೆ ಹಾಕುತ್ತಿದ್ದರು. ಯಾವುದೇ ವಿಧವಾಗಿ ನರಿಗೆ ಸಂಶಯ ಬರದ ಹಾಗೆ ಸ್ಥಳವನ್ನು ಗುರುತಿಸುತ್ತಿದ್ದರು. ಹೀಗಾಗಿ ನರಿಯು ತನ್ನ ಸ್ಥಾನಕ್ಕೆ ಬಂದಾಗ ಹಕ್ಕಿಪಿಕ್ಕಿಯರು ಒಡ್ಡಿದ್ದ ಬಲೆಗೆ ಬಿದ್ದು ಪ್ರಾಣ ಬಿಡುತ್ತಿತ್ತು. ಬೆಳಿಗ್ಗೆ ಹೋಗಿ ಬೇಟೆಯನ್ನು ಪಡೆಯುತ್ತಿದ್ದರು. ನರಿಯ ಬೇಟೆಯಿಂದ ಮಾಂಸವನ್ನು ತುಂಡಾಗಿಸಿ ಹಂಚಿಕೊಳ್ಳುತ್ತಿದ್ದರು. ನರಿಯ ಚರ್ಮಕ್ಕೆ ಯಾವುದೇ ವಿಧವಾದ ಗುರುತುಗಳು ಇರದೇ ಕಣ್ಣಿಗೆ ಕಾಣಾದೇ ಇರುವ ಹಾಗೆ ಮಾಂಸವನ್ನು ಪಡೆದು ಚರ್ಮವನ್ನು ಹೊಲಿಯುತ್ತಿದ್ದರು. ನರಿಯ ಚರ್ಮದ ಒಳಗೆ ಒಣಹುಲ್ಲು ಅಥವಾ ಹತ್ತಿಯನ್ನು ತುಂಬಿ ನರಿಯು ಜೀವಂತವಿರುವ ರೀತಿಯಲ್ಲಿ ಅದು ನಡೆಯುವ ತರಹದ ಬೊಂಬೆಯನ್ನು ತಯಾರಿಸಿ ಮಾರಾಟ ಮಾಡುತ್ತಿದ್ದರು. ಇಂತಹ ನರಿಯ ಬೊಂಬೆಯನ್ನು ಪಟ್ಟಣಗಳಲ್ಲಿ ಮತ್ತು ಹಳ್ಳಿಗಳಲ್ಲಿ ಶ್ರೀಮಂತರು ಹೆಚ್ಚು ಬೆಲೆಯನ್ನು ಕೊಟ್ಟು ಖರೀದಿಸುತ್ತಿದ್ದರು. ಬೆಳಿಗ್ಗೆ ಎದ್ದು ನರಿ ಮುಖ ನೋಡಿದರೆ ಒಳ್ಳೆಯದಾಗುತ್ತದೆ ಎಂಬ ಕಲ್ಪನೆಯೂ ಸಹ ಈ ಬೇಡಿಕೆಗೆ ಮೂಲ ಕಾರಣವಾಗಿರಬಹುದು. ನರಿಯ ಚರ್ಮದ ಬೊಂಬೆಗೆ ೧೦೦೦.೦೦ ರೂ. (ಒಂದು ಸಾವಿರ ರೂಪಾಯಿ) ಹೆಚ್ಚಿನ ಬೆಲೆಗೂ ಮಾರಾಟ ಮಾಡುತ್ತಿದ್ದರು. ಮಾಂಸವನ್ನು ತಿನ್ನುವ ಈ ಜನರು ಅದರ ವಾಸನೆಯು ಸದಾ ತಮ್ಮ ಜೊತೆಯಲ್ಲಿ ಇರುತ್ತಿತ್ತು. ಇದರಿಂದಾಗಿ ಹಕ್ಕಿಪಿಕ್ಕಿಯರ ಕಾಲೋನಿಗಳಲ್ಲಿ ನರಿಮಾಂಸದ ವಾಸನೆ ಸಾಮಾನ್ಯವಾಗಿರುತ್ತದೆ. ಪ್ರಸ್ತುತ ಬೆಟ್ಟಗಳಲ್ಲಿ (ಕಲ್ಲುಬಂಡೆಗಳಿಂದ ಕೂಡಿರುವ) ಕುರುಚಲು ಕಾಡಿನಲ್ಲಿ ನರಿಬೇಟೆಯು ಇಂದಿಗೂ ಸಹ ಇವರಲ್ಲಿ ಮಾಯವಾಗದೇ ಇರುವುದು. ಹೀಗೆ ಹಕ್ಕಿಪಕ್ಕಿಯರು ಮಾಡುವ ಬೇಟೆಯಲ್ಲಿ ನರಿಗೆ ಬಹಳ ಪ್ರಾಮುಖ್ಯತೆ ನೀಡಿ ಬೇಟೆಯನ್ನು ಮಾಡುತ್ತಾರೆ. ಒಂದು ವಿಧವಾಗಿ ಮಾಂಸವು ದೊರೆಯುತ್ತದೆ. ಇನ್ನೊಂದು ವಿಧವಾಗಿ ಹಣದ ಆದಾಯವು ಸಿಗುವುದು.

**ಮೊಲ**

ಮೊಲದ ಬೇಟೆಯು ಹಕ್ಕಿಪಿಕ್ಕಿಯರಿಗೆ ಸಾಮಾನ್ಯವಾದದ್ದು. ಮೊಲಗಳನ್ನು ಹಿಡಿಯಲು ಕೈ ಬಲೆಯನ್ನು ಬಳಸುತ್ತಿದ್ದರು. ರಾತ್ರಿಯ ವೇಳೆಯಲ್ಲಿ ಬ್ಯಾಟರಿಗಳ ಸಹಾಯದಿಂದಲೂ ಮೊಲದ ಬೇಟೆ ಆಡುವರು. ಮೊಲದ ಮುಖಕ್ಕೆ ಬ್ಯಾಟರಿಯ ಬೆಳಕು ಹಾಕಿದಾಗ ಮೊಲ ಬ್ಯಾಟರಿಯ ಬೆಳಕು ನೋಡುತ್ತಾ ನಿಲ್ಲುವುದು. ಆಗ ಕೈ ಬಲೆಗಳಿಂದ ಮೊಲವನ್ನು ಹಿಡಿಯುತ್ತಿದ್ದರು. ಮೊಲದ ಮಾಂಸವನ್ನು ಆಹಾರಕ್ಕೆ ಹಾಗು ಮಾರಾಟಕ್ಕೆ ಬಳಸುತ್ತಿದ್ದರು. ಮೊಲದ ಬೇಟೆಗೆ ಸಾಮಾನ್ಯವಾಗಿ ಕೈಯಿಂದಲೇ ತಯಾರಿಸಿದ ತಂತಿಯ ಬಲೆಯನ್ನು ಉಪಯೋಗಿಸುತ್ತಿರುವುದು ಕಂಡುಬರುತ್ತದೆ.

## ಕಾಡು ಹಂದಿ ಬೇಟೆ

ಕಾಡು ಹಂದಿಯ ಮಾಂಸ ರುಚಿಯಾದ ಮಾಂಸ. ಇದು ಹಕ್ಕಿಪಿಕ್ಕಿಯರಿಗೆ ಮಾತ್ರವಲ್ಲದೆ, ಸುತ್ತಲಿನ ಹಳ್ಳಿಗಳಲ್ಲಿನ ಎಲ್ಲಾ ಜನರು ಇಷ್ಟಪಡುವ ಮಾಂಸ. ಸಾಮಾನ್ಯವಾಗಿ ಕಾಡು ಹಂದಿಯ ಬೇಟೆಗೆ ಸಾಮೂಹಿಕವಾಗಿ ಬೇಟೆಮಾಡಲು ಹೋಗುತ್ತಾರೆ. ಕಾಡು ಹಂದಿ ಹೆಚ್ಚು ಕಡಿಮೆ ಎಲ್ಲಾ ಪ್ರದೇಶಗಳಲ್ಲಿ ದೊರೆಯುತ್ತಿದ್ದವು. ದೊರೆತ ಕಾಡು ಹಂದಿಯನ್ನು ಕೆಲವೊಮ್ಮೆ ಪೂರ್ತಿಯಾಗಿ ಹಳ್ಳಿಯ ಜನರಿಗೆ ಮಾರಾಟ ಮಾಡಿ ಹಣ ಪಡೆಯುತ್ತಿದ್ದರು. ಇನ್ನು ಕೆಲವು ವೇಳೆ ಮಾಂಸವನ್ನು ಮಾರಾಟ ಮಾಡುತ್ತಿದ್ದರು.ಹೀಗಾಗಿ ಕಾಡು ಹಂದಿಯನ್ನು ಹಕ್ಕಿಪಿಕ್ಕಿಯರು ಅಷ್ಟಾಗಿ ಮಾಂಸಹಾರಕ್ಕೆ ಬಳಸಿಕೊಳ್ಳುತ್ತಿರಲಿಲ್ಲ. ಈ ಬೇಟೆಯ ಉದ್ದೇಶವೇ ಹಣ ಸಂಗ್ರಹಿಸುವುದಾಗಿತ್ತು. ಇನ್ನು ಕೆಲವು ಸಂದರ್ಭಗಳಲ್ಲಿ ಹಣಕ್ಕೆ ಬದಲಾಗಿ ಆಹಾರದ ವಸ್ತುಗಳಾದ ರಾಗಿ, ಅಕ್ಕಿ, ಅಸಿಟ್ಟು ಪಡೆಯುವುದಾಗಿತ್ತು. ಇನ್ನು ಕಾಡು ಹಂದಿಯನ್ನು ಬೇಟೆಮಾಡಲು ಹಲವು ವಿಧವಾದ ಕೋವಿಗಳು ಬಳಸುತ್ತಿದ್ದರು. ಕಾಲೋನಿಯ ವಿಶೇಷ ಹಬ್ಬಗಳಿಗೆ ಮುಂಚಿತವಾಗಿ ಕೂಡುಬೇಟೆಯಿಂದ ಹಂದಿಯ ಬೇಟೆಯನ್ನು ಮಾಡುತ್ತಿದ್ದರು. ಕಾಡು ಹಂದಿಯ ಮಾಂಸವನ್ನು ಹಂಚಿಕೆಯಲ್ಲಿ ಕಾಲೋನಿಯ ಪೂಜಾರಿ ವಿಶೇಷವಾದ ಪಾತ್ರ ವಹಿಸುತ್ತಿದ್ದ. ಸಾಮಾನ್ಯವಾಗಿ ಹಂದಿ ಮಾಂಸವು ವಿಶೇಷ ಆಚರಣೆಗಳ ಸಮಯದಲ್ಲಿ ಸಮುದಾಯದ ಎಲ್ಲಾ ಮನೆಗಳಲ್ಲಿ ಅಥವಾ ಕುಟುಂಬಗಳಲ್ಲಿ ' ಆಹಾರವಾಗಿ ಬಳಸುತ್ತಿದ್ದರು.

## ಜಿಂಕೆ

ಹಕ್ಕಿಪಿಕ್ಕಿಯರಿಗೆ ಜಿಂಕೆ ಬೇಟೆ ತುಂಬಾ ಅಪರೂಪದ್ದು. ಜಿಂಕೆ ಬೇಟೆಗೆ ಕೊವಿಗಳು ಹಾಗು ಊರಲುಗಳನ್ನು ಬಳಸುತ್ತಿದ್ದರು. ಜಿಂಕೆಯ ಮಾಂಸ ವಿಶೇಷವಾಗಿ ರುಚಿಯಾದ ಮಾಂಸ. ಇದನ್ನು ಹಲವು ಬಾರಿ ಮಾರಾಟದ ಉದ್ದೇಶದಿಂದಲೇ ಬೇಟೆ ಮಾಡುತ್ತಿದ್ದರು. ಆದರೆ ಜಿಂಕೆಯು ಕಾಡುಹಂದಿ ಬೇಟೆಯಷ್ಟು ಮಹತ್ವವನ್ನು ಪಡೆದಿರಲಿಲ್ಲ. ಜಿಂಕೆಯ ಚರ್ಮ ಹಾಗು ಮಾಂಸಕ್ಕೆ ಹೆಚ್ಚು ಬೇಡಿಕೆ ಇರುವುದರಿಂದ ಇದರ ಮಾರಾಟದಿಂದ ಬಹಳ ಆದಾಯ ಲಭಿಸುತ್ತಿತ್ತು. ಬೇಡಿಕೆ ಇಲ್ಲದ ಸಂದರ್ಭದಲ್ಲಿ ಜಿಂಕೆಯ ಮಾಂಸವನ್ನು ಸಮುದಾಯದ ಜನರೇ ಹಂಚಿಕೊಳ್ಳುವುದು ರೂಢಿಯಲ್ಲಿತ್ತು.

## ಹಕ್ಕಿಗಳ ಬೇಟೆ

ಹಕ್ಕಿಹಿಡಿಯುವ ವೃತ್ತಿಯಿಂದಲೇ ಹಕ್ಕಿಪಿಕ್ಕಿಯರು ಎಂದು ಹೆಸರಾಗಿರುವ ಇವರಿಗೆ ಹಕ್ಕಿ ಹಿಡಿಯುವುದು ಒಂದು ಪ್ರಮುಖ ವೃತ್ತಿ. ಬೇಟೆಯ ವಿಧಾನದಲ್ಲಿ ಪಾರಂಪರಾಗತವಾಗಿ ಬಂದಿರುವ ಈ ವೃತ್ತಿಯಿಂದಲೇ ಪ್ರಸ್ತುತದವರೆಗೂ ಗುರುತಿಸಿಕೊಂಡಿರುವ ಸಮುದಾಯದ ವಿಶೇಷತೆಯಾಗಿದೆ. ಹೀಗಾಗಿ ಹಕ್ಕಿಗಳ ಬೇಟೆಯಲ್ಲಿ ಹಲವಾರು ವಿಶೇಷವಾದ ಗುಣಲಕ್ಷಣಗಳು ಕಂಡು ಬರುತ್ತವೆ. ಮುಖ್ಯವಾಗಿ ಸಮುದಾಯದ ಆರಂಭದ ಆಹಾರದ ಮೂಲವೇ ಈ ಹಕ್ಕಿ ಹಿಡಿಯುವ ವೃತ್ತಿ. ಇನ್ನು ಹಕ್ಕಿಗಳನ್ನು ಹಿಡಿಯಲು ಸೂಕ್ಷ್ಮಬುದ್ದಿಯ ವಿವೇಚನೆಯನ್ನು (ಕಲೆ) ಪಡೆದಿರುವ ಹಕ್ಕಿಪಿಕ್ಕಿಯರು ಈ ಬೇಟೆಯಲ್ಲಿ ಅತ್ಯಂತ ಫಲಕಾರಿಯಾದ

ಯಶಸ್ಸುಗಳಿಸುವವರಾಗಿದ್ದಾರೆ. ಬೇಟೆಯ ಆರಂಭ ಹಂತದಿಂದ ಮೊದಲುಗೊಂಡು ಅಂತಿಮದವರೆಗೂ ಹಕ್ಕಿಗಳ ಚಲನವಲನಗಳನ್ನು ಗಮನಿಸಿ ಬೇಟೆಯಾಡುವ ಪದ್ಧತಿ ಎಂಥವರನ್ನೂ ಬೆರಗುಗೊಳಿಸುತ್ತದೆ. ಹಕ್ಕಿಗಳನ್ನು ಹಿಡಿಯುವುದರಲ್ಲಿ ಹಕ್ಕಿಪಿಕ್ಕಿಯರನ್ನು ಮೀರಿಸುವ ಮತ್ತೊಂದು ಸಮುದಾಯ ಇಲ್ಲವೆಂದೇ ಹೇಳಬಹುದು. ಹಾಗೆಯೇ ಇವರು ತಿನ್ನದೇ ಇರುವ ಹಕ್ಕಿಗಳು ಸಹ ಕಡಿಮೆ ಪ್ರಮಾಣವೇ ಎನ್ನಬಹುದು. ಹಕ್ಕಿಪಿಕ್ಕಿಯರು ಹಕ್ಕಿಗಳಿಗಿಂತ ಬುದ್ಧಿವಂತರು. ಸಾಮಾನ್ಯವಾಗಿ ಹಕ್ಕಿಗಳ ಬೇಟೆಯನ್ನು ಗಂಡಸರು ಮಾಡುತ್ತಾರೆ. ಹಕ್ಕಿಗಳನ್ನು ಹಿಡಿಯುವುದರಲ್ಲಿ ಎರಡು ವಿಧವನ್ನು ಅನುಸರಿಸುತ್ತಾರೆ.

ಮೊದಲನೆಯದಾಗಿ ಕುಟುಂಬಕ್ಕೆ ಆಹಾರದ ಮೂಲವಾಗಿ ಹಕ್ಕಿಗಳನ್ನು ಬೇಟೆಯಾಡಿದರೆ ಬಳಸುವ ಆಯುಧಗಳು ಸಾಕಷ್ಟು ಸೀಮಿತವಾಗಿರುತ್ತವೆ. ಆಹಾರಕ್ಕೆ ಚಾಟ್ ಬಿಲ್ಲೋ ಅಥವಾ ತಂತ್ರಗಳಿಂದ ಹಕ್ಕಿಗಳನ್ನು ಹೊಡೆದು ತರುತ್ತಾರೆ. ಇನ್ನು ವ್ಯಾಪಾರದ ಉದ್ದೇಶದಿಂದ ಬೇಟೆಯಾಡಿದರೆ, ಬಳಸುವ ತಂತ್ರಗಳು ಹಾಗು ವಿಧಾನಗಳೇ ಬೇರೆಯಾಗಿರುತ್ತವೆ. ಹೀಗಾಗಿ ಹಕ್ಕಿಪಿಕ್ಕಿಯರಲ್ಲಿ ಹಕ್ಕಿಗಳನ್ನು ಬೇಟೆಯಾಡುವಾಗ ಋತುಮಾನವನ್ನು ಗುರುತಿಸುವಲ್ಲಿ ಹಾಗು ಅವುಗಳು ವಾಸಿಸುವ ಪರಿಸರದಲ್ಲಿನ ಗುರುತುಗಳನ್ನು ಗುರುತಿಸಿ ಹಿಡಿಯುವುದು ಮುಖ್ಯವಾಗಿದೆ. ಇನ್ನು ಕುರುಚಲು ಕಾಡಿನಲ್ಲಿ ದೊರೆಯುವ ಹಲವು ವಿಧವಾದ ಹಕ್ಕಿಗಳು ಮೊಟ್ಟೆಯ ಕಾಲದಲ್ಲಿ ಬೆದೆಯಲ್ಲಿ ಹೇಗಿರುತ್ತವೆ ಎಂಬ ಅಂಶವನ್ನು ತಿಳಿದು ಹಕ್ಕಿಗಳನ್ನು ಅಲ್ಲದೇ ಮೊಟ್ಟೆಗಳನ್ನು ಪಡೆಯುವವರಾಗಿದ್ದಾರೆ.

ಮುಖ್ಯವಾಗಿ ಹಕ್ಕಿಪಿಕ್ಕಿಯರಲ್ಲಿ ಹಕ್ಕಿಗಳ ಬೇಟೆಯು ವಿಶೇಷತೆಯಿಂದ ಕೂಡಿವೆ. ಹಕ್ಕಿಗಳ ಬೇಟೆಗೆ ಒಬ್ಬರೇ ಹೋಗುವುದು ಸಾಮಾನ್ಯ. ಹಕ್ಕಿಗಳ ಬೇಟೆಯು ಸಹ ಹಲವು ರೀತಿಯ ಆದಾಯವನ್ನು ತರುವುದರ ಜೊತೆಗೆ ಒಳ್ಳೆಯ ಆಹಾರವು ಸಹ ಆಗಿದೆ. ಹಕ್ಕಿಗಳ ಬೇಟೆಯ ಬಗ್ಗೆ ಹಕ್ಕಿಪಿಕ್ಕಿಯರು ಹೇಳುವಂತೆ 'ನಮ್ಮ ಹಕ್ಕಿಗಳಲ್ಲಿ ಗೌಜಲಹಕ್ಕಿ ಬೇಟೆ ಪ್ರಮುಖವಾದದ್ದು. ಈ ಬೇಟೆಗೆ ಹೋಗುವ ಮುನ್ನ ಮನೆಯಿಂದ ಒಬ್ಬನೇ ಹೋಗಬೇಕು. ಕಾಡಿನಲ್ಲಿ ಪ್ರಾಣಿಗಳು, ಹಾವುಗಳು, ಮುಳ್ಳು ಯಾವುದು ನೋಡುವುದಿಲ್ಲ. ಒಬ್ಬನೇ ನಿಶ್ಯಬ್ದವಾಗಿ ಹೋಗಿ ಬೇಟೆಯಾಡಬೇಕು. ಹೆಚ್ಚು ಬಂಡವಾಳವಿಲ್ಲದ ಆದಾಯ ತರುವ ಕೆಲಸವಿದು.

ಇನ್ನು ಹೆಚ್ಚಾಗಿ ಹಕ್ಕಿಪಿಕ್ಕಿಯರು ಹಕ್ಕಿಗಳ ಬೇಟೆಯಲ್ಲಿ ಮಾಡುವ ಪ್ರಮುಖವಾದ ಹಕ್ಕಿಗಳು ಈ ರೀತಿ ಇವೆ. ಗೌಜಲ ಹಕ್ಕಿ, ನವಿಲು, ಗೂಬೆ, ಕಾಡುಕೋಳಿ, ಉವಗಹಕ್ಕಿ, ಪುರ್ಲಹಕ್ಕಿ, ಹದ್ದು, ನೀರಹಕ್ಕಿ, ದಿಟಬನಹಕ್ಕಿ, ಕಾಡುಹಕ್ಕಿ, ಗೊರವಂಕ ಇತ್ಯಾದಿಗಳು ಪ್ರಮುಖವಾಗಿ ಎರಡು ರೀತಿಯಿಂದಲೇ ಆಶ್ರಯಿಸಿ ಬೇಟೆ ಮಾಡುತ್ತಿದ್ದರು.

**ಗೌಜಲ ಹಕ್ಕಿ**

ಹಕ್ಕಿಪಿಕ್ಕಿಯರ ಹಕ್ಕಿಗಳ ಬೇಟೆಯಲ್ಲಿ ಗೌಜಲಹಕ್ಕಿಯು ವಿಶೇಷವಾದದ್ದು. ಗೌಜಲಹಕ್ಕಿಯನ್ನು ಶಬ್ದದ ಮೂಲಕ ಹಿಡಿಯುವುದು ಇಲ್ಲವೇ ಕಾಲು ಉರುಲುನ್ನು ಹಾಕಿ ಹಿಡಿಯುತ್ತಿದ್ದರು. ಗೌಜಲಹಕ್ಕಿಯು

ಗುಡ್ಡಗಾಡು ಅರಣ್ಯದ ಪೊದೆಗಳಲ್ಲಿ ವಾಸಿಸುವ ಹಕ್ಕಿಯಾದ್ದರಿಂದ ಹಕ್ಕಿಪಿಕ್ಕಿಯರು ಇದನ್ನು ಹಿಡಿಯಲು ಸಣ್ಣ ಸಣ್ಣ ಬಿದಿರು ಕಡ್ಡಿಗಳಿಂದ ಆಯಾತಾಕಾರವಾಗಿ ಜೋಡಿಸಿ, ಅದಕ್ಕೆ ದಾರದಿಂದ ಅಥವಾ ಪ್ಲಾಸ್ಟಿಕ್ ಹಗ್ಗದಿಂದ ಉರುಲು ಎಣೆದು ಮಡಿಚಿಕೊಂಡು ಹೋಗುವಂತಹ ಕಾಲೂಉರುಲು ಬಳಸುತ್ತಾರೆ. ಗೌಜಲಹಕ್ಕಿ ವಾಸಿಸುವ ಪ್ರದೇಶಗಳಲ್ಲಿ ಜಾಗ್‌ಜಿಗ್ ಆಕಾರದಲ್ಲಿ ಹಾಕಿ ಒಂದು ಕಡೆ ಅವಿತುಕೊಂಡು ಗೌಜಲಹಕ್ಕಿ ಕೂಗುವ ಹಾಗೆ ಕೂಗುತ್ತಾರೆ. ಈ ಧ್ವನಿಯನ್ನು ಕೇಳಿದ ಗೌಜಲಹಕ್ಕಿ ಅಲ್ಲಿಗೆ ಬಂದು ಒಡ್ಡಿದ ಉರುಲಿಗೆ ಸಿಕ್ಕಿಬೀಳುತ್ತದೆ. ಈ ವಿಧಾನದಿಂದ ಹಕ್ಕಿಪಿಕ್ಕಿಯರು ಹಕ್ಕಿಗಳ ಬೇಟೆಯಲ್ಲಿ ಗೌಜಲಹಕ್ಕಿಯನ್ನು ಬೇಟೆಮಾಡುತ್ತಾರೆ. ಇನ್ನು ೧ ಡಜನ್ ಗೌಜಲಹಕ್ಕಿ ೪೦ ರೂಪಾಯಿಗೆ ಮಾರಾಟ ಮಾಡುತ್ತಿದ್ದರು.

**ಕಾಡುಕೋಳಿ**

ಬೇಟೆಗಳಲ್ಲಿ ಅತಿ ಕಷ್ಟವಾದ ಬೇಟೆಯೇ ಕಾಡುಕೋಳಿ ಬೇಟೆ. ಕಾಡು ಕೋಳಿಯ ಶಬ್ದದ ಮುಖಾಂತರ ಬೇಟೆ ಮಾಡುತ್ತಿದ್ದರು. ಕೋಳಿಯ ಕೂಗು ಕೇಳಿ ಹೋಗುವ, ಈ ಹಕ್ಕಿಯು ಎಲ್ಲಿರುತ್ತದೆಂಬುದನ್ನು ತಿಳಿಯುವುದು ಸಹ ಕಷ್ಟದ ಕೆಲಸ. ಹೀಗಾಗಿ ಕಾಡು ಕೋಳಿಯ ಬೇಟೆಯಿಂದ ದೊರೆಯುವ ವಸ್ತುವು ಸಹ ಅಪರೂಪದ ವಸ್ತು. ಕಾಡುಕೋಳಿ ಜುಟ್ಟು ಅಂದರೆ ಇದರ ಕುತ್ತಿಗೆಯ ಮೇಲೆ ಇರುವ ಪುಕ್ಕಗಳ ಗುಚ್ಚವು ನೋಡಲು ಸುಂದರವಾಗಿದ್ದು, ಜುಟ್ಟಿನ ಗುಚ್ಚದಲ್ಲಿ ರೇಡಿಯಂ ನ ಗುಣ ಇರುವುದರಿಂದ ನೀರಿನೊಳಗೆ ವಿಶೇಷ ಬೆಳಕು ಬಿಡುತ್ತದೆ. ರಾತ್ರಿಯ ಹೊತ್ತು ಹೊಳೆಯುತ್ತಿರುವುದರಿಂದ ಇದನ್ನು ಪಡೆಯಲು ನಗರಗಳಲ್ಲಿ ಸಾಕಷ್ಟು ಹಣ ನೀಡುವರು. ಕಾಡು ಕೋಳಿಯ ಜುಟ್ಟು ಸುಮಾರು ೧೫೦ ರಿಂದ ೨೦೦ ರೂಪಾಯಿಗಳವರೆಗೆ ಮಾರಾಟವಾಗುತ್ತದೆ. ಆದ್ದರಿಂದ ವಿಶೇಷವಾಗಿ ಕಾಡುಕೋಳಿಯ ಬೇಟೆಯಾಡುತ್ತಿದ್ದರು.

**ನವಿಲು**

ಕಾಡುಕೋಳಿಗಳ ಮಾದರಿಯಲ್ಲಿಯೇ ಶಬ್ದದ ಮುಖಾಂತರ ನವಿಲುಗಳನ್ನು ಬೇಟೆಯಾಡುತ್ತಿದ್ದರು. ಮುಖ್ಯವಾಗಿ ನವಿಲನ್ನು ವ್ಯಾಪಾರದ ಉದ್ದೇಶದಿಂದಲೇ ಬೇಟೆಯಾಡುತ್ತಿದ್ದರು. ನವಿಲಿನ ಬೇಟೆಯಿಂದ ವಿಶೇಷವಾಗಿ ದೊರೆಯುವ ಎಲ್ಲಾ ವಸ್ತುಗಳು ಬಹಳ ಆದಾಯವನ್ನು ತರುವ ವಸ್ತುಗಳಾಗಿದ್ದವು. ನವಿಲುಪುಕ್ಕ, ಚರ್ಮ, ಮಾಂಸ, ಎಣ್ಣೆ ಈ ಎಲ್ಲವೂ ನವಿಲು ಬೇಟೆಯಿಂದ ಸುಮಾರು ೫೦೦ ರೂಪಾಯಿವರೆಗೆ ಆದಾಯವನ್ನು ಪಡೆಯುತ್ತಿದ್ದರು. ನವಿಲಿನ ಎಣ್ಣೆಯನ್ನು ನಾಟಿ ಔಷಧ ಪದ್ಧತಿಗೆ ಬಳಸಿಕೊಳ್ಳುತ್ತಿದ್ದರು. ನಗರದ ಜನರು ಹಕ್ಕಿಪಿಕ್ಕಿಯರನ್ನು ನವಿಲಿನ ಎಣ್ಣೆಯನ್ನು ಕೇಳಿ ಪಡೆಯುತ್ತಿದ್ದರು.

**ಲಾವಗನಹಕ್ಕಿ**

ಹಕ್ಕಿಪಿಕ್ಕಿಯರ ಮಾಂಸದ ಊಟದಲ್ಲಿ ಲಾವಗನಹಕ್ಕಿಯೇ ಬಲು ಮುಖ್ಯವಾದ ಆಹಾರ. ಇದು ಒಂದು ಬಗೆಯ ವಿಶಿಷ್ಟ ಹಕ್ಕಿ. ಸುಮಾರು ೧/೨ ಕೆ.ಜಿ. ತೂಕವಿರುತ್ತದೆ. ಇದು ಸಾಮಾನ್ಯವಾಗಿ ಮರದ

ಪೊಟರೆಗಳು ಮತ್ತು ಕಲ್ಲುಬಂಡೆಗಳ ಸಂದಿಯಲ್ಲಿ ವಾಸಿಸುತ್ತವೆ. ಕಲ್ಲುಬಂಡೆಗಳ ಸಂದಿಯಲ್ಲಿಯೇ ಮೊಟ್ಟೆಗಳನ್ನು ಸಹ ಇಡುತ್ತದೆ. ಈ ಹಕ್ಕಿಯನ್ನು ಹಕ್ಕಿಪಿಕ್ಕಿಯರು ಚಾಟ್ ಬಿಲ್ ನಿಂದ ಹೊಡೆಯುತ್ತಿದ್ದರು. ಕೆಲವು ಬಾರಿ ಬಲೆಯನ್ನು ಹಾಕಿ ಹಿಡಿಯುತ್ತಿದ್ದರು. ಬಂಡೆಗಳ ಸಂದಿಯಲ್ಲಿರುವ ಮೊಟ್ಟೆಗಳನ್ನು ಸಹ ಹುಡುಕಿ ತರುತ್ತಿದ್ದರು. ಲಾವಗನಹಕ್ಕಿಯನ್ನು ಹಕ್ಕಿಪಿಕ್ಕಿಯರು ಡಜನ್ ಗಟ್ಟಲೆ ಹಿಡಿದು ತಂದು ಮಾರಾಟ ಸಹ ಮಾಡುತ್ತಿದ್ದರು. ಪುಟ್ಟದಾದರೂ ಆಹಾರದಲ್ಲಿ ರುಚಿ ಹೆಚ್ಚಾಗಿರುತ್ತಿತ್ತು. ಬಹುತೇಕ ಹಕ್ಕಿಪಿಕ್ಕಿಯರು ಆಹಾರದ ಪದಾರ್ಥವಾಗಿ ಈ ಹಕ್ಕಿಯನ್ನು ಬಳಸುತ್ತಾರೆ. ಹೆಚ್ಚಿನ ಬೇಟೆಯಾದರೆ ಡಜನ್ ಗಟ್ಟಲೆ ಮಾರಾಟ ಮಾಡುತ್ತಿದ್ದರು. ಒಂದು ಡಜನ್ ಹಕ್ಕಿಯನ್ನು ೮ ರಿಂದ ೧೦ ರೂಪಾಯಿಗೆ ಮಾರಾಟ ಮಾಡುತ್ತಿದ್ದರು. ಹೀಗಾಗಿ ಲಾವಗನಹಕ್ಕಿ ಎಲ್ಲಿ ಸಿಗುತ್ತದೆ ಎಂತಲೋ ಅದರ ಮೊಟ್ಟೆಗಳ ಸ್ಥಳವನ್ನು ಪರಿಸರ ನೋಡಿಯೇ ನಿರ್ಧರಿಸುತ್ತಿದ್ದರು.

**ಜಲಜೀವಿಗಳ ಬೇಟೆ**

ಬಹುತೇಕ ಹಕ್ಕಿಪಿಕ್ಕಿಯರು ಎಲ್ಲಾ ಹಕ್ಕಿಗಳನ್ನು ತಿನ್ನುವಂತೆ ಕೆಲವಾರು ಜಲಜೀವಿಗಳನ್ನು ಸಹ ತಿನ್ನುತ್ತಿದ್ದರು. ಮುಖ್ಯವಾಗಿ ಜಲಜೀವಿಗಳ ಬೇಟೆಯಿಂದ ನಾಟಿವೈದ್ಯ ಪದ್ದತಿಗೆ ಗಮನ ನೀಡಿದ್ದರು. ನೀರಿನಲ್ಲಿರುವ ಪ್ರಾಣಿಗಳನ್ನು ಹಿಡಿಯುವುದು ಸಹ ವಿಶಿಷ್ಟವಾಗಿತ್ತು. ಜಲಜೀವಿಗಳ ಬೇಟೆಯಿಂದ ಹಕ್ಕಿಪಿಕ್ಕಿಯರು ವಾಸಿಸುವ ಸ್ಥಳಗಳ ಸುತ್ತಲಿನ ಪ್ರದೇಶದಲ್ಲಿಯೇ ಇರುವ ತೋಟಗಳು, ಗದ್ದೆಗಳು, ಕೆರೆಗಳ ಸಮೀಪದಲ್ಲಿಯೇ ಬೇಟೆ ಮಾಡುತ್ತಿದ್ದರು. ಸಾಕಷ್ಟು ಸಮಯದಲ್ಲಿ ಆಹಾರಕ್ಕೆ ಪರ್ಯಾಯವಾಗಿ ಉತ್ತಮವಾಗಿರುತ್ತಿತ್ತು. ಬೇಟೆ ಮಾಡುವ ಪ್ರಮುಖ ಜಲಜೀವಿಗಳೆಂದರೆ ಆಮೆ, ಏಡಿ, ಮೀನು, ಮೊಸಳೆ, ಉಡ ಇತ್ಯಾದಿಗಳು.

ಮೊಸಳೆ ಮತ್ತು ಉಡ ವಿಶಿಷ್ಟವಾದ ಪ್ರಾಣಿಗಳು. ಮೊಸಳೆಯು ನೀರಿನಲ್ಲಿ ವಾಸವಾದರೆ ಉಡ ಎಂಬ ಸರೀಸೃಪ ಕಲ್ಲಿನ ಬೆವರುನಲ್ಲಿ ವಾಸಿಸುತ್ತದೆ. ಹೀಗಾಗಿ ಉಡ ಮತ್ತು ಮೊಸಳೆ ಹಕ್ಕಿಪಿಕ್ಕಿಯರ ಆಹಾರದ ಸಾಮಗ್ರಿಯಾಗಿರದೇ ಪ್ರಮುಖ ವ್ಯಾಪಾರದ ವಸ್ತುವಾಗಿದೆ. ಉಡದ ಚರ್ಬಿ ಅಥವಾ ಕೊಬ್ಬಿನಿಂದ ತಯಾರಿಸಿದ ಎಣ್ಣೆಯು ಅನೇಕ ವಿಧವಾದ ರೋಗಗಳಿಗೆ ಬಳಸುತ್ತಾರೆ. ಉಡದ ಎಣ್ಣೆಯನ್ನು ಸಾಸುವೆ ಎಣ್ಣೆಯ ಜೊತೆಯಲ್ಲಿ ಬೆರಸಿ ಮಾರಾಟ ಮಾಡುತ್ತಾರೆ. ಪ್ರಮುಖವಾಗಿ ನಗರಪ್ರದೇಶಗಳಲ್ಲಿ ಉಡದ ಎಣ್ಣೆಯನ್ನು ಗಂಡಸರು ಕೇಳಿಪಡೆಯುತ್ತಾರೆ. ಗಂಡಸರಲ್ಲಿ ನಿಶ್ಯಕ್ತಿ ಇರುವವರು ಹಕ್ಕಿಪಿಕ್ಕಿಯರನ್ನು ಕೇಳಿ ಪಡೆಯುತ್ತಾರೆ. ಅನೇಕ ವಿಧವಾದ ರೋಗಗಳಿಗೆ ರಾಮಬಾಣವಾಗಿರುವುದರಿಂದ ಹೆಚ್ಚಿನ ಬೆಲೆ ಕೊಟ್ಟು ಕೊಂಡುಕೊಳ್ಳುತ್ತಾರೆ. ಇನ್ನು ಮೊಸಳೆಯ ಎಣ್ಣೆಯನ್ನು ಮಾರಾಟ ಮಾಡುತ್ತಾರೆ. ಈ ಎಣ್ಣೆಯು ಸಹ ಹಲವು ವಿಧವಾದ ರೋಗಗಳಿಗೆ ಉಪಯೋಗವಾಗಿದೆ.

ಮೀನು, ಆಮೆ, ಏಡಿಗಳು ಆಹಾರಕ್ಕೆ ಬಳಕೆಯಾದರೂ ಸಹ ಮೀನಿನ ಎಣ್ಣೆಯನ್ನು ತಯಾರಿಸಿ ಮಾರಾಟ ಮಾಡುವುದುಂಟು. ಮೀನಿನ ಎಣ್ಣೆಯನ್ನು ಕೀಲುನೋವಿಗೆ ಪ್ರಮುಖವಾದ

ಔಷಧಿಯಾಗಿರುವುದರಿಂದ ಮೀನಿನ ಎಣ್ಣೆ ಮಾರಾಟ ಮಾಡುತ್ತಾರೆ. ಏಡಿ, ಆಮೆ ಆಹಾರದಲ್ಲಿ ಬಳಸಿಕೊಳ್ಳುತ್ತಾರೆ

**ಜೇನುಬೇಟೆ**

ಅರಣ್ಯ ಪ್ರದೇಶಗಳಲ್ಲಿ ಅಲೆಮಾರಿಗಳಾಗಿದ್ದ ಹಕ್ಕಿಪಿಕ್ಕಿಯರು ಬೆಟ್ಟ ಹಾಗು ಕಾಡಿನ ದೊಡ್ಡ ಮತ್ತು ಸಣ್ಣ ಜೇನುಗಳನ್ನು ವ್ಯಾಪಾರದ ಸಲುವಾಗಿ ಬೇಟೆಯಾಡುತ್ತಿದ್ದರು. ಅರಣ್ಯದಲ್ಲಿ ದೊರೆಯುವ ಜೇನು ಅದರ ಸಂಗ್ರಹಣೆ ಮತ್ತು ಅದರ ಮಾರಾಟ ಉದ್ದೇಶದಿಂದ ಕೂಡಿತ್ತು. ಹೀಗಾಗಿ ಜೇನು ಸಂಗ್ರಹಿಸುವುದು ಗಂಡಸರ ಕೆಲಸ. ಸಾಮಾನ್ಯವಾಗಿ ಜೇನು ಬೇಟೆಗೆ ಕೂಡು ಬೇಟೆಯ ಪದ್ಧತಿಯಂತೆ ಹೋಗುತ್ತಿದ್ದರು. ಜೇನುತುಪ್ಪವನ್ನು ಹಳ್ಳಿಗಳಲ್ಲಿ ಮತ್ತು ನಗರಗಳಲ್ಲಿ ಮಾರಾಟಮಾಡುವುದರ ಜೊತೆಗೆ ಜೇನಿನ ಮೇಣವನ್ನು ಸಹ ಮಾರಾಟಮಾಡುತ್ತಿದ್ದರು.

ಕಾಡಿನಲ್ಲಿ ದೊರೆಯುವ ನಾಟಿವೈದ್ಯ ಪದ್ಧತಿಯಲ್ಲಿ ಹಲವಾರು ರೀತಿಯ ಗಿಡಮೂಲಿಕೆಗಳನ್ನು ಸಂಗ್ರಹಿಸುತ್ತಿದ್ದರು. ವಿವಿಧ ಬಗೆಯ ಸಸ್ಯಗಳಿಂದ ಮತ್ತು ಪ್ರಾಣಿಗಳಿಂದ ಎಣ್ಣೆಯಿಂದ ವಿವಿಧ ಬಗೆಯ ರೋಗಗಳಿಗೆ ಔಷಧಿಯನ್ನು ನೀಡುತ್ತಿದ್ದರು. ನಾಟಿವೈದ್ಯ ಪದ್ಧತಿಯು ಹಳ್ಳಿಗಳಲ್ಲಿ ತುಂಬಾ ಪ್ರಾಮುಖ್ಯತೆಯನ್ನು ಗಳಿಸಿತ್ತು. ಹಕ್ಕಿಪಿಕ್ಕಿಯರ ಹೆಂಗಸರು ವ್ಯಾಪಾರದಲ್ಲಿ ನಾಟಿಔಷಧಿಯನ್ನು ಮಾರಾಟ ಮಾಡುವುದು ಪ್ರಮುಖವಾಗಿದ್ದು. ಅದು ಅವರುಗಳ ವ್ಯಾಪಾರ ಜೀವನದ ಮುಖ್ಯ ಅಂಗವು ಸಹ ಆಗಿತ್ತು. ಅಲೆಮಾರಿಯಾದ ಹಕ್ಕಿಪಕ್ಕಿಯರಿಗೆ ತಾವುಗಳು ತಯಾರಿಸುವ ವಿವಿಧ ಎಣ್ಣೆಗಳು ದೂರದ ನಗರಗಳಲ್ಲಿ ಮತ್ತು ಸಮುದ್ರ ತೀರದಲ್ಲಿ ಬಹಳಷ್ಟು ವ್ಯಾಪಾರವಾಗುತ್ತಿದ್ದರಿಂದ ಈ ವ್ಯಾಪಾರವನ್ನು ಪ್ರಮುಖ ವೃತ್ತಿಯನ್ನಾಗಿ ಮಾಡಿಕೊಂಡಿದ್ದರು.

ಮನುಷ್ಯನ ಶರೀರಕ್ಕೆ ಬರುವ ಕಾಯಿಲೆಗಳಿಗೆ ಇವರುಗಳ ವೈದ್ಯ ಪದ್ಧತಿಯು ಬಹಳಷ್ಟು ಉಪಯುಕ್ತವಾಗಿತ್ತು. ಕೆಲವಾರು ಸಂದರ್ಭಗಳಲ್ಲಿ ಪಕ್ಕಿಪಿಕ್ಕಿಯರ ಕಾಲೋನಿಯನ್ನು ಹುಡುಕಿಕೊಂಡು ಬಂದು ಔಷಧಿಯನ್ನು ಪಡೆಯುತ್ತಿದ್ದರು. ಹೀಗಾಗಿ ಅರಣ್ಯದ ಸಂಪರ್ಕದಿಂದ ಹಲವು ವಿದವಾದ ಗಿಡಮೂಲಿಕೆಗಳ ಪರಿಚಯವು ಇವರುಗಳ ಆರ್ಥಿಕ ಜೀವನಕ್ಕೆ ಸಹಕಾರಿಯಾಗಿದ್ದವು. ಪ್ರಸ್ತುತದಲ್ಲಿಯು ಹಕ್ಕಿಪಿಕ್ಕಿಯರಿಂದ ಹಲವು ರೋಗಗಳಿಗೆ ಔಷಧಿಯನ್ನು ಪಡೆಯುತ್ತಾರೆ. ಅಂತವುಗಳೆಂದರೆ ಹಲ್ಲುನೋವು, ತಲೆಕೂದಲು ಇಲ್ಲದಿದ್ದರೆ, ಲಕ್ವ, ಮೂರ್ಚೆರೋಗ, ಇಸಬು, ಗಜಕರ್ಣ, ಮೂಲವ್ಯಾಧಿ, ನುಶಿ ಇತ್ಯಾದಿ ಇಂದಿಗೂ ಹಕ್ಕಿಪಿಕ್ಕಿಯರ ಬಳಿ ಕೇಳಿ ಪಡೆಯುವುದುಂಟು.

ಹೀಗೆ ಜೇನುತುಪ್ಪ ಮತ್ತು ವೈದ್ಯಪದ್ಧತಿಯು ಆದಿಕಾಲದಿಂದಲೂ ಅರಣ್ಯದಲ್ಲಿರುವ ಹಕ್ಕಿಪಿಕ್ಕಿಯರಿಗೆ ಬಹು ಮುಖ್ಯವಾದ ಆರ್ಥಿದ ಸಂಪತ್ತಿನ ಮೂಲ. ಜೇನುತುಪ್ಪ, ಗಿಡಮೂಲಿಕೆಗಳ ಸಂಗ್ರಹದಲ್ಲಿ ಪ್ರಮುಖ ವಸ್ತುಗಳು ಸಹ ಆಗಿವೆ. ಈ ರೀತಿಯ ಬೆಳವಣಿಗೆಯಿಂದ ಬದಲಾದ ಪರಿಸ್ಥಿತಿಯಲ್ಲೂ

ಹಕ್ಕಿಪಿಕ್ಕಿಯರ ಪ್ರತಿಯೊಂದು ಮನೆಯಲ್ಲೂ ಸಹ ಬೇಟೆಯ ಆಯುಧಗಳು ಮತ್ತು ಬಲೆಗಳು ಇಂದಿಗೂ ಕಂಡುಬರುತ್ತವೆ.

## ೨. ಸ್ವಾತಂತ್ರ್ಯ ನಂತರದ ಸ್ಥಿತ್ಯಂತರಗಳು

ಸ್ಥಿತ್ಯಂತರ ಎನ್ನುವುದು ಕೇವಲ ಕೆಲವೇ ವ್ಯಕ್ತಿ ಅಥವಾ ಸಮೂಹಗಳಿಗೆ ಸೀಮಿತವಾದದ್ದಲ್ಲ. ಮಾನವನ ಸಮಾಜದ ಎಲ್ಲಾ ವರ್ಗಗಳ ಸಾಮಾಜಿಕ ವ್ಯವಸ್ಥೆಯಲ್ಲಿ ಬದಲಾವಣೆಗಳು ಕಾಲದಿಂದ ಕಾಲಕ್ಕೆ ಸಂಭವಿಸುತ್ತಲೇ ಇವೆ. ಆಯಾ ಕಾಲಘಟ್ಟದ ಮಾನವನ ಉತ್ಪಾದನಾ ವಿಧಾನಗಳು ಸಂಸ್ಕೃತಿಯನ್ನು ರೂಪಿಸಿವೆ ಮತ್ತು ಬದಲಾದ ಆರ್ಥಿಕ ಸಂರಚನೆಗೆ ಅನುಗುಣವಾಗಿ ಸಂಸ್ಕೃತಿಯೂ ಅನಿವಾರ್ಯವಾಗಿ ಬದಲಾಗುತ್ತಲೇ ಬಂದಿದೆ. ಒಟ್ಟಿನಲ್ಲಿ ಆರ್ಥಿಕ ಚಲನೆಗೆ ಅನುಗುಣವಾಗಿ ಮನುಷ್ಯನ ಜೀವನ ವಿಧಾನ ರೂಪಾಂತರಗೊಳ್ಳುತ್ತಲೇ ಇರುತ್ತದೆ.

ಬುಡಕಟ್ಟು ಸಮುದಾಯಗಳ ಸ್ಥಿತ್ಯಂತರಗಳನ್ನು ಗಮನಿಸಿದಾಗ ಮುಖ್ಯವಾಗಿ ಸಂಭವಿಸಿದ ಪ್ರತಿಯೊಂದು ಬದಲಾವಣೆಗೂ ಉತ್ಪಾದನಾ ವಿಧಾನಕ್ಕೂ ನೇರವಾದ ಸಂಬಂಧವಿದೆ. ಬುಡಕಟ್ಟು ಸಮುದಾಯಗಳು ಆದಿಕಾಲದಿಂದಲೂ ನಡೆದು ಬಂದಿರುವುದು ಅರಣ್ಯಗಳನ್ನು ಅವಲಂಬಿಸಿಯೇ. ಸಮುದಾಯಗಳ ಬೆಳವಣಿಗೆಯಲ್ಲಿ ಉತ್ಪಾದನಾ ವಿಧಾನದ ಚಟುವಟಿಕೆಗಳಲ್ಲಿನ ಪ್ರಮುಖ ಸ್ಥಿತ್ಯಂತರಗಳು ನಾಗರೀಕತೆಯ ಮಜಲಿನ ವ್ಯವಸ್ಥೆಯವರೆಗೂ ಬಂದಿರುವುದು ಕಾಣಬಹುದು. ಪರಿವರ್ತನೆಯು ಬುಡಕಟ್ಟು ಸಮುದಾಯಗಳಲ್ಲಿ ಸಾಮಾನ್ಯವಾದರೂ ಅವುಗಳನ್ನು ಪರಿಗಣಿಸದೇ ತಮ್ಮ ಜೀವನ ವಿಧಾನ ರೂಪಿಸಿಕೊಳ್ಳಲು ಬೇಕಾದ ಬದಲಾವಣೆಗಳನ್ನು ಬಯಸಿ ಸಾಗುತ್ತಿರುವುದು ಮುಖ್ಯವಾಗಿ ಕಂಡು ಬರುತ್ತಿರುವ ವಿಷಯವಾಗಿದೆ.

ಇನ್ನು ಬುಡಕಟ್ಟು ಸಮುದಾಯಗಳು ಆದಿಕಾಲದಿಂದಲೂ ಅರಣ್ಯದಲ್ಲಿ ಜೀವಿಸುತ್ತಾ ಅರಣ್ಯದ ಅಂಗವಾಗಿಯೇ ಜೀವನ ವಿಧಾನವನ್ನು ರೂಪಿಸಿಕೊಂಡಿದ್ದಾರೆ. ಇಂತಹ ಬುಡಕಟ್ಟು ಸಮುದಾಯದ ಜನರು ಮೂಲಭೂತ ಸೌಲಭ್ಯಗಳಿಂದ ವಂಚಿತರಾಗಿ ಪ್ರಗತಿಯ ವಿಷಯ ಅವರಿಗೆ ತಿಳಿಯುವುದಾದರೂ ಹೇಗೆ? ಬುಡಕಟ್ಟು ಸಮುದಾಯದ ಜನರನ್ನು ನಾಗರಿಕತೆಯು ಹಗಲುದರೋಡೆ ರೀತಿಯಲ್ಲಿ ಹಿಂಸಿಸುತ್ತಿರುವುದರ ಜೊತೆಗೆ, ಅವರ ಮೂಲಭೂತ ಸೌಲಭ್ಯಗಳಿಂದ ವಂಚಿತರಾಗಿ ಜೀವನ ಸಾಗಿಸುತ್ತಿರುವುದು ಸಹ ವಾಸ್ತವದ ಸಂಗತಿ. ಇಂತಹ ಸಮುದಾಯದ ಜನರಲ್ಲಿ ಸ್ವಾತಂತ್ರ್ಯ ಬಗ್ಗೆ ತಿಳಿಯಲು ಯತ್ನಿಸಿದಲ್ಲಿ ಅವರುಗಳು ಅದು ಯಾರು? ಏನು? ಎಂಬ ಪ್ರಶ್ನೆ ಅವರಿಂದಲೇ ಬರುವುದು ಸಾಮಾನ್ಯ. ಇಂತಹ ವ್ಯವಸ್ಥೆ ಅಡಿಯಲ್ಲಿ ಜೀವಿಸುತ್ತಿರುವ ಬುಡಕಟ್ಟು ಸಮುದಾಯಗಳ ಬದಲಾಗುತ್ತಿರುವ ಸ್ಥಿತ್ಯಂತರಗಳ ಬಗ್ಗೆ ತಿಳಿಯಲು ಯತ್ನಿಸಿದರೆ ಉತ್ತರ ಮಾತ್ರ ನಿರಾಶಾದಾಯಕವಾಗಿ ಬರುತ್ತದೆ 'ಬದುಕಲು ಆಹಾರ ಬೇಕು. ಆ ಕೆಲಸ ಅನ್ನಕ್ಕಾಗಿ ಅದು ಮಾತ್ರ ನಮಗೆ ಗೊತ್ತು. ಸ್ವಾತಂತ್ರ್ಯ, ಪಾತ್ಯಂತ್ರ್ಯ ನಮಗೆ ತಿಳಿಯೋದು ಇಲ್ಲ' ಎನ್ನುತ್ತಾರೆ ಸಮುದಾಯದ ಜನರು.

ಹೀಗಾಗಿ ಬುಡಕಟ್ಟು ಸಮುದಾಯದ ಎಷ್ಟೋ ಜನರು ನಾಗರಿಕತೆ ಸರಕಾರಗಳು ರೂಪಿಸಿದ ನೀತಿಯ ಕಣ್ಣೆದುರಿಗಿದ್ದರೂ ಸಹ ಇನ್ನು ಶೋಷಣೆಯ ಹಾದಿಯಲ್ಲಿಯೇ ಜೀವಿಸುತ್ತಿರುವುದು ಸಾಮಾನ್ಯವಾಗಿದೆ. ಮತ್ತೊಂದು ಕಡೆಯಲ್ಲಿ ಸರಕಾರ ರೂಪಿಸಿದ ಅಭಿವೃದ್ಧಿ ನೀತಿಯೂ ಸಹ ಉತ್ತಮವಾದ ಜೀವನ ವಿಧಾನದ ಮಾರ್ಗಕ್ಕೆ ಮುನ್ನೆಡೆಸುವಂತೆ ಮಾಡಲು ಇನ್ನು ಸಾಧ್ಯವಾಗಿಲ್ಲದಿರುವುದು ವಿಪರ್ಯಾಸ. ನಾಗರಿಕತೆಯ ಕ್ರೂರ ಮನುಷ್ಯನ ದಬ್ಬಾಳಿಕೆಯು ಇನ್ನು ಜೀವಂತವಿರುವುದನ್ನು ಇಲ್ಲಿ ಗಮನಿಸಬಹುದು. ಅಭಿವೃದ್ಧಿ ಹೆಸರಿನಲ್ಲಿ ದೊರೆಯುಬಹುದಾದ ಪ್ರಮುಖ ಸೌಲಭ್ಯಗಳು ಬುಡಕಟ್ಟು ಸಮುದಾಯಗಳಿಗೆ ದೊರೆಯದೇ ಇರುವುದನ್ನು ಸಹ ಗಮನಿಸಬಹುದು. ವ್ಯವಸ್ಥೆಯನ್ನು ಆಧುನೀಕರಣಗೊಳಿಸುತ್ತಾ ಹೊಸತನವನ್ನು ಹುಡುಕಿಕೊಂಡು ನಡೆಯುವ ಹಾದಿಯಲ್ಲೂ ಸಹ ಎಲ್ಲ ಕಷ್ಟಗಳೇ ಇವೆ ಎನ್ನಬಹುದು. ಸಾಮಾಜಿಕ ವ್ಯವಸ್ಥೆಯ ಮೂಲಭೂತ ಕಲ್ಪನೆಯಾದ ಸಾಮಾಜಿಕ ನ್ಯಾಯವು ಸಹ ಕಾಣೆಯಾಗಿದೆ. ಆದರೂ ಸಹ ಹಲವಾರು ಬುಡಕಟ್ಟು ಸಮುದಾಯಗಳು ಬದಲಾದ ವ್ಯವಸ್ಥೆಯ ಜೊತೆಗೆ ಸ್ಪಂದಿಸಲು ಆತುರರಾಗಿದ್ದಾರೆ. ತನ್ನೆಲ್ಲಾ ಬದಲಾವಣೆಗಳು ಸಾಮಾಜಿಕ ಉತ್ಪತ್ತಿ ಹಾಗು ಸಾಮಾಜಿಕ ಸ್ತರ ವಿನ್ಯಾಸಗಳಲ್ಲಿನ ಮೌಲ್ಯಯುತ ಬದಲಾವಣೆಯ ಜೀವನದ ಜೊತೆಗೆ ಸ್ಪಂದಿಸಿ ಬೆರೆತಿರುವುದು ಹೊಸ ಜೀವನದ ಸಾಮಾಜಿಕ ಬೆಳವಣಿಗೆಯನ್ನು ಬಯಸಿರುವುದು ಬುಡಕಟ್ಟು ಸಮುದಾಯಗಳಲ್ಲಿ ಕಂಡು ಬರುತ್ತಿರುವ ದೃಶ್ಯವಾಗಿದೆ.

ಮುಖ್ಯವಾಗಿ ಬುಡಕಟ್ಟು ಸಮುದಾಯವೆಂದ ತಕ್ಷಣ ಹಲವಾರು ಚಿತ್ರಣಗಳು ಮೂಡುವುದು ಸಹಜ. ಆದರೆ ವ್ಯವಸ್ಥೆಯ ಕರಿನೆರಳು ಇಂತಹ ಸಮುದಾಯದ ಮೇಲೆ ಬೀರಿರುವ ನೀತಿ, ರೀತಿಗಳು ಘೋರವಾದದ್ದು. ಆದಿಕಾಲದಿಂದಲೂ ಸ್ವಾತಂತ್ರ್ಯವಾಗಿ ಜೀವಿಸುತ್ತಾ ಪ್ರಕೃತಿಯ ರಕ್ಷಕರಾಗಿ, ಪ್ರಕೃತಿಯಲ್ಲಿನ ಸಂಪತ್ತು ಬಳಸಿಕೊಂಡು ತನ್ನದೇ ಆದ ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ, ರಾಜಕೀಯ, ಆರ್ಥಿಕ ವ್ಯವಸ್ಥೆಯನ್ನು ಅರಣ್ಯದಲ್ಲಿ ಜೀವಿಸುತ್ತಿದ್ದರು. ಆಧುನಿಕ ವ್ಯವಸ್ಥೆಗಳು ಬಂದಂತೆ ಬದಲಾದ ವ್ಯವಸ್ಥೆಗೆ ಮುಖ ಮಾಡಿ ಜೀವನ ವಿಧಾನ ರೀತಿ, ನೀತಿಗಳನ್ನು ಪರಿವರ್ತಿಸಿಕೊಂಡಿರುವುದು ಇಂದು ಗಮನಿಸಬಹುದು.

ಸ್ವಾತಂತ್ರ ಪೂರ್ವದಲ್ಲಿ ಬುಡಕಟ್ಟು ಸಮುದಾಯಗಳನ್ನು ಮತಾಂತರದ ದೃಷ್ಟಿಯಿಂದ ಅಧ್ಯಯನಿಸಿದ ಎಷ್ಟೋ ಅಧ್ಯಯನಕಾರರು ಹಲವು ಬುಡಕಟ್ಟು ಸಮುದಾಯಗಳ ಏಳಿಗೆಗೆ ದುಡಿದಿದ್ದಾರೆ. ಹಾಗೆಯೇ ಬುಡಕಟ್ಟು ಸಮುದಾಯಗಳ ಸಾಂಸ್ಕೃತಿಕ ಜಗತ್ತಿನಲ್ಲಿ ಅವರೇ ಬದಲಾವಣೆಗಳು ಬೇಕಿದ್ದರೆ ಮಾತ್ರ ಪಡೆಯುವ ಸಮುದಾಯಗಳಿಗೆ ಮಾತ್ರ ನೀಡಬೇಕು ಎನ್ನುವುದರ ಜೊತೆಗೆ, ಬುಡಕಟ್ಟು ಸಮುದಾಯಗಳ ಸಾಂಸ್ಕೃತಿಕ, ಸಾಮಾಜಿಕ ವಿಧಾನವನ್ನು ನಾಗರಿಕತೆಯ ಜನರು ಬದಲಾಯಿಸಲು ಹೋಗದ ಹಾಗೆ ನೋಡಿಕೊಳ್ಳಬೇಕು ಎಂದಿದ್ದರು. ಹೀಗಾಗಿ ಪೂರ್ವದಲ್ಲಿ ಬುಡಕಟ್ಟು ಸಮುದಾಯದ ಚಿತ್ರಣವೇ ಬೇರೆಯಾಗಿತ್ತು. ವ್ಯವಸ್ಥೆಯಲ್ಲಿ ಬುಡಕಟ್ಟು ಸಮುದಾಯದ ಚಿತ್ರಣವೇ ಬೇರೆಯಾಗಿರುತ್ತಿತ್ತು. ವ್ಯವಸ್ಥೆಯಲ್ಲಿನ ಸ್ಥಾನಮಾನಗಳು, ಶ್ರಮ, ಭೂಮಿ, ಆಸ್ತಿಯ ಪರಿವೇ ಇಲ್ಲದೆ ಜೀವಿಸುತ್ತಿದ್ದ ಇವರುಗಳ ಬದುಕು

ಜೀವಿಸುವುದಕ್ಕಾಗಿ ಆಹಾರದ ಅನ್ವೇಷಣೆ, ಆಹಾರಕ್ಕಾಗಿ ಕಾಡಿನ ಅವಲಂಬನೆ ಸಾಮಾನ್ಯವಾಗಿತ್ತು. ಇಂತಹ ಪರಿಸರದಿಂದಲೇ ಶ್ರೇಣಿಕೃತ ಸಮಾಜ ರೂಪವಾಗಿ ಹೊಮ್ಮಿಬರತೊಡಗಿತ್ತು. ಇದರಿಂದಾಗಿ ಆರ್ಥಿಕ ವ್ಯವಸ್ಥೆಯು ಸಹ ಸ್ಥಿತ್ಯಂತರಗೊಳ್ಳುತ್ತಾ ನಡೆಯತೊಡಗಿದೆ.

ಅಭಿವೃದ್ಧಿ ಯೋಜನೆಗಳು ಸ್ವಾತಂತ್ರ್ಯದ ನಂತರ ಬುಡಕಟ್ಟು ಸಮುದಾಯದ ಜನರನ್ನು ಏಕಾಏಕಿ ಕಾಡಿನಿಂದ ನಾಡಿಗೆ ನೂಕಲಾಯಿತು. ಹೊಸದಾಗಿ ಸೃಷ್ಟಿಗೊಂಡ ಅರಣ್ಯ ಕಾಯಿದೆಗಳು ಬುಡಕಟ್ಟು ಜನರನ್ನು ಶೋಷಿಸುವಂತೆ ಮಾಡತೊಡಗಿದೆ. ಹೀಗಾಗಿ ಬದಲಾದ ವ್ಯವಸ್ಥೆಯಲ್ಲಿ ಕಾಡಿನ ಉತ್ಪನ್ನಗಳಿಂದಲೇ ಜೀವನ ರೂಪಿಸಿಕೊಂಡಿದ್ದ ಸಮುದಾಯಗಳಲ್ಲಿ ಅಲೆಮಾರಿ ಹಕ್ಕಿಪಿಕ್ಕಿಯರು ಸಹ ಪ್ರಮುಖರು. ಹಕ್ಕಿಪಿಕ್ಕಿಯರು ಬೇಟೆಯನ್ನು ಅರಣ್ಯದಲ್ಲಿ ರೂಪಿಸಿಕೊಂಡಿದ್ದವರು. ಇಂದು ಬದಲಾವಣೆಯನ್ನು ಬಯಸಿ ವಿವಿಧ ವೃತ್ತಿಗಳಲ್ಲಿ ದುಡಿಯುವವರಾಗಿದ್ದಾರೆ.

ಈ ಎಲ್ಲಾ ಸ್ಥಿತ್ಯಂತರ ಹೊಸದಾಗಿ ಕನಸುಗಳ ಲೋಕವನ್ನು ತೆರೆಯುವ ಹಾಗೆಯೇ, ಬುಡಕಟ್ಟು ಸಮುದಾಯದ ಜನರಿಗೆ ಸರಕಾರಗಳು ತೋರಿಸುತ್ತಿದೆ . ಸರಕಾರ ಮಾಡುವ ಅಥವಾ ತೊರಿಸುವ ಚಿತ್ರಣದ ಹಿಂದೆ ಬುಡಕಟ್ಟು ಸಮುದಾಯ ತನ್ನ ಅಮೂಲ್ಯವಾದ ಸಾಂಸ್ಕೃತಿಕ, ಜಾನಪದೀಯ, ಸಾಮಾಜಿಕ, ಧಾರ್ಮಿಕ, ರೀತಿ, ನಂಬಿಕೆಗಳನ್ನು ಬದಲಾಯಿಸಿಕೊಳ್ಳಬೇಕಾಗಿದೆ. ಮುಖ್ಯವಾಗಿ ತನ್ನೆಲ್ಲ ಬದಲಾವಣೆಯ ಜೊತೆಗೆ ಸಮುದಾಯದ ಶಕ್ತಿ, ಉತ್ಪಾದನಾ ವಿಧಾನವನ್ನೆ ಬದಲಾಯಿಸಿಕೊಂಡು ಹೊಸ ವಿಧಾನವನ್ನು ಸೃಷ್ಟಿಸಿಕೊಳ್ಳತೊಡಗಬೇಕಾಗಿದೆ. ಬದಲಾದ ವ್ಯವಸ್ಥೆಗೆ ಮುಖಮಾಡಿ ಇಂದು ಸಮುದಾಯ ತನ್ನೆಲ್ಲಾ ಸಾಮಾಜಿಕ ವ್ಯವಸ್ಥೆಯಲ್ಲಿ ವಿಭಿನ್ನತೆಯನ್ನು ಕಾಣುತ್ತಿದೆ. ತಮ್ಮ ಹಕ್ಕುಗಳನ್ನು ಮನಗಂಡಿರುವ ಸಮುದಾಯದ ಜನರು ಹೋರಾಟದ ಹಾದಿಯಲ್ಲಿ ಬಂದು ನಿಂತಿರುವುದು ಸ್ಥಿತ್ಯಂತರದ ಪ್ರಮುಖ ಕೊಡುಗೆಯೇ ಆಗಿದೆ.

## ಸಾಂಸ್ಕೃತಿಕ ಸ್ಥಿತ್ಯಂತರ

ಬುಡಕಟ್ಟು ಸಂಸ್ಕೃತಿಯನ್ನು ಚರ್ಚಿಸುವಾಗ ಸಂಸ್ಕೃತಿಯ ಅನನ್ಯತೆಗಳು ಬಹಳ ಮುಖ್ಯ. ಕಾಡಿನಿಂದಲೇ ವಿಶೇಷ ಸಾಂಸ್ಕೃತಿಕ ಪಾರಂಪರೆಯನ್ನು ಕಟ್ಟಿಕೊಂಡು ಹೊರ ಜಗತ್ತಿನ ವಿಕಾಸದ ಜೊತೆ ನಡೆಯಲು ನಿರಾಕರಿಸುತ್ತಾ ಬಂದ ಬುಡಕಟ್ಟು ಸಮುದಾಯ ಅರಣ್ಯದೊಂದಿಗೆ ಮನುಷ್ಯನ ಸಂಬಂಧವನ್ನು ಆದಿಕಾಲದಿಂದಲೂ ನಡೆದುಬಂದ ಸ್ಥೂಲ ಪರಿಚಯವನ್ನು ಮಾಡಿಕೊಡುತ್ತದೆ. ಅಲೆಮಾರಿಗಳಾದ ಹಕ್ಕಿಪಿಕ್ಕಿಯರು ಕಾಡಿನಲ್ಲಿ ಕಟ್ಟಿದ ಗುಡಿಸಲು, ವಾಸಿಸುವ ರೀತಿ, ಆಚರಣೆಗಳೊಂದಿಗೆ ಪ್ರಕೃತಿಯನ್ನು ಬೆಸೆದುಕೊಂಡ ರೀತಿಯೇ ಬೇರೆಯದು. ಕಾಡಿನಲ್ಲಿ ಹಕ್ಕಿಪಿಕ್ಕಿಯರು ಒಂದು ಕಡೆ ನೆಲೆಯೂರದ ಬದುಕಿನ ಸಂಸ್ಕೃತಿಯನ್ನು ಪಡೆದಿದ್ದು ಸದಾ ಅಲೆಮಾರಿಯಾಗಿ ಅಲೆಯುವವರಾಗಿದ್ದರು. ಜೊತೆಗೆ ವಿಶೇಷವಾಗಿ ವಾಸಿಸುವ ಹಟ್ಟಿಗಳನ್ನು ನಿರ್ಮಿಸಿಕೊಂಡು ಬೇಟೆ ಸಂಸ್ಕೃತಿಯೊಂದಿಗೆ ಜೀವನ ನಡೆಸುತ್ತಿದ್ದರು.

ಪ್ರತಿಯೊಂದು ಬುಡಕಟ್ಟು ಸಮುದಾಯ ತನ್ನದೇ ಆದ ಸಾಂಸ್ಕೃತಿಕ ಪರಂಪರೆಯನ್ನು ಕಟ್ಟಿಕೊಂಡಿರುತ್ತಿತ್ತು. ಇಂತಹ ಸಾಂಸ್ಕೃತಿಕ ಪರಂಪರೆಯು ನಿರಂತರವಾಗಿ ಚಲನೆಯ ಸ್ಥಿತಿಯನ್ನು ಹೊಂದಿರುವುದು ವಾಸ್ತವದ ಸಂಗತಿಯಾಗಿದೆ. ತನ್ನ ಸಂಸ್ಕೃತಿಯ ಅಂಗವಾಗೇ ಬೆಳೆದು ಬರುವ ಬದುಕಿನ ಎಲ್ಲಾ ವ್ಯವಸ್ಥೆಯ ಆಧಾರಗಳಾದ ಸಾಮಾಜಿಕ, ಧಾರ್ಮಿಕ, ರಾಜಕೀಯ ಆರ್ಥಿಕ ವ್ಯವಸ್ಥೆಗಳೆಲ್ಲಾವೂ ಸಹ ಸಂಸ್ಕೃತಿಯಲ್ಲಿಯೇ ಅಡಕವಾಗಿರುತ್ತಿದ್ದವು. ಸಾಂಸ್ಕೃತಿಕ ಜೀವನ ಎಂದ ತಕ್ಷಣ ಈ ಮೇಲಿನ ಅಂಗಗಳ ಸಮ್ಮಿಳಿತವೆಂದೇ ಗುರುತಿಸಬಹುದಾಗಿದೆ. ಹೀಗಾಗಿ ಇಂತಹ ಸಾಂಸ್ಕೃತಿಕ ಪರಂಪರೆಯು ಸಮಾಜದ ಪರಿವರ್ತನ ಶೀಲತೆಯನ್ನು ಹೊಂದಿರುತ್ತಿತ್ತು. ಹೀಗಾಗಿ ಜೀವನ ವಿಧಾನದಲ್ಲಿ ಬರುವ ಎಲ್ಲಾ ಚಟುವಟಿಕೆಗಳು ಸಾಂಸ್ಕೃತಿಕ ಪರಂಪರೆಯಿಂದಲೇ ಹುಟ್ಟಿ ಬರುತ್ತಿದ್ದವು. 'ಕಾಡು ಸಂಸ್ಕೃತಿಯ ಜನ ಕಾಡಿನಲ್ಲೇ ಇರಲಿ, ಊರಿನಲ್ಲೇ ಇರಲಿ, ಊರಾಚೆಯ ಅಂಚಿನಲ್ಲೇ ಇರಲಿ, ಸಂಸ್ಕೃತಿಯ ಸ್ಥಾಯಿರೂಪಗಳನ್ನು ಅಳವಡಿಸಿಕೊಂಡಿರುತ್ತಿದ್ದರು.'[2]

ಇನ್ನು ಆಧುನಿಕತೆಯ ಕಡೆಗೆ ಸಾಗಿದ ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯ ತೀವ್ರಗತಿಯಲ್ಲಿ ಬದಲಾವಣೆಯನ್ನು ಮೈಗೂಡಿಸಿಕೊಂಡಿದೆ. ಈ ಎಲ್ಲಾ ಬದಲಾವಣೆಗೆ ಅವರುಗಳ ಅಲೆಮಾರಿತನವೇ ಕಾರಣವಾಗುತ್ತದೆ. ಸಮುದಾಯದ ಆಚರಣೆಗಳು, ವಿಧಿವಿಧಾನಗಳು ಸಂಸ್ಕಾರಗಳೂ, ಸಾಮಾಜಿಕ ವ್ಯವಸ್ಥೆ ನ್ಯಾಯಪದ್ಧತಿ ಎಲ್ಲಾವೂ ಪ್ರಾಚೀನತೆಯಿಂದ ಬೆಳೆದು ಬಂದಂತಹ ಚಟುವಟಿಕೆಗಳಲ್ಲಿ ಪರಿವರ್ತನೆ ಕಾಣಬಹುದು. ತಲೆಮಾರಿನಿಂದ ತಲೆಮಾರಿಗೆ ಸಾಗುತ್ತಾ ಬಂದಿದ್ದ ಹಲವಾರು ಸಂಪ್ರದಾಯಗಳು ಇಂದು ಕಾಲೋನಿಯ ಜನರಲ್ಲಿ ಬದಲಾವಣೆಯಾಗತೊಡಗಿದೆ. ಹರ್ ಕೊವಿಟ್ಸ್ ರವರು ಹೇಳಿರುವಂತೆ 'ಮನುಷ್ಯನ ಸಮಾಜವಲ್ಲಿ ಜನರ ಜೀವನ ವಿಧಾನವೇ ಸಂಸ್ಕೃತಿ' ಎನ್ನುವ ಮಾತು ಮನುಷ್ಯನ ಶ್ರಮವನ್ನು ಅವಲಂಬಿಸಿರುವುದು. ಇಂತಹ ಸಾಂಸ್ಕೃತಿಕ ರೂಪಾಂತರ ಭಿನ್ನವಾಗಿದ್ದು, ಬಹಳ ಬೇಗನೆ ಹೊರ ಜಗತ್ತಿನ ಸಂಬಂಧಗಳಿಗೆ ತೆರೆದುಕೊಳ್ಳುವುದರೊಂದಿಗೆ ಪರಿಸರದ ನೇರ ಸಂಬಂಧವನ್ನು ಅವಲಂಬಿಸಿ ಉದ್ಭವಾಗುವ ಹೊಸ ಬೆಳವಣಿಗೆಗಳ ಜೊತೆಯಲ್ಲಿ ಜೀವನ ಸಾಗಿಸಲು ಇಂದು ಮುಖ ಮಾಡಿ ನಿಂತಿದೆ. ಹೀಗಾಗಿ ಸಂಸ್ಕೃತಿಯು ನಿಂತ ನೀರಲ್ಲ ಅದು ಹರಿಯುವ ಹಾಗೆ ಎನ್ನುವ ಮಾತನ್ನು ದೃಢಪಡಿಸಿಕೊಂಡು ಆಧುನೀಕರಣದ ಜಗತ್ತಿನೊಂದಿಗೆ ಬೆಸೆದುಕೊಂಡು ಜೀವಿಸುತ್ತಿದೆ. ಇಷ್ಟೆಲ್ಲಾ ಬದಲಾವಣೆಗಳು ಸಂಭವಿಸಿದ್ದರೂ ಸಹ ಹಕ್ಕಿಪಿಕ್ಕಿ ಕಾಲೋನಿಯ ಜನರು ತನ್ನ ಮೌಲ್ಯಗಳು, ಪಾರಂಪರತೆಯನ್ನು ಇನ್ನೂ ಸರಿಯಾದ ರೀತಿಯಲ್ಲಿ ಬಿಟ್ಟುಕೊಟ್ಟಿಲ್ಲ. ಹೊಸ ತಲೆಮಾರಿನ ವೈಜ್ಞಾನಿಕಯುಗದ ಪೀಳಿಗೆಯು ಬದಲಾವಣೆಯ ಹಾದಿಯಲ್ಲಿ ನಡೆಯುತ್ತಿದ್ದರೂ, ತನ್ನ ವ್ಯವಸ್ಥೆಯ ಹಳೆಯ ಜ್ಞಾನರೂಪಿಗಳು ಹಾಗೂ ಹಲವು ವಿಧವಾದ ಉತ್ಪಾದನಾ ವಿಧಾನಗಳು ಬಿಟ್ಟು ಕೊಡದೇ, ಆಧುನೀಕರಣದ ಹಿತಕ್ಕೆ ತಕ್ಕಂತೆ ಮಾರ್ಪಾಡು ಮಾಡಿಕೊಂಡು ನಡೆಯುತ್ತಿರುವುದು ಗಮನಿಸಬಹುದಾದ ವಿಷಯವಾಗಿದೆ.

ಮುಖ್ಯವಾಗಿ ಹಕ್ಕಿಪಿಕ್ಕಿಯರ ಸಾಂಸ್ಕೃತಿಕ ಸ್ಥಿತ್ಯಂತರವು ಇವರುಗಳ ಅಲೆಮಾರಿತನದ ವ್ಯಾಪಾರಿ ಜೀವನ ಅಂಗವಾಗಿ ಬಂದಿದೆ. ಬಹುಭಾಷಿಕ ಪ್ರಜ್ಞೆಯು ಬಹಳ ಬೇಗನೆ ಹೊಸ ವ್ಯವಸ್ಥೆಯ ಜೊತೆ ನಡೆಯಲು

ಸಹಕಾರಿಯಾಗಿದೆ. ಹೀಗಾಗಿ ಸಮುದಾಯ ಶಕ್ತಿಯು ಮಹಿಳಾ ಪ್ರಧಾನವಾಗಿದ್ದು, ಆರ್ಥಿಕ ವ್ಯವಸ್ಥೆಗೆ ನೀಡುವ ಕೊಡುಗೆಯನ್ನು ಅದೇ ರೀತಿಯಾಗಿ ಉಳಿಸಿಕೊಂಡು ಬಂದಿದೆ. ಪ್ರಾಚೀನ ಕಾಲದ ಮಾತೃವ್ಯವಸ್ಥೆಯ ಪ್ರಧಾನ್ಯತೆಯನ್ನು ಕಡೆಗಾಣಿಸದೇ ಇರುವುದು ಹೊಸ ಆಶೋತ್ತರಗಳ ಬೆಳಕಿನಲ್ಲಿ ಹೊಸದಾದ ಅವಿಷ್ಕಾರಗಳು ಮಹಿಳೆಯರನ್ನು ಆಕರ್ಷಿಸುವಂತೆ ಮಾಡಿದೆ. ಹೀಗೆ ಜೀವನ ವಿಧಾನದಲ್ಲಿನ ಅಭಿರುಚಿಗಳು ಉತ್ಪಾದನಾ ವಿಧಾನಗಳು ಬದಲಾಗತೊಡಗಿದೆ. ಕುಟುಂಬದ ವ್ಯವಸ್ಥೆಗೆ ಆದಾಯ ತರುವ ಹೆಚ್ಚು ಶ್ರಮವನ್ನು ವ್ಯಯಿಸುವ ರಂಗಗಳನ್ನು ಗುರುತಿಸಿಕೊಂಡು ಅವುಗಳಲ್ಲಿ ತೊಡಗಿರುವುದು ಇಲ್ಲಿ ಮುಖ್ಯವಾಗಿ ಗಮನಿಸಬಹುದು. ತನ್ನ ಮಿತಿಯಲ್ಲಿಯೇ ಬೆಳೆದು ರೂಪಿಸಿಕೊಂಡಿರುವ ಸಾಮಾಜಿಕ, ಆರ್ಥಿಕ ಜೀವನ ಪ್ರತಿಭೆಯ ಮೂಲದಿಂದಲೇ ಎನ್ನಬಹುದಾಗಿದೆ.

**ಸಾಮಾಜಿಕ ಸ್ಥಿತ್ಯಂತರ**

ಬುಡಕಟ್ಟು ಸಮುದಾಯವಾದ ಹಕ್ಕಿಪಿಕ್ಕಿಯರು ಬದಲಾವಣೆಯನ್ನು ಬಯಸಿರುವುದು ಸಾಮಾನ್ಯವಾಗಿದೆ. ಬದುಕಿನ ಜೀವನ ವಿಧಾನದಲ್ಲಿನ ಸ್ಥಿತ್ಯಂತರಗಳು ಅನೇಕ ಬಗೆಯ ಅಭಿವೃದ್ಧಿಗೆ ಮಾರ್ಗದರ್ಶಕವಾಗಿರುವುದರಿಂದ ಬಹುಶಃ ಇಂತಹ ಬದಲಾವಣೆಗಳನ್ನು ಎಲ್ಲರು ಒಪ್ಪಬಹುದು. ಗ್ರಾಮೀಣ ಸಮುದಾಯಗಳ ಜೊತೆಗೆ ಬುಡಕಟ್ಟು ಸಮುದಾಯ ಬದಲಾದ ವ್ಯವಸ್ಥೆಯಲ್ಲಿ ಸಾಮಾಜಿಕ ವ್ಯವಸ್ಥೆಯನ್ನು ರೂಪಿಸಿಕೊಂಡಿರುವುದು ನಾವು ಕಾಣಬಹುದು. ಸಮುದಾಯದ ಆರಂಭದಲ್ಲಿ ಸುತ್ತಲಿನ ಪರಿಸರದಿಂದ ಸಾಮಾಜಿಕ ಶೋಷಣೆಯನ್ನು ಅನುಭವಿಸುತ್ತಿದ್ದುದು ವಾಸ್ತವದ ಸಂಗತಿ. ಸ್ವಾತಂತ್ರ್ಯದ ನಂತರ ದಿನಗಳಲ್ಲಿ ಬೆಳಕಿಗೆ ಬಂದ ಸರಕಾರಗಳು ರೂಪಿಸಿದ ನೀತಿಗಳು ಮಾನವನ ಕಲ್ಯಾಣವೇ ಅಂತಿಮ ಗುರಿ ಎಂದು ಆರಂಭಗೊಂಡ ಅಭಿವೃದ್ಧಿ ಕಾರ್ಯಗಳೂ ಮುಖ್ಯವಾಗಿದ್ದವು. ಅಂತಹ ಸರಕಾರಗಳಿಗೆ ನೀಡುತ್ತಿದ್ದ ಸಲಹೆಗಳು ಬುಡಕಟ್ಟು ಸಮುದಾಯಕ್ಕೆ ವಿಶೇಷವಾದ ಕಾಳಜಿಯನ್ನು ವಹಿಸುವಂತಿದ್ದವು. ಇದರ ಫಲವಾಗಿ ಸಾಮಾಜಿಕ ಸ್ಥಿತ್ಯಂತರ ನಡೆಯುತ್ತಾ ಬಂದಿದೆ.

ಸ್ವಾತಂತ್ರ್ಯದ ಪೂರ್ವದಲ್ಲಿ ಬುಡಕಟ್ಟು ಸಮುದಾಯದ ಸಾಮಾಜಿಕ ಜೀವನದ ಚಿತ್ರಣ ಶೋಷಣೆಯ ರೂಪದಲ್ಲಿ ಬೆಳಕಿಗೆ ಬಂದಿತ್ತು. ಇಂತಹ ಸನ್ನಿವೇಶದಲ್ಲಿ ಮತಾಂತರಗಳು ಸಾಮಾನ್ಯವಾಗಿದ್ದವು. ಈ ಪರಿಸ್ಥಿತಿಯಲ್ಲಿ ಹಕ್ಕಿಪಿಕ್ಕಿಯರು. ಸಾಮಾಜಿಕವಾಗಿ ಕೀಳು ಎಂಬ ಭಾವನೆಯನ್ನು ಹೊಂದಿರುವುದರ ಜೊತೆಗೆ ಕಳ್ಳರ ಗುಂಪು ಎಂಬುದಾಗಿ ಗುರುತಿಸುತ್ತಿದ್ದರು. ಹೀಗಾಗಿ ಹಕ್ಕಿಪಿಕ್ಕಿಯರು ಕಾಡಿನಿಂದಲೇ ನಾಡನ್ನು ನೋಡುತ್ತಿದ್ದ ಸಮಯದಲ್ಲಿ ಬದಲಾದ ಹೊಸ ಆಶೋತ್ತರಗಳು ರಾಜಕೀಯ ಪ್ರಾಬಲ್ಯತೆಯ ವ್ಯವಸ್ಥೆಯಿಂದ ಸಮುದಾಯದ ರಕ್ಷಣೆಯನ್ನು ಹೊತ್ತ ಸರಕಾರ ಸಾಮಾಜಿಕ ರಂಗದಲ್ಲಿ ಹಲವಾರು ಹೊಸ ಬದಲಾವಣೆಗಳು ಸಂಭವಿಸತೊಡಗಿದವು. ಹೀಗಾಗಿ ಕಾಡಿನಿಂದ ನಾಡಿನ ಜನರ ಮುಖ್ಯಧಾರೆಗೆ ಬರತೊಡಗಿದರು. ನಗರ, ಹಳ್ಳಿಗಳ ಸಂಪರ್ಕ ಬೆಸೆದು ಈ ರೀತಿಯ ಬೆಳವಣಿಗೆಯಿಂದಾ ವ್ಯವಸಾಯಗಾರರಾಗಿ, ಕೃಷಿ ಕಾರ್ಮಿಕರಾಗಿ ವಿವಿಧ ವೃತ್ತಿಗಳಲ್ಲಿ ತೊಡಗಿಸಿಕೊಂಡು ಹೊಸ ವಿಧಾನದ ಜೀವನ ಪದ್ಧತಿಯನ್ನು ರೂಪಿಸಿಕೊಳ್ಳತೊಡಗಿದರು.

ಹೀಗಾಗಿ ಪ್ರಗತಿಯ ಹಾದಿಗೆ ಮುಖ ಮಾಡಿದ ಹಕ್ಕಿಪಿಕ್ಕಿಯರು ನಿರಂತರ ಬದಲಾವಣೆಯನ್ನು ಬಯಸಿರುವುದು ಕಾಣಬಹುದು. ಸಾಂಸ್ಕೃತಿಕ ಜೀವನದ ಅಂಗವಾದ ಸಾಮಾಜಿಕ ವ್ಯವಸ್ಥೆಯ ಹಲವಾರು ಹೊಸ ವಿಧವಾದ ಬದಲಾವಣೆಗಳನ್ನು ಭೂತಾನಹಳ್ಳಿಯ ಕಾಲೋನಿಯಲ್ಲಿ ಸೃಷ್ಟಿಸಿದೆ. ಹಕ್ಕಿಪಿಕ್ಕಿಯರ ಬದುಕಿನ ರೀತಿಗೂ ಇಂದು ಬದುಕುತ್ತಿರುವ ರೀತಿಗೂ ಅನೇಕ ವ್ಯತ್ಯಾಸಗಳಿವೆ. ಹೀಗಾಗಿ ಇವರುಗಳ ಬೆಳವಣಿಗೆ ಇಂದು ಸುತ್ತಲ ಸಮುದಾಯಗಳನ್ನು ಚಕಿತಗೊಳಿಸಿದೆ. ಬದುಕುವ ವಿಧಾನದಲ್ಲಿ ಹಕ್ಕಿಪಿಕ್ಕಿಯರು ಇಂದು ದುಡಿಯುವ ಮಾರ್ಗದಿಂದ ಹಿಡಿದು ಆಚರಿಸುತ್ತಿರುವ ಹಬ್ಬ, ಸಂಪ್ರದಾಯವರೆಗೂ ಬದಲಾವಣೆಗಳಾಗಿವೆ. ಇವರುಗಳ ದುಡಿಯುವ ಶಕ್ತಿ, ಖರ್ಚು ಮಾಡುವ ಧೀರತನವನ್ನು ಸುತ್ತಲ ಸಮುದಾಯಗಳು ನೋಡಿಕಲಿಯಬೇಕಾಗಿದೆ.

'ಸರಕಾರದ ಅಭಿವೃದ್ಧಿಯ ನೀತಿಯ ಫಲವಾಗಿ ಸಾಮಾಜಿಕ ಜೀವನ ವಿಧಾನ ಪರಿವರ್ತನೆಗೆ ಕಾರಣವಾಯಿತು. ಪ್ರತ್ಯೇಕವಾದ ಕಾಲೋನಿಯ ನಿರ್ಮಾಣ ಮಾಡಿ ಕೊಟ್ಟರು. ಅದಕ್ಕೂ ಮೊದಲು ದೇಶ ತಿರುಗುತ್ತಿದ್ದೆವು. ಇಲ್ಲಿ ಬಂದ ನಂತರ ಒಂದೇ ಕಡೆ ಇದ್ದೇವೆ. ಈಗ ಉತ್ತಮವಾಗಿದ್ದೇವೆ. ದೇಶ ತಿರುಗೋದು ನಿಂತು ಹೋಯಿತು. ಒಂದು ಕಡೆ ಮನೆ ಬಂತು. ಆದರೆ ಕಾಡು ಇಲ್ಲವಾಗಿದೆ. ಕಾಲೋನಿಯನ್ನು ಕಟ್ಟಿದ ನಂತರ ಮನೆಗಳನ್ನು ಸಹ ಕಟ್ಟಿಕೊಟ್ಟರು. ಸರಕಾರ ಇಲ್ಲಿ ಪ್ರತಿಯೊಂದು ಮನೆಗೂ ೪ ಎಕರೆ ಭೂಮಿ ನೀಡಿದ್ದು ವ್ಯವಸಾಯ ಮಾಡಲು ಸಹಾಯ ಆಗಿದೆ ' ಎಂದು ಹೇಳುತ್ತಾರೆ.

ಕಾಲೋನಿಯ ಆರಂಭದ ನಂತರ ಸ್ಥಿರವಾಗಿ ನೆಲೆನಿಂತ ಸಮುದಾಯದ ಜನರು, ಮನೆಗಳು, ಗಿರಿಜನ, ಆಶ್ರಮಶಾಲೆ, ಪಡಿತರ ಚೀಟಿ, ಮತದಾರರ ಪಟ್ಟಿ, ಅಂಗನವಾಡಿ ಮುಂತಾದ ಸೌಲಭ್ಯಗಳು ಪ್ರಾರಂಭವಾದವು. ಇದರಿಂದ ಶಿಕ್ಷಣದ ಪ್ರಸರಣಕ್ಕೆ ದಾರಿಯಾಯಿತು. ಹೀಗಾಗಿ ಸಮುದಾಯದ ಜನರಲ್ಲಿ ಹೊಸ ವಿಧವಾದ ಬಗೆ ಬಗೆಯ ಆಶೋತ್ತರಗಳು ಪ್ರಾರಂಭವಾದವು. ಇಲ್ಲಿ ವಿಶೇಷವಾಗಿ ಗುರುತಿಸುವ ಮುಖ್ಯವಾದವುಗಳೆಂದರೆ ವೇಷಭೂಷಣಗಳು, ಭಾಷೆ, ಸಂಪ್ರದಾಯ, ಹಬ್ಬ ಆಚರಣೆಗಳು, ಆಹಾರ ಪದ್ಧತಿ, ಶೈಕ್ಷಣಿಕ ಪ್ರಗತಿ, ವೃತ್ತಿಗಳು ಪ್ರಗತಿ ಕಾಣಲಾರಂಭಿಸಿತು. ಸಾಮಾಜಿಕ ವ್ಯವಸ್ಥೆಯ ರೂಪವಾದ ಜನನಸಂಸ್ಕಾರ, ನಾಮಕರಣ, ಋತುಶಾಂತಿ, ಮದುವೆ, ಕೌಟುಂಬಿಕ ಸಂಬಂಧ, ಮರಣಸಂಸ್ಕಾರ, ಸಾಮಾಜಿಕ ಸಂಘಟನೆಯಲ್ಲಿ ವಿಶೇಷತೆಯ ಸಾಂಸ್ಕೃತಿಕ ಪರಂಪರತೆಯ ಬದಲಾವಣೆಗಳು ಬರತೊಡಗಿದವು. ಈ ಎಲ್ಲಾ ಬದಲಾದ ಸನ್ನಿವೇಶಗಳಿಗೆ ಸುತ್ತಲಿನ ಗ್ರಾಮೀಣ ಸಮುದಾಯಗಳ ಪ್ರಭಾವ ಹೆಚ್ಚಾಗಿದ್ದಿತು. ಕಾಲನಂತರ ಸುತ್ತಲ ಸಮುದಾಯಗಳ ಜೊತೆಗೆ ಸಾಮಾಜಿಕ ವ್ಯವಸ್ಥೆಯಲ್ಲಿ ಪೈಪೋಟಿಯನ್ನು ಮಾಡುತ್ತಾ ಜೀವಿಸುವುದನ್ನು ಕಲಿತಿದ್ದಾರೆ. ಸಮುದಾಯದ ಅಭಿವೃದ್ಧಿ ಬದಲಾವಣೆಗಳು ಇಂದು ಈ ಜನರನ್ನು ಅನಿವಾರ್ಯವಾಗಿ ಗ್ರಾಮೀಣ ಜನರಂತೆ ಗುರುತಿಸಿಕೊಳ್ಳುವಂತೆ ಸಹ ಮಾಡತೊಡಗಿದೆ. ಈ ಎಲ್ಲಾ ಹಿನ್ನಲೆಯಲ್ಲಿ ಕಾಲೋನಿಯ ಜನರಲ್ಲಿ ಆಚರಣೆಗಳು ಬಹಳಷ್ಟು ಬದಲಾವಣೆಯಾಗಿದೆ.

ಅಲೆಮಾರಿ ಜೀವನವನ್ನು ತೊರೆದ ನಂತರ ಕುರಿ, ಕೋಳಿ, ಹಸು, ಎತ್ತುಗಳು ಮುಂತಾದ ಪ್ರಾಣಿಗಳನ್ನು ಸಾಕುವುದರ ಜೊತೆಗೆ ಡೇರೆಗಳಲ್ಲಿ ವಾಸಿಸುತ್ತಿದ್ದ ಜನರು ವ್ಯವಸ್ಥಿತವಾದ ಮನೆಗಳಲ್ಲಿ

ವಾಸವಾಗಿರುವುದು ಕಾಣಬಹುದು. ಹಕ್ಕಿಪಿಕ್ಕಿಯರ ಜೀವನದ ವಿಧಾನದಲ್ಲಿ ಬದುಕುವ ರೀತಿ ನೀತಿಗಳು ಬದಲಾವಣೆಯಾಗತೊಡಗಿವೆ. ಆಹಾರ ಪದಾರ್ಥಗಳು ಮುಖ್ಯವಾಗಿ ಸುತ್ತಲಿನ ಪರಿಸರದಲ್ಲಿನ ಸಮುದಾಯಗಳ ಪದ್ಧತಿಯಂತೆ ಅವಲಂಬಿಸಿಕೊಂಡಿದ್ದಾರೆ. ಮಾಂಸಹಾರಿಗಳಾದ ಈ ಜನರು ಇಂದು ಮಾಂಸವನ್ನು ಕೊಂಡು ತಿನ್ನುವ ಪರಿಸ್ಥಿಯಲ್ಲಿದ್ದಾರೆ. ಇನ್ನು ವ್ಯಾಪಾರ ಮಾಡುವ ಹೆಂಗಸರು ಮತ್ತು ಗಂಡಸರು ಹೋಟಲ್ ತಿಂಡಿ, ಊಟ ಮಾಡುವವರಾಗಿದ್ದಾರೆ. ಕಾಲೋನಿಯಲ್ಲಿ ವ್ಯವಸಾಯಗಾರರಾಗಿ ದುಡಿಯುವ ಇವರುಗಳು ರಾಗಿ, ಮುದ್ದೆ, ಸಾರು ತಿನ್ನುವುದು ಕಲಿತಿದ್ದಾರೆ. ರೈತರ ಮಕ್ಕಳಂತೆ ದಿನಾಲು ಮನೆಯಲ್ಲಿ ರಾಗಿ ಮುದ್ದೆಯ ಊಟ ಸೊಪ್ಪು ಮತ್ತು ತರಕಾರಿಗಳ ಸಾರು ಮಾಡುವುದು ಮುಖ್ಯವಾದ ಬದಲಾವಣೆಯಾಗಿದೆ.

ರಾಗಿ ಕಲ್ಲಿನಿಂದ ರಾಗಿಯನ್ನು ಬೀಸಿ ಹಿಟ್ಟುತರುತ್ತಿದ್ದ ಈ ಜನರು ಇಂದು ಗಿರಣಿಯನ್ನು ಹುಡಕಿ ರಾಗಿಯನ್ನು ಬೀಸಿಕೊಂಡು ಬರುವವರಾಗಿದ್ದಾರೆ. ಬೇಟೆಯನ್ನು ಮಾಡಲು ಶಾಸ್ತ್ರಕೇಳುವುದು, ಪೂಜಾರಿ ನೇಮಕ, ಬೇಟೆಯ ಹಣದಲ್ಲಿ ಕುಲದೇವತೆಯ ಹಬ್ಬದ ಆಚರಣೆ ಇವೆಲ್ಲವುಗಳು ಇಂದು ಹಕ್ಕಿಪಿಕ್ಕಿಯರಲ್ಲಿ ಮಾಯವಾಗಿದೆ.

## ಮದುವೆ

ಸಾಮಾಜಿಕ ಬದಲಾವಣೆಗಳಲ್ಲಿ ಮದುವೆಯು ಸಹ ಒಂದು. ಹೀಗಾಗಿ ಮದುವೆಯ ಸಂದರ್ಭಗಳು ಹೆಚ್ಚಿನ ಸಂಭ್ರಮದಿಂದಲೇ ಆಚರಿಸುತ್ತಾರೆ. ಇವರುಗಳಲ್ಲಿ ಇದ್ದ ಬಾಲ್ಯ ವಿವಾಹ ಪದ್ಧತಿಯು ಇಂದು ಮಾಯವಾಗಿದೆ. ಮದುವೆಯಾಗಬೇಕಾದ ಹೆಣ್ಣಿಗೆ ಹೆಚ್ಚಿನ ಬೇಡಿಕೆ ಇತ್ತು. ಈಗ ಎಲ್ಲವೂ ಬದಲಾವಣೆಯಾಗತೊಡಗಿದೆ. ಕಾಲೋನಿಯ ಸಮೀಪ ತಮ್ಮ ಮನೆಗಳ ಮುಂದೆಯೇ ಚಪ್ಪರವನ್ನು ಹಾಕಿ ಮೂರು ದಿನಗಳ ಕಾಲ ಮದುವೆಯನ್ನು ಆಚರಿಸುತ್ತಿದ್ದಾರೆ. ಮಾತ್ರ ಪ್ರಧಾನವಾದ ಹಕ್ಕಿಪಿಕ್ಕಿಯರಲ್ಲಿ ಹೆಣ್ಣಿಗೆ ಹೆಚ್ಚಿನ ಗೌರವವಿದೆ. ಹೆಣ್ಣು ವ್ಯಾಪಾರಕ್ಕೆ ಹೋಗುವುದರಿಂದ ಹಾಗು ಸಂಪಾದನೆಯನ್ನು ಮಾಡುವುದರಿಂದ ಆಕೆಯ ಮೇಲೆ ದೌರ್ಜನ್ಯ ಮಾಡದೆ ಗಂಡು ಹೊಂದಿಕೊಂಡು ಹೋಗುತ್ತಿದ್ದಾನೆ. ಸುತ್ತಲ ಸಮುದಾಯಗಳು ಆಚರಿಸುವ ರೀತಿಯಲ್ಲಿಯೇ ಹಕ್ಕಿಪಿಕ್ಕಿಯರು ಇಂದು ಮದುವೆಯನ್ನು ಮಾಡುತ್ತಿದ್ದಾರೆ. ತಾಳಿಯನ್ನು ಕಟ್ಟುವುದು, ಸುತ್ತಲ ಸಮುದಾಯಗಳ ಪ್ರಮುಖ ವ್ಯಕ್ತಿಗಳನ್ನು ಕರೆಯುವುದು, ಊಟದ ವ್ಯವಸ್ಥೆ ಕುಡಿಯಲು ಸಾರಾಯಿ ಕೊಡುವುದು ಮುಖ್ಯವಾಗಿದೆ. ಗಂಡಿನ ಕಡೆಯವರು ಮತ್ತು ಹೆಣ್ಣಿನ ಕಡೆಯವರು ಇಂದು ಎಲ್ಲಾ ಖರ್ಚುಗಳನ್ನ ಸಮನಾಗಿ ಮಾಡುವಂತವರಾಗಿದ್ದಾರೆ. ಮದುವೆಯ ವಿಧಾನದಲ್ಲಿ ಆರಾಧಿಸುವ ದೈವಪೂಜೆ ಸಹ ಕಡಿಮೆಯಾಗಿದೆ. ಅಲಂಕಾರಗಳು ಸಾಮಾನ್ಯವಾಗಿವೆ. ಇನ್ನು ಹೆಚ್ಚಾಗಿ ಹೆಣ್ಣನ್ನು ಬೇರೆ ಕಾಲೋನಿಯಿಂದ ತರುತ್ತಾರೆ. ಅಲ್ಲದೆ ತಮ್ಮದೇ ಗೋತ್ರದಲ್ಲಿ ಮದುವೆಯಾಗುವುದಿಲ್ಲ. ಹೀಗಾಗಿ ಮದುವೆಯ ಮುಂಚೆ ಕುಲದೇವರಾದ ಕಬ್ಬಾಳಮ್ಮ, ಎಲ್ಲಮ್ಮ ದೇವರುಗಳನ್ನು ಆರಾಧಿಸುತ್ತಾ ಸಿಹಿ ಊಟದೊಂದಿಗೆ ಸುತ್ತಲ ಸಮುದಾಯದ ಬಹು ಸಂಖ್ಯಾತರಾದ ಜನರನ್ನು ಕರೆಯುವುದು ಪ್ರಮುಖವಾಗಿದೆ.

## ಋತುಮತಿ

ಹಕ್ಕಿಪಿಕ್ಕಿಯರಲ್ಲಿ ಋತುಮತಿಯ ಬಗ್ಗೆ ಇತ್ತೀಚಿನ ದಿನಗಳಲ್ಲಿ ವಿಶೇಷವಾದ ಹಬ್ಬದ ವಾತಾವರಣದಿಂದ ಕೂಡಿದ್ದ ಸಮಾರಂಭವನ್ನು ಮಾಡುತ್ತಾರೆ. ಈ ಸಮಾರಂಭಕ್ಕೆ ತಮಗೆ ಬೇಕಾದ ಹಾಗು ಕಾಲೋನಿಯ ಮಹಿಳೆಯರನ್ನು ವಿಶೇಷವಾಗಿ ಕರೆತರುವುದು, ಸಿಹಿ ಊಟ, ವಿಳ್ಯೆದೆಲೆಯನ್ನು ನೀಡುವುದು ಕಂಡುಬರುತ್ತದೆ. ಹೀಗಾಗಿ ಋತುಮತಿಯ ದಿನ ಮನೆಯಲ್ಲಿ ಮದುವೆಯ ಸಡಗರ ವಾತಾವರಣ ಉಂಟು .

## ಜನನ

ಹಕ್ಕಿಪಿಕ್ಕಿಯರಲ್ಲಿ ಜನನ ಸಮಯದಲ್ಲಿ ಆಚರಿಸುವ ರೀತಿ ನೀತಿಗಳು ಸಾಕಷ್ಟು ಬದಲಾವಣೆಯಾಗಿವೆ. ದೂರದಲ್ಲಿ ಸಣ್ಣ ಗುಡಿಸಲನ್ನು ಕಟ್ಟುವುದು ಇತ್ತೀಚಿನ ದಿನಗಳಲ್ಲಿ ಮಾಯವಾಗಿದೆ. ಸಾಮಾನ್ಯವಾಗಿ ಮನೆಗಳಲ್ಲಿಯೇ ಹೆರಿಗೆ ಮಾಡುವುದು ಮತ್ತು ಹೆರಿಗೆಯ ಸಮಯದಲ್ಲಿ ಕಾಲೋನಿಯ ನುರಿತ ಮಹಿಳೆಯರು ಮತ್ತು ಸೂಲಗಿತ್ತಿಯರು ಸಹಾಯ ಮಾಡುತ್ತಾರೆ. ಮನೆಯಲ್ಲಿ ಹೆರಿಗೆ ಆದರೆ ಬಾಣಂತಿಯನ್ನು ಮನೆಯಲ್ಲಿ ಬಿಟ್ಟು ಗಂಡಸರು ಹೊರಗೆ ಹಟ್ಟಿಯಲ್ಲಿ ಮಲಗುವರು. ಮಗುವಿಗೆ ಬಿಸಿನೀರಿನ ಸ್ನಾನ, ಬಟ್ಟೆಬರೆಗಳನ್ನು ಬೇರೆಯವರು ತೊಳೆದು ಕೊಡುತ್ತಾರೆ. ವಿಶೇಷವಾದ ಭೋಜನ ವ್ಯವಸ್ಥೆ ಮಾಡುವುದು ಸಾಮಾನ್ಯವಾಗಿದೆ. ಇನ್ನು ಬಾಣಂತಿಯು ಎರಡು ತಿಂಗಳು ಕಾಲ ಹೊರಗೆ ವ್ಯಾಪಾರದ ಸಲುವಾಗಿ ಎಲ್ಲೂ ಹೋಗುವುದಿಲ್ಲ. ಹುಟ್ಟಿದ ಮಗುವಿಗೆ ಹತ್ತಿರದ ಆರೋಗ್ಯ ಇಲಾಖೆಗೆ ಹೋಗಿ ವೈದ್ಯರ ಬಳಿ ತೋರಿಸುತ್ತಾರೆ. ಇನ್ನು ಕೆಲವರು ಪ್ರಾಥಮಿಕ ಆರೋಗ್ಯ ಕೇಂದ್ರದಲ್ಲಿಯೇ ಹೆರಿಗೆಗೆ ಹೋಗುವರು. ಇದು ಇವರುಗಳ ಬದಲಾವಣೆಯ ವ್ಯವಸ್ಥೆಯನ್ನು ತೋರಿಸುವುದು. ಹುಟ್ಟಿದ ಮಗುವಿಗೆ ನಾಮಕರಣ ಮಾಡಲು ವಿಶೇಷ ಸಮಾರಂಭವನ್ನು ಮಾಡುವಂತರಾಗಿದ್ದಾರೆ. ಮಗುವಿಗೆ ಆಧುನಿಕ ಹೆಸರುಗಳನ್ನು ಇಡುವುದು, ಬಾಣಂತಿಗೆ ವಿಶೇಷವಾಗಿ ಹಣ್ಣು ಹಾಗು ತಿಂಡಿಗಳನ್ನು ನಗರದಿಂದ ತಂದು ಕೊಡುವ ಪದ್ಧತಿಯಿಂದ ಹಿಡಿದು ಇಂಗ್ಲಿಷ್ ಔಷಧಿಗಳನ್ನು, ಮಾತ್ರೆಗಳನ್ನು ಪಡೆಯುವವರಾಗಿದ್ದಾರೆ.

## ಸಾವು

ಸಾವಿಗೆ ಹೆದರುವ ಹಕ್ಕಿಪಿಕ್ಕಿಯರು ಇಂದು ಬಹುವಾಗಿ ಸಾವು ಒಂದು ವಿಧವಾದ ಹೊಸತನವನ್ನು ಕಲಿಯುವಂತೆ ಮಾಡಿದೆ. ಸಾವಿಗೆ ಹೆದರಿ ಆ ಸ್ಥಳವನ್ನು ಬಿಟ್ಟು ಬೇರೆ ಕಡೆಗೆ ಹೊರಟುಹೋಗುತ್ತಿದ್ದ ಹಕ್ಕಿಪಿಕ್ಕಿಯರು ಇಂದು ಸಾವಿನ ನಂತರದ ಕ್ರಿಯಾಕರ್ಮಗಳನ್ನು ತಮ್ಮ ಕಾಲೋನಿಯ ಸಮೀಪದ ತಮ್ಮ ಭೂಮಿಗಳಲ್ಲೇ ಮಾಡುವವರಾಗಿದ್ದಾರೆ. ಸಾವಿನ ನಂತರ ಆಚರಣೆಗಳು ಬಹಳಷ್ಟು ಬದಲಾವಣೆಗೊಂಡಿವೆ. ಸತ್ತ ಮನುಷ್ಯನ ದೇಹವನ್ನು ಹೋರಲು ನಾಲ್ಕು ಜನ, ಕೂಳುಹಾಕಲು ಸತ್ತ ವ್ಯಕ್ತಿಯ ಸಂಬಂಧಿಕರು, ಶವಸಂಸ್ಕಾರ ಮಾಡುವ ರೀತಿ ನೀತಿಗಳು ಸಾಕಷ್ಟು ಬದಲಾಗಿವೆ.

ಕಾಲೋನಿಯಲ್ಲಿ ಯಾರೇ ಸತ್ತರೆ ಕಾಲೋನಿಯನ್ನು ತ್ಯಜಿಸದೇ ತಮ್ಮ ಭೂಮಿಯಲ್ಲಿ ಆರು ಅಡಿ ಉದ್ದ ಮತ್ತು ನಾಲ್ಕು ಅಡಿ ಅಗಲದ ಗುಳಿಯನ್ನು (ಕುಣಿಯನ್ನು) ಮಾಡಿ ಮಣ್ಣಿನಲ್ಲಿ ಹೂಳುವುದು ಕಂಡುಬರುತ್ತದೆ. ಸತ್ತ ವ್ಯಕ್ತಿಗೆ ಸ್ನಾನ ಮಾಡಿಸಿ ಹೊಸ ಬಟ್ಟೆ ತೊಡಿಸುವುದು, ಅಲಂಕಾರ ಮಾಡುವುದು,

ಹೆಣವನ್ನು ಹೂಳುವುದು. ಈತರಹದ ಹಲವಾರು ವಿಧಿವಿಧಾನಗಳು ಬದಲಾಗಿವೆ. ಸತ್ತ ಕುಟುಂಬದಲ್ಲಿ ೧೨ದಿನಗಳ ಕಾಲ ಸೂತಕದ ವಾತಾವರಣದಿಂದ ಕೂಡಿರುತ್ತದೆ. ಸತ್ತ ವ್ಯಕ್ತಿಯ ಬಟ್ಟೆಗಳನ್ನು ಸಹ ಗುಣಿ (ಕುಣಿ)ಯಲ್ಲಿ ಹಾಕುವರು. ಸಾವಿನ ನಂತರದ ಎಲ್ಲಾ ವಿಧಿವಿಧಾನಗಳು ಸಾಮಾನ್ಯವಾಗಿ ಹಳ್ಳಿಗಳಲ್ಲಿ ಮಾಡುವ ಹಿಂದುಧರ್ಮದ ರೀತಿಯಲ್ಲಿಯೇ ಮಾಡುವವರಾಗಿದ್ದಾರೆ. ಸಾವಿನ ನಂತರದ ಕ್ರಿಯಾಕರ್ಮ, ತಿಥಿ ಊಟವನ್ನು ಸಾಲಮಾಡಿಯಾದರೂ ಸರಿಯೇ. ಮಾಂಸದ ಊಟವನ್ನು ಹಾಕಿಸುತ್ತಾರೆ. ಕುಡಿಯಲು ಹೆಂಡ, ಸಾರಾಯಿ ಕೊಡುವುದು ಮಾಡುತ್ತಾರೆ. ಇತ್ತೀಚಿನ ದಿನಗಳಲ್ಲಿ ಸಾವಿಗೆ ಎಲ್ಲಾ ನೆಂಟರಿಗೆ ಹೇಳಿಕಳಿಸುವುದು ರೂಢಿಯಾಗಿದೆ. ಸತ್ತ ವ್ಯಕ್ತಿಯ ಆತ್ಮಕ್ಕೆ ಶಾಂತಿ ದೊರೆಯಲೆಂದು ಸತ್ತ ವ್ಯಕ್ತಿಯು ಬಳಸುತ್ತಿದ್ದ ಬೀಡಿ ಸಿಗರೇಟು,ತಂಬಾಕು, ವಿಶೇಷವಾಗಿ ತಿಂಡಿ ಸಾರಾಯಿ ಎಲ್ಲವನ್ನು ಸತ್ತವ್ಯಕ್ತಿಯ ಗೋರಿಯ (ಸಮಾಧಿಯ) ಹತ್ತಿರ ತಂದು ಪೂಜಿಸುವುದುಂಟು. ಇಂತಹ ಸಾವಿನ ನಂತರದ ಎಲ್ಲಾ ವಿಧಿವಿಧಾನಗಳಲ್ಲಿ ಬಹುಪಾಲು ಬದಲಾವಣೆಯಾಗಿವೆ.

## ಆಹಾರ ಪದ್ಧತಿ

ಆಹಾರ ಪದ್ಧತಿಯಲ್ಲಿ ಹಕ್ಕಿಪಿಕ್ಕಿ ಕಾಲೋನಿಯ ಜನರು ಬಹಳಷ್ಟು ಬದಲಾವಣೆಯಾಗಿದ್ದಾರೆ. ಸಾಮಾಜಿಕ ವ್ಯವಸ್ಥೆಯಲ್ಲಿ ಇವರುಗಳ ಆಹಾರ ಪದ್ಧತಿ ಬಹಳ ಗಮನ ಸೆಳೆಯುವ ವಿಷಯವಾಗಿದೆ. ಇವರುಗಳ ಅಡುಗೆಗಳಲ್ಲಿ ಅದ್ದೂರಿತನ ಕಾಣದೆ ಸದಾ ತಿನ್ನುವ ಅಡುಗೆಗಳಾಗಿದೆ.. ಸಾಮಾನ್ಯವಾಗಿ ಇತ್ತೀಚಿನ ದಿನಗಳಲ್ಲಿ ಬಹುಪಾಲು ಅಡುಗೆಗಳು ಸಸ್ಯಹಾರದಿಂದಲೇ ಕೂಡಿವೆ. ಬಳಕೆಯಲ್ಲಿರುವ ರಾಗಿ, ಜೋಳ, ಅಕ್ಕಿಯು ಪ್ರಮುಖವಾದದ್ದು. ರಾಗಿಯಿಂದ ಮುದ್ದೆ ತಯಾರಿಸಿ ತಿನ್ನುವುದು ವಿಶೇಷವಾಗಿದೆ. ಜೊತೆಗೆ ಸೊಪ್ಪಿನ ಸಾರುಗಳು ಸಹ ಮುಖ್ಯವಾಗಿವೆ.

ಕಾಲೋನಿಯಲ್ಲಿ ಸ್ಥಿರವಾಗಿ ವಾಸಿಸುವವರು ಸುತ್ತಲ ಹಳ್ಳಿಗಳಂತೆ ಆಹಾರದಲ್ಲೂ ಬದಲಾಗಿದ್ದಾರೆ. ಕಾಲೋನಿಯ ಸುತ್ತಲಿನ ಹಳ್ಳಿಗಳಲ್ಲಿ ಸಂತೆಗಳು ನಡೆಯುವುದರಿಂದ ವಾರಕ್ಕೊಮ್ಮೆ ಸಂತೆಯಿಂದ ದಿನಸಿ, ಆಹಾರದ ಸಾಮಗ್ರಿಗಳು ತರಕಾರಿಗಳು ಕೊಂಡು ತರುವವರಾಗಿದ್ದಾರೆ. ವ್ಯವಸಾಯಗಾರರು ತಮ್ಮಲ್ಲಿಯೇ ರಾಗಿ ಅವರೆ, ಹಲಸಂದಿ, ಹುರಳಿ ಬೆಳೆಯುವುದರಿಂದ ಅವುಗಳ ಬಳಕೆ ಹೆಚ್ಚು. ಮನೆಯಲ್ಲಿ ಸಾಕುವ ಕೋಳಿಗಳು ಕೆಲವಾರು ಬಾರಿ ಮಾರಾಟ ಮಾಡುವುದು ಹಾಗು ಮಾಂಸಕ್ಕಾಗಿ ಉಪಯೋಗಿಸುವುದುಂಟು. ದೊರೆಯುವ ಎಲ್ಲಾ ವಿಧವಾದ ತರಕಾರಿ ಸೊಪ್ಪುಗಳನ್ನು ತಿನ್ನುವವರಲ್ಲದೆ, ಆಹಾರದ ತಯಾರಿಕೆಗೆ ಬಳಸುವ ಸಾಮಾಗ್ರಿಗಳು ಸಹ ಬದಲಾಗಿವೆ. ಇಂದು ಸೀಮೆ ಎಣ್ಣೆ ಸ್ಟವ್ ಹಾಗು ಕಟ್ಟಿಗೆಯಿಂದ ಆಹಾರ ತಯಾರಿಸುತ್ತಾರೆ.

ಹೀಗೆ ಬಗೆಬಗೆಯ ಆಹಾರ ಪದ್ಧತಿಯನ್ನು ಹೊಂದಿರುವ ಹಕ್ಕಿಪಿಕ್ಕಿಯರು ಹಲವು ವಿಧವಾದ ಸಿಹಿ ತಿಂಡಿಗಳನ್ನು ಸಹ ಮಾಡುವವರಾಗಿದ್ದಾರೆ. ಮುಖ್ಯವಾಗಿ ಮಹಿಳೆಯರು ಹಳ್ಳಿಗಳ ಮೇಲೆ ಭಿಕ್ಷೆಯನ್ನು ಮಾಡಿ, ಬರುವ ಭಿಕ್ಷೆಯನ್ನು ತಿನ್ನುತ್ತಿದ್ದವರು ಇಂದು ಹೆಚ್ಚಾಗಿ ಭಿಕ್ಷಾಟನೆ ಅಷ್ಟಾಗಿ ಮಾಡುವುದಿಲ್ಲ.

## ವೇಷಭೂಷಣಗಳು

ಬುಡಕಟ್ಟು ಸಮುದಾಯದ ಜನರಲ್ಲಿ ಕಂಡುಬರುವ ಹಲವಾರು ಭೌತಿಕ ಲಕ್ಷಣಗಳು ಹಕ್ಕಿಪಿಕ್ಕಿಯರಲ್ಲೂ ಕಂಡುಬರುತ್ತವೆ. ಇವರಲ್ಲಿ ಬಹುಪಾಲು ಜನ ಕಪ್ಪು ಬಣ್ಣದವರು ಮತ್ತೆ ಕೆಲವರು ತಿಳಿಗೆಂಪು ಬಣ್ಣದವರು. ಸಾಮಾನ್ಯವಾಗಿ ಎತ್ತರದ ಶರೀರ ಹೊಂದಿದ್ದು ತೆಳ್ಳಗಿದ್ದರೆ, ಉದ್ದನೆಯ ಮುಖಕ್ಕೆ ತಕ್ಕಂತೆ ಮೀಸೆಯನ್ನು ಹೊಂದಿದ್ದಾರೆ. ತಲೆಗೂದಲು ಮದುವೆಯಾದ ಗಂಡಸರು ಜಡೆ ಬಿಟ್ಟಿದ್ದಾರೆ. ಆಕರ್ಷಕ ಮೈಕಟ್ಟಿನ ಈ ಜನರು ಕಿವಿಗೆ ಓಲೆ ಧರಿಸಿದ್ದಾರೆ. ಉಡುಪುಗಳಲ್ಲಿ ಸಾಮಾನ್ಯವಾಗಿ ನಗರದ ಇತರರ ಉಡುಪಿನಂತೆಯೇ ಇದೆ. ಪ್ಯಾಂಟ್, ಶರ್ಟ್. ಜೀನ್ಸ್, ಟೀಷರ್ಟ್, ಪಂಚೆ ಗಳನ್ನು ಗಂಡಸರು ಧರಿಸುತ್ತಿದ್ದಾರೆ. ಅದೇರೀತಿಯಾಗಿ ಹುಡುಗರು ಜೀನ್ಸ್ ಪ್ಯಾಂಟ್ ಶರ್ಟ್‌ಗಳ ಮೊರೆಹೋಗುತ್ತಿದ್ದಾರೆ. ಕಾಲಲ್ಲಿ ಚಪ್ಪಲಿ, ಶೂ ಹಾಕಿರುತ್ತಾರೆ. ೧೦ ರಿಂದ ೧೫ ವಾಟದ ಎಲ್ಲಾ ಹುಡುಗರು ಸಾಮಾನ್ಯವಾಗಿ ಪ್ಯಾಂಟ್ ಶರ್ಟ್ ಧರಿಸುವುದು ಕಾಣಬಹುದು. ಮುದುಕರು. ಹಿರಿಯರು ಕಚ್ಚೆಯನ್ನು, ದೋತರವನ್ನು ಬಳಸುತ್ತಿದ್ದಾರೆ.

ಹೆಂಗಸರು ಸಾಮಾನ್ಯವಾಗಿ ಇತರ ಹಿಂದೂ ಸ್ತ್ರೀಯರಂತೆಯೇ ಉಡುಪು ಧರಿಸುತ್ತಾರೆ. ಜರತಾರಿ ಸೀರೆ, ರವಿಕೆ ಉಡುವುದು ಸಾಮಾನ್ಯವಾಗಿದೆ. ಇವರಿಗೆ ಒಡವೆಗಳೆಂದರೆ ತುಂಬಾ ಆಸೆ. ಇವರಲ್ಲಿ ಸ್ಥಿತಿವಂತರು ಚಿನ್ನದ ಹರಳೋಲೆಯನ್ನು ಕಿವಿಗೆ ಮತ್ತು ಕೊರಳಲ್ಲಿ ಕರಿಮಣಿಗೆ ಸೇರಿದ ತಾಳೀಸರ, ಕಾಲಿಗೆ ಬೆಳ್ಳಿಕಾಲುಂಗುರ, ಬೆಳ್ಳಿಯ ಚೈನು ಇತ್ಯಾದಿಗಳನ್ನು ಧರಿಸುತ್ತಾರೆ. ಹಣೆಗೆ ಕುಂಕುಮವನ್ನು ಹಚ್ಚಿಕೊಳ್ಳುತ್ತಾರೆ. ಮಹಿಳೆಯರು ಸಾಮಾನ್ಯವಾಗಿ ಮೈಮೇಲೆ ಹಚ್ಚೆಯನ್ನು ಹಾಕಿಸಿಕೊಂಡಿರುತ್ತಾರೆ. ಶಂಖ, ತುಳಸಿ, ಹನುಮಂತ ದೇವರ ಚಿತ್ರಗಳು ಪ್ರಮುಖವಾದವುಗಳು. ಯುವತಿಯರು ಸೀರೆ, ರವಿಕೆಗಳನ್ನು ಮತ್ತು ಲಂಗ, ಜಕೇಟು ತೊಡುತ್ತಾರೆ. ಕಾಲೋನಿಯಲ್ಲಿಯೇ ಇರುವ ಮಹಿಳೆಯರು ನೈಟಿಗಳನ್ನು ಸಹ ಹಾಕಿಕೊಳ್ಳುತ್ತಿದ್ದಾರೆ.

ಹಕ್ಕಿಪಿಕ್ಕಿಯರು ಬದಲಾದ ವ್ಯವಸ್ಥೆಯಲ್ಲಿ ಬಟ್ಟೆಬರೆಗಳಿಗಾಗಿ ಪೇಟೆಗಳಿಗೆ ಹೋಗಿ ತರುವುದು ಸಾಮಾನ್ಯವಾಗಿದೆ. ಬಟ್ಟೆಗಳು ಎಷ್ಟೇ ಕೊಳಕಾಗಿರಲಿ ಅವುಗಳನ್ನು ೧೫-೨೦ ದಿನಗಳಿಗೊಮ್ಮೆ ನೀರಿಗೆ ಹಾಕಿ ಒಗೆದು ಒಣಗಿಸಿ ತೊಟ್ಟುಕೊಳ್ಳುತ್ತಾರೆ. ಇಂದು ನಗರೀಕರಣದ ಪ್ರಭಾವ ಈ ಸಮುದಾಯದ ಜನರ ಮೇಲೆ ಹೆಚ್ಚಾಗಿ ತಾಕಿದಂತೆ ಕಂಡುಬರುತ್ತದೆ.. ಕಾಲೋನಿಯ ಗಂಡಸರು, ಹುಡುಗರು, ಕೈಗಡಿಯಾರ, ರೇಡಿಯೋ, ಕೋಟು, ಸ್ಕೂಟರ್, ಸೈಕಲ್ ಮುಂತಾದ ಬೆಲೆ ಬಾಳುವ ವಸ್ತುಗಳು ಹೊಂದಿದ್ದಾರೆ. ಈ ಎಲ್ಲಾ ಬದಲಾವಣೆಗಳಿಂದ ಕಾಲೋನಿಯ ಜನರು ನಗರದ ರೀತಿಯಲ್ಲಿ ವೇಷ ಭೂಷಣಗಳನ್ನು ಅಲಂಕರಿಸುತ್ತಾರೆ.

## ಕೌಟುಂಬಿಕ ಸಂಬಂಧ

ಹಕ್ಕಿಪಿಕ್ಕಿಯರಲ್ಲಿ ವಿಭಕ್ತ ಕುಟುಂಬಗಳೇ ಹೆಚ್ಚಾಗಿ ಇವೆ. ಅವಿಭಕ್ತ ಕುಟುಂಬಗಳು ಇದ್ದರೂ ಬಹು ಕಡಿಮೆ. ಹೆಚ್ಚಾಗಿ ವಿಭಕ್ತ ಕುಟುಂಬ ಜೀವನ ಕ್ರಮವೇ ಹೆಚ್ಚು. ಹಿಂದೆ ಬಾಲ್ಯ ವಿವಾಹ ಪದ್ಧತಿಯನ್ನು

ಪೋಷಿಸಿಕೊಂಡು ಬಂದಿದ್ದ ಇವರು ಇಂದು ಈ ಪದ್ಧತಿಯನ್ನು ತೀವ್ರ ಪ್ರಮಾಣದಲ್ಲಿ ಕಡಿಮೆಯಾಗಿದೆ. ಗಂಡು ಮಕ್ಕಳು ವಿವಾಹ ಆಗುವವರಿಗೆ ಕುಟುಂಬದಲ್ಲಿ ಒಟ್ಟಾಗಿ ಜೀವಿಸಿ ವಿವಾಹದ ನಂತರ ಪ್ರತ್ಯೇಕವಾದ ಸಂಸಾರ ಮಾಡುವವರೇ ಹೆಚ್ಚಾಗಿದ್ದಾರೆ. ಮಾತೃ ಪ್ರಧಾನ ಕುಟುಂಬವಾದ ಹಕ್ಕಿಪಿಕ್ಕಿಯವರಲ್ಲಿ ಇಂದಿಗೂ ಸಹ ಅದೇ ರೀತಿ ಉಳಿದು ಬಂದರೂ ಸಮಾಜದ ಬಹು ಮುಖ್ಯ ಸ್ಥಾನಗಳು ಪುರುಷರೇ ನಿರ್ವಹಿಸಿಕೊಂಡು ಬಂದಿದ್ದಾರೆ. ಕುಟುಂಬದ ಪ್ರತಿಯೊಂದು ಆಗುಹೋಗುಗಳ ನಿರ್ಣಯವನ್ನು ಹೆಚ್ಚಾಗಿ ಸ್ತ್ರೀಯರೇ ನೋಡಿಕೊಳ್ಳುತ್ತಾರಂತೆ.

ಹಕ್ಕಿಪಿಕ್ಕಿಯರಲ್ಲಿ ಮಾತೃ ಪ್ರಧಾನ ಕುಟುಂಬ ಪದ್ಧತಿಯಾದರೂ ಹಿರಿಯ ಮಗನಿಗೆ ಹೆಚ್ಚಿನ ಗೌರವವಿದೆ. ಆದರೂ ಸಹ ಕುಟುಂಬಕ್ಕೆ ಸಂಬಂಧ ಪಟ್ಟ ಎಲ್ಲಾ ವಿಷಯಗಳಲ್ಲಿಯೂ ಸ್ತ್ರೀಯರೇ ಅಂತಿಮ ನಿರ್ಧಾರ ತೆಗೆದುಕೊಳ್ಳುವರು. ಏಕಪತ್ನಿತ್ವ ಮತ್ತು ಏಕಪತಿತ್ವದ ಕುಟುಂಬಗಳೇ ಹೆಚ್ಚು. ಕೆಲವರು ಒಬ್ಬರಿಗಿಂತ ಹೆಚ್ಚು ಜನ ಹೆಂಡತಿಯರನ್ನು ಮದುವೆ ಮಾಡಿಕೊಂಡಿರುವುದು ಸಹ ಕಾಣಬಹುದು. ಕುಟುಂಬ ಕುಟುಂಬಗಳ ನಡುವೆ. ಕುಲ ಕುಲ ಗಳಲ್ಲಿ, ಗುಂಪುಗಳಲ್ಲಿ, ವ್ಯಕ್ತಿ ವ್ಯಕ್ತಿಗಳ ನಡುವೆ ಸಲುಗೆ ನಡುವಳಿಕೆಗಳು ನಿರ್ಧಿಷ್ಟವಾಗಿ ಪ್ರಬುದ್ಧವಾಗಿ ಬೆಳೆದಿವೆ. ಮೊದಲಿನಿಂದಲೂ ಸಂಪ್ರದಾಯನಿಷ್ಠರೂ ತಮ್ಮ ರೂಢಿ ಪದ್ಧತಿಗಳನ್ನು ಪ್ರತ್ಯೇಕವಾಗಿ ಕಾಯ್ದುಕೊಂಡು ಬಂದರೂ ಕಾಲೋನಿಯಲ್ಲಿ ಹಲವು ರೀತಿಯ ಬೆಳವಣಿಗೆಗಳು ಸಾಮಾನ್ಯವಾಗಿವೆ. ಜೊತೆಯಲ್ಲಿ ಸಂಪ್ರದಾಯಗಳೂ ನಶಿಸುತ್ತಾ ಹೊಸ ಬದಲಾವಣೆಗಳನ್ನು ಮೈಗೂಡಿಸಿಕೊಳ್ಳುತ್ತಿದ್ದಾರೆ. ಅಲೆಮಾರಿ ಗುಣಲಕ್ಷಣಗಳನ್ನು ಪೂರ್ತಿಯಾಗಿ ಬಿಡದಿದ್ದರೂ ಪ್ರಾದೇಶಿಕತೆಯಲ್ಲಿ ಇವರುಗಳ ಪ್ರಸರಣ ಹೆಚ್ಚಾಗುವುದರೊಂದಿಗೆ ಸುತ್ತಲ ಸಮುದಾಯಗಳ ಒಕ್ಕಲು ಮನೆಗಳಿಗೆ ಹೋಗಿ ಮನೆ ಕೆಲಸಗಳನ್ನು ಮಾಡುವವರಾಗಿದ್ದಾರೆ.

ಹಕ್ಕಿಪಿಕ್ಕಿಯರಲ್ಲಿ ಕುಟುಂಬ ಜೀವನ ಸಂಪೂರ್ಣವಾಗಿ ಹಳೆಯ ಪದ್ಧತಿಯು ಮಾಯವಾಗದಿದ್ದರೂ ಇವರು ವಾಸಿಸುವ ಪರಿಸರದಲ್ಲಿನ ಸುತ್ತಲಿನ ಹಳ್ಳಿಗಳ ಗಾಢ ಪ್ರಭಾವವೇ ಹೆಚ್ಚು. ಹೀಗಾಗಿ ಇವರುಗಳ ಕುಟುಂಬದಲ್ಲಿನ ಹೆಣ್ಣುಮಕ್ಕಳು ಹಳ್ಳಿಗಳಲ್ಲಿ ಇವರುಗಳಿಗೆ ವಿಶೇಷವಾದ ಸ್ಥಾನಮಾನ ನೀಡುವುದರೊಂದಿಗೆ ಆತ್ಮೀಯರಾಗಿ ಕಷ್ಟಗಳಿಗೆ, ಹಣಕಾಸು, ಆಹಾರ ಪದಾರ್ಥಗಳು, ವಿಶೇಷವಾದ ಹಬ್ಬದಲ್ಲಿ ಬಟ್ಟೆ, ತಿಂಡಿಗಳು ಕೊಡುವವರಾಗಿದ್ದಾರೆ. ಇವೆಲ್ಲವುಗಳ ಸೌಲಭ್ಯ ಪಡೆಯುವ ಹಕ್ಕಿಪಿಕ್ಕಿಯರು ಕುಟುಂಬ ಜೀವನ ವಿಧಾನ ಸಾಮಾನ್ಯವಾಗಿ ಹಳ್ಳಿಯ ವಾತಾವರಣವೆಂದೆ ಪರಿವರ್ತನೆಯಾಗಿದೆ.

### ಧಾರ್ಮಿಕ ಆಚರಣೆಗಳು

ಕಾಲೋನಿಯ ಹಕ್ಕಿಪಿಕ್ಕಿಯರಲ್ಲಿ ಹಬ್ಬಗಳು ಬಹಳಷ್ಟು ಬದಲಾಗಿವೆ. ಇಂದು ಸರಳ ರೀತಿಯಿಂದ ಕೂಡಿದ್ದ ಹಬ್ಬಗಳು ಸಾಮಾನ್ಯವಾಗಿವೆ. ಇವುಗಳನ್ನು ಬಿಟ್ಟು ಬೇರೆ ಹಬ್ಬಗಳು ಆಚರಣೆಯಲ್ಲಿ ಇಲ್ಲವಾಗಿವೆ. ಹೆಚ್ಚಾಗಿ ಹೆಣ್ಣುದೇವರನ್ನು ಪೂಜಿಸುವ ಹಕ್ಕಿಪಿಕ್ಕಿಯರು ತಮ್ಮಲ್ಲಿಯೇ ಹಲವಾರು ರೀತಿಯ

ಬದಲಾವಣೆಗಳನ್ನು ಮಾಡಿಕೊಂಡಿದ್ದಾರೆ. ಎಲ್ಲಮ್ಮ, ಕಬ್ಬಾಳಮ್ಮ, ಚಾಮುಂಡಿ, ದುರ್ಗದೇವಿಯನ್ನು ಆರಾಧಿಸುತ್ತಾರೆ. ಬಹುತೇಕ ಅವರುಗಳ ಹಬ್ಬಗಳು ಅವರುಗಳ ದೇವರನ್ನು ಅವಲಂಬಿಸಿದೆ. ಕಾಲೋನಿಯಲ್ಲಿ ೪ ಕುಲಗಳಿದ್ದರೂ ಒಟ್ಟಾಗಿ ಹಬ್ಬವನ್ನು ಆಚರಿಸುವುದಿಲ್ಲ. ಎಲ್ಲಮ್ಮ ಕುಲದವರು ಎಲ್ಲಮ್ಮನ ಹಬ್ಬವನ್ನು ತಮ್ಮ ಮನೆಗಳಲ್ಲಿಯೇ ಆಚರಿಸುತ್ತಾರೆ. ವ್ಯಾಪಾರ ಮಾಡುವ ಹಲವಾರು ಮಂದಿ ಸೇರಿ ಅವರ ಮನೆದೇವರ ಹಬ್ಬವನ್ನು ಅವರುಗಳೇ ಆಚರಿಸುತ್ತಾರೆ. ಕಾಲೋನಿಯಲ್ಲಿ ಕ್ಷೇತ್ರಕಾರ್ಯ ಮಾಡಿದಾಗ ದೊರೆತ ಮಾಹಿತಿಯೆಂದರೆ, ಕಾಲೋನಿಯಲ್ಲಿ ಸುಮಾರು ೧೦೨ ಹಕ್ಕಿಪಿಕ್ಕಿಯರ ಮನೆಗಳಿದ್ದರೂ ಸಹ ಚಾಮುಂಡಿ ಕುಲದವರು ಮಾತ್ರ ತಮ್ಮ ಮನೆಯ ಪತ್ತಿರವೇ ಚಪ್ಪರ ಹಾಕಿ ತಮ್ಮ ಕುಲದೇವತೆಯನ್ನು ಆರಾಧಿಸುತ್ತಾರೆ. ಚಪ್ಪರದ ಕೆಳಗೆ ಕುಲದೇವರುಗಳನ್ನು ಇಟ್ಟು ಬಣ್ಣಗಳಿಂದ ಅಲಂಕಾರ ಮಾಡಿ, ವಿಶೇಷವಾಗಿ ಬೇಟೆಯ ಆಯುಧಗಳನ್ನು ಇಟ್ಟು ಪೂಜೆ ಮಾಡುತ್ತಿದ್ದರು.

ಪೂಜೆಯನ್ನು ಮಾಡಲು ಅವರುಗಳಲ್ಲಿಯೇ ಒಬ್ಬ ವ್ಯಕ್ತಿಯನ್ನು ನೇಮಕ ಮಾಡಿಕೊಂಡಿದ್ದಾರೆ. ಇಲ್ಲಿ ಬಲಿಕೊಡುವುದು ಸಾಮಾನ್ಯ. ಪೂಜೆಯ ಸಮಯದಲ್ಲಿ ಎರಡು ಮೇಕೆಗಳನ್ನು ತಂದು ತಲೆಯನ್ನು ಕಡಿದು ಬಲಿಕೊಟ್ಟರು. ಬಲಿ ಕೊಟ್ಟ ಮೇಕೆಯ ತಲೆಗಳನ್ನು ದೇವಿಯ ಮುಂದೆ ಇಡುವುದು ಪದ್ಧತಿಯಾಗಿದೆ. ಮಾಂಸವನ್ನು ಎಲ್ಲರಿಗೂ ಅಂದರೆ, ತಮ್ಮ ಕುಲದೇವತೆಯ ಕುಟುಂಬದವರಿಗೆ ಮಾತ್ರ ಹಂಚಿಕೆ ಮಾಡಿಕೊಳ್ಳುವರು. ಉಳಿದ ಪ್ರಾಣಿಯ ಹೊಟ್ಟೆಯಲ್ಲಿನ ಕರಳು, ಹೃದಯ ಇವುಗಳನ್ನು ಅಲ್ಲಿಯೇ ಬೇಯಿಸಿ ಅನ್ನದ ಜೊತೆ ಬೆರಸಿ ಸಿಹಿ ಮಾಡಿ ಎಲ್ಲಾರಿಗೂ ತಿನ್ನಲು ಕೊಡುವರು. ಹೀಗೆ ಈ ಹಬ್ಬವನ್ನು ಆಚರಿಸುತ್ತಿದ್ದಾರೆ. ಮನೆಗಳಲ್ಲಿ ಯಾವುದೇ ಸಡಗರ ಮಾತ್ರ ಇಲ್ಲ. ವಿಶೇಷವಾಗಿ ಈ ಹಬ್ಬವನ್ನು ಆಚರಿಸುತ್ತಿದ್ದ ಮನೆಯು ವಿಶೇಷ ಅಲಂಕಾರದಿಂದ ಕೂಡಿರುತ್ತದೆ. ಆಧುನಿಕತೆಯ ಬೆಳಕು ಈ ಕಾಲೋನಿಯ ಜನರ ಹಬ್ಬದಲ್ಲಿ ಸೇರ್ಪಡೆಯಾಗಿರುತ್ತದೆ. ಬಣ್ಣಬಣ್ಣದ ವಿದ್ಯುತ್ ದೀಪಾಲಂಕಾರಗಳು ಹಾಗು ಧ್ವನಿವರ್ಧಕಗಳು ಇಲ್ಲಿ ಕಾಣಬಹುದಾಗಿತ್ತು. ಇವರು ತಮ್ಮ ಹಬ್ಬದಲ್ಲಿ ಪೋಟೋ ತೆಗೆಯುವುದನ್ನು ನಿರಾಕರಿಸುತ್ತಾರೆ.

ಇನ್ನು ಸಾಮಾನ್ಯವಾಗಿ ಹಿಂದು ಹಬ್ಬಗಳಂತೆ ಹಲವಾರು ಹಬ್ಬಗಳನ್ನು ಸುತ್ತಲಿನ ಹಳ್ಳಿಯ ಜನರು ಮಾಡುವಂತೆ ಮಾಡುತ್ತಾರೆ. ಆದರೆ ಅವುಗಳಲ್ಲಿ ಯಾವುದೇ ವಿಧವಾದ ಬಟ್ಟೆಗಳು, ಅಲಂಕಾರದಿಂದ ಕೂಡಿದ ಅಥವಾ ದೊಡ್ಡದಾದ ಹಬ್ಬವಾಗಿರುವುದಿಲ್ಲ. ಹೀಗಾಗಿ ತಮ್ಮ ಆಚರಣೆಗಳಲ್ಲಿಯ ಹಲವು ವಿಶೇಷತೆಗಳನ್ನು ಉಳಿಸಿಕೊಂಡು ಬಂದಿರುವುದರ ಜೊತೆಗೆ ಹೊಸ ವಿಧಾನವನ್ನು ಮೈಗೂಡಿಸಿಕೊಂಡಿರುವುದು ಕಂಡು ಬರುತ್ತದೆ. ಯಾವುದೇ ವಿಧವಾದ ದೇವಾಲಯಗಳು ಕಾಣಬರುವುದಿಲ್ಲ. ಕಾಲೋನಿಯ ಜನರಲ್ಲಿ ಅವರುಗಳಲ್ಲಿಯೇ ಒಳ ಜಗಳ ಸಾಮಾನ್ಯವಾಗಿ ಕಂಡು ಬರುತ್ತವೆ. ಕಾಲೋನಿಯ ಹಿರಿಯರು ಹೇಳುವಂತೆ ಕಾಲೋನಿಯಲ್ಲಿ 'ನಾವುಗಳು ಯಾವಾಗಲು ಜಗಳದಿಂದ ಕಚ್ಚಾಡುತ್ತಾ ಇರುತ್ತೇವೆ. ಇದರಿಂದ ಹಬ್ಬ ಎಲ್ಲವೂ ಬಿಟ್ಟುಬಿಟ್ಟೆವು. ಸುಮಾರು ೨೦ ವರ್ಷಗಳ ಹಿಂದೆ ಎಲ್ಲರೂ ಸೇರಿ ಹಬ್ಬ ಮಾಡಿದ್ದೇ ಕೊನೆ.

ಈಗ ಅವೆಲ್ಲಾ ಇಲ್ಲ. ಹಣ ಇದ್ದರೆ ಅವರವರೇ ಮಾಡಿಕೊಳ್ಳುತ್ತಾರೆ. ಹಣಕಾಸಿನ ಮುಗ್ಗಟ್ಟು ಜೊತೆಗೆ ಅವರವರ ಕುಲಗಳು ಅಂತ ಎಲ್ಲಾರೂ ಬೇರೆಯವರ ಮಾತು ಕೇಳಿ ಹಬ್ಬಗಳನ್ನು ಮರೆತು ಬಿಟ್ಟೆವು. ಈಗ ಅವರವರೇ ಅವರುಗಳ ಮನೆಯಲ್ಲಿ ಮಾಡಿಕೊಳ್ಳುತ್ತಾರೆ. ಅದು ಇಷ್ಟ ಬಂದಾಗ' ಎನ್ನುತ್ತಾರೆ. ಅಂದರೆ ಜಾಗತೀಕರಣದ ಪರಿಣಾಮ (ಪ್ರಭಾವ)ಸಹ ಈ ಕಾಲೋನಿಗೆ ಹೊರತಾಗಿಲ್ಲ. ಈ ಸಮುದಾಯ ಸಂಪ್ರದಾಯಗಳು ಈ ರೀತಿ ಬದಲಾಗಲು ಅನೇಕ ವಿಧವಾದ ಕಾರಣಗಳು ಇರಬಹುದು. ನಾಗರಿಕತೆಯ ಜೊತೆಗೆ ಸ್ಪರ್ಧಿಸುತ್ತಾ ಬೆಳೆಯುತ್ತಿರುವುದರ ಪ್ರಭಾವ ಇಲ್ಲಿ ಮುಖ್ಯವಾಗಿ ಕಾಣಬಹುದು.

**ವೃತ್ತಿಗಳು**

ಬದಲಾಗುತ್ತಿರುವ ಸ್ಥಿತ್ಯಂತರಗಳಲ್ಲಿ ಕಾಲೋನಿಯ ಜನರು ಬದಲಾವಣೆಯೊಂದಿಗೆ ಬೆರೆತು ಜೀವಿಸುವವರಾಗಿದ್ದಾರೆ. ಬದಲಾದ ಪರಿಸ್ಥಿತಿಗೆ ತಕ್ಕಂತೆ ಹಾಗು ಜೀವನಕ್ಕೆ ಆಧಾರವಾದಂತೆ ಆದಾಯ ತರುವ ಉದ್ದೇಶಗಳಿಗೆ ಸೇರ್ಪಡೆಯಾಗುತ್ತಾ ಕಾರ್ಯ ನಿರ್ವಹಿಸುತ್ತಿರುವುದು ವಾಸ್ತವದ ಸಂಗತಿ. ಹಕ್ಕಿಪಿಕ್ಕಿಯರ ವೃತ್ತಿಗಳು ಸಹ ಆ ಪ್ರದೇಶದ ಭೌಗೋಳಿಕ ಪರಿಸರಗಳಿಗೆ ಅನುಗುಣವಾಗಿ ಅಲ್ಲಿಯ ಜನರ ವೃತ್ತಿ ವೈವಿಧ್ಯತೆಗಳೊಂದಿಗೆ ಬೆರೆತು ಬಂದಿದೆ. ವಂಶಪರಂಪರೆಯಿಂದ ವೃತ್ತಿಗಳು ಇಂದು ಮಾಯವಾಗಿವೆ. ಆದರೂ ಸಹ ಅಲೆಮಾರಿತನ ಇನ್ನೂ ಮಾಯವಾಗದೇ ಇರುವುದನ್ನು ಕಾಣಬಹುದು. ಅವರು ಅಲೆಮಾರಿತನದ ಔದ್ಯೋಗಿಕ ಸ್ವರೂಪದ ಲಕ್ಷಣಗಳು ಪ್ರಸ್ತುತ ಉದ್ಯೋಗದಿಂದಲೂ ಸಹ ಕಂಡುಬರುತ್ತದೆ. ಬೇಟೆಯು ನಿಷೇಧವಾದ ನಂತರ ಹೆಚ್ಚಾಗಿ ಹಕ್ಕಿಪಿಕ್ಕಿಯರು ಗುಡಿಕೈಗಾರಿಕೆಯಲ್ಲಿ ಯಶಸ್ವಿಯಾಗಿದ್ದಾರೆ.

**ರಾಜಕೀಯ ಸ್ಥಿತ್ಯಂತರಗಳು**

ಪ್ರಜಾಪ್ರಭುತ್ವದಡಿಯಲ್ಲಿ ಜೀವಿಸುವ ಸಕಲ ಮಾನವನ ಸಮೂಹದ ರಕ್ಷಣೆಯನ್ನು ಬಯಸಿರುವ ಇಂದಿನ ವ್ಯವಸ್ಥೆ ಮೂಲಭೂತ ಕರ್ತವ್ಯವಾಗಿ ಪರಿಗಣಿಸಿದೆ. ಹೀಗಾಗಿ ರಾಜಕೀಯ ಹಸ್ತಕ್ಷೇಪ ಸಾಮಾನ್ಯ. ಬುಡಕಟ್ಟು ಸಮುದಾಯದ ಬಗ್ಗೆ ವಿಶೇಷವಾದ ರಾಜಕೀಯ ನಿಲುವುಗಳನ್ನು ೧೯೫೨ ರಿಂದ ಪ್ರಾರಂಭಗೊಂಡಿದ್ದರೂ ಅವುಗಳ ಬಳಕೆ ಅಷ್ಟಾಗಿ ಇರಲಿಲ್ಲ. ೧೯೭೭ರ ನಂತರ ಸರಕಾರಗಳು ರಾಜ್ಯಗಳಲ್ಲಿ ಕೈಗೊಂಡ ಅಭಿವೃದ್ಧಿ ಕಾರ್ಯಕ್ರಮಗಳಿಂದ ವಿಶೇಷವಾಗಿ ಬುಡಕಟ್ಟು ಸಮುದಾಯಗಳು ಅನೇಕ ಸೌಲಭ್ಯಗಳನ್ನು ಪಡೆಯುವಂತಾಯಿತು.

೧೯೭೭ರಲ್ಲಿ ರಚನೆಯಾದ ಹಾವನೂರ ಹಿಂದುಳಿದ ವರ್ಗಗಳ ಆಯೋಗದ ವರದಿಯನ್ನು ಪರಿಶೀಲಿಸಿದ ನಂತರ ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯಕ್ಕೆ ನೀಡಬೇಕಾದ ಮೀಸಲಾತಿಯನ್ನು ವರ್ಗೀಕರಿಸಿದರು. ಇದರಿಂದ ಮೀಸಲಾತಿ ವರ್ಗೀಕರಣದ ಪರಿಣಾಮವಾಗಿ ಹಕ್ಕಿಪಿಕ್ಕಿಯರು ೧೯೭೭ ರಲ್ಲಿ ರಾಜಕೀಯ ಪ್ರವೇಶಮಾಡುವಂತಾಯಿತು. ಇದು ಹಕ್ಕಿಪಿಕ್ಕಿಯರ ಸ್ವಾತಂತ್ರ್ಯದ ನಂತರ ದೊರೆತ ಬಹುದೊಡ್ಡ ರಾಜಕೀಯ ಸ್ಥಿತ್ಯಂತರವಾಗಿತ್ತು.

ವ್ಯವಸ್ಥೆಯ ಮಾರ್ಗದಡಿಯಲ್ಲಿ ರೂಪಿತಗೊಂಡ ಅಧಿಕಾರದ ವಿಕೇಂದ್ರೀಕರಣದ ಪರಿಣಾಮವಾಗಿ ರೂಪಿತವಾದ ಜಿಲ್ಲಾ ಪಂಚಾಯತಿ, ಮಂಡಲ್ ಪಂಚಾಯತಿ, ಗ್ರಾಮಪಂಚಾಯತಿಗಳಲ್ಲಿ ಹಕ್ಕಿಪಿಕ್ಕಿಯರು ರಾಜಕೀಯ ಪ್ರವೇಶಮಾಡುವಂತಾಯಿತು. ಈ ಸೌಲಭ್ಯವನ್ನು ಪಡೆದ ಹಕ್ಕಿಪಿಕ್ಕಿಯರು ಮೂರು ಬಾರಿ ಗ್ರಾಮಪಂಚಾಯತಿ ಸದಸ್ಯರಾಗಿ ನೇಮಕಗೊಳ್ಳುವಂತಾಯಿತು. ಗ್ರಾಮಪಂಚಾಯತಿಯ ಸದಸ್ಯರಾಗಿ ಚುನಾಯಿತರಾದ ಹಕ್ಕಿಪಿಕ್ಕಿ ಕಾಲೋನಿಯ ಸದಸ್ಯರು ಶಿಕ್ಷಣವನ್ನು ಪಡೆಯದೆ ಅನಕ್ಷರಸ್ಥರಾಗಿದ್ದರು. ಇದರಿಂದಾಗಿ ಸಕ್ರೀಯ ರಾಜಕೀಯ ಬೆಳವಣಿಗೆಯಲ್ಲಿ ಯಾರೂ ಬೆಳೆಯಲಿಲ್ಲ. ಗ್ರಾಮ ಪಂಚಾಯತಿಯಿಂದ ಕಾಲೋನಿಗೆ ಮತ್ತು ಕಾಲೊನಿಯ ಜನತೆಗೆ ಯಾವುದೇ ವಿಧವಾದ ಸೌಲಭ್ಯಗಳು ಸಹ ದೊರೆಯಲಿಲ್ಲ. ಶೋಷಿತರಾದ ಹಕ್ಕಿಪಿಕ್ಕಿಯರ ಜೀವನ ವ್ಯವಸ್ಥೆಯಲ್ಲಿ ರಾಜಕೀಯ ಬೆಳವಣಗೆಗಳು ಫಲವನ್ನು ಕಾಣಲಿಲ್ಲ. ಇನ್ನು ಮೀಸಲಾತಿಯ ಪ್ರಮಾಣವನ್ನು ಪಡೆಯಲೇಬೇಕಾದ ಸಮಯದಲ್ಲಿ ಕಾಲೋನಿಯ ಜನರನ್ನು ಪ್ರಭಾವಿ ಮೇಲು ವರ್ಗದ ಜನರು ತಮ್ಮ ಕೈಯಾಳುಗಳಾಗಿ ಮಾಡಿಕೊಂಡಿದ್ದರು. ತಮ್ಮ ಶ್ರೀಮಂತ ಜೀವನದ ವರ್ಚಸ್ಸು ಅವರುಗಳ ಮೇಲೆ ಬೀರಿ ರಾಜಕೀಯವಾಗಿ ಸಂಘಟಿತರಾಗಿ ಮೆರೆಯಲು ಇವರುಗಳ ಸಹಾಯ ಪಡೆದಿದ್ದರು.

ಕಾಲೋನಿಯಲ್ಲಿ ಶಿಕ್ಷಣದ ಪ್ರಗತಿ ಸಾಕಷ್ಟು ಮಟ್ಟದಲ್ಲಿ ಇಲ್ಲದೇ ಇರುವುದು ಸಹ ಇವರುಗಳು ಶೋಷಿತರಾಗಲು ಇನ್ನೊಂದು ಮುಖ್ಯ ಕಾರಣವಾಗಿದೆ. ಸಂಘಟಿತವಾದ ಕಾಲೋನಿಯ ಜನರಲ್ಲಿ ಬಿರುಕಿನ ಗುಂಪುಗಳಾಗಿ ಮಾರ್ಪಡಿಸಿ, ತಮ್ಮ ಆಶಯಗಳನ್ನು ಈಡೇರಿಸಿಕೊಳ್ಳುತ್ತಿದ್ದರು. ರಾಜಕೀಯವಾಗಿ ಮತ್ತು ಆರ್ಥಿಕವಾಗಿ ಪ್ರಭಲಗೊಳ್ಳುತ್ತಾ ಮೇಲ್ವರ್ಗದ ಪ್ರಭಾವಿ ನಾಯಕರು ಕಾಲೋನಿಯನ್ನು ಒಂದು ಹಳ್ಳಿಯಾಗಿ ರೂಪಿಸುವಲ್ಲಿಯೂ ಸಹ ವಿಫಲರಾಗಿದ್ದರು. ಕಾಲೋನಿಯ ಹಿರಿಯರಾದ ದೊಡ್ಡಬಾಲಾಜಿ, ಡಿಪೂನ್, ತಿರುವಾನ್ ದೊರೆ ಮೂವರು ನಾಯಕರುಗಳು ಯಾವುದೇ ರೀತಿಯ ರಾಜಕೀಯ ಬೆಳವಣಿಗೆಯನ್ನು ಕಾಣಲಿಲ್ಲ. ಹೀಗಾಗಿ ರಾಜಕೀಯ ಪ್ರವೇಶದ ಹಕ್ಕು ಸಂವಿಧಾನದಿಂದ ದೊರೆಯುತ್ತಿದ್ದರೂ ಸಹ ಬಳಕೆಯಲ್ಲಿ ಕಾಲೋನಿಯ ಜನರು ಇನ್ನು ಹಿಂದೆ ಇರುವುದು ವಾಸ್ತವದ ಸಂಗತಿ. ರಾಜಕೀಯ ಸ್ಥಿತ್ಯಂತರ ಕಾಲೋನಿಯ ಜನರಿಗೆ ಇನ್ನು ಮೂಲಭೂತ ಸೌಲಭ್ಯಗಳನ್ನು ಒದಗಿಸುವಲ್ಲಿ ವಿಫಲವಾಗಿರುವುದು ಕಾಣಬಹುದಾಗಿದೆ.

**ಆರ್ಥಿಕ ಸ್ಥಿತ್ಯಂತರಗಳು**

ಪ್ರತಿಯೊಂದು ಮನುಷ್ಯನು ಜೀವಿಸಲು ಆಹಾರ ಬೇಕು. ಮುಖ್ಯವಾದದು ಸಹ. ಆದರೆ ಆಹಾರದ ಅವಲಂಬನೆ ವಿಭಿನ್ನವಾಗಿರಬಹುದು. ಆದರೆ ಜೀವನ ವಿಧಾನದಲ್ಲಿನ ವ್ಯವಸ್ಥೆಯಲ್ಲಿ ಅನುಭೋಗ, ಉತ್ಪಾದನೆ, ವಿತರಣೆ ಸಾಮಾನ್ಯವಾಗಿ ನಡೆಯುತ್ತಿರುತ್ತದೆ. ಇಂತಹ ಚಟುವಟಿಕೆಗಳು ಮುಖ್ಯವಾಗಿ ಆರ್ಥಿಕ ಚಟುವಟಿಕೆಯ ಕ್ರಿಯೆಗಳಾಗಿವೆ. ಬುಡಕಟ್ಟು ಸಮುದಾಯವಾದ ಹಕ್ಕಿಪಿಕ್ಕಿಯರ ಬೆಳವಣಿಗೆಯಲ್ಲಿ ಬೇಡಿಕೆ, ಪೂರೈಕೆ ಸಾಮಾನ್ಯವಾದ್ದುದು. ಆದರೆ ಅವುಗಳನ್ನು ಪಡೆಯುವ ಮಾರ್ಗ ಸಂಪೂರ್ಣ ಪ್ರಕೃತಿಯ

ಸಂಪತ್ತನ್ನೇ ಅವಲಂಭಿಸಿತ್ತು. ಕಾಡಿನಲ್ಲೇ ವಾಸಿಸುತ್ತಿದ್ದ ಹಕ್ಕಿಪಿಕ್ಕಿಯರಿಗೆ ಅರಣ್ಯವೇ ಒಂದು ವಿಶ್ವವಾಗಿತ್ತು. ಅರಣ್ಯದ ಉತ್ಪನ್ನಗಳಿಂದ ಕಟ್ಟಿಗೆ, ಹಣ್ಣುಗಳು, ಸೊಪ್ಪುಗಳು, ಪ್ರಾಣಿ, ಪಕ್ಷಿಗಳು. ಜೇನು, ಗಡ್ಡೆಗೆಣಸು ಪ್ರಮುಖವಾದ ಉತ್ಪನ್ನಗಳೇ ಆರ್ಥಿಕ ಸಂರಚನೆಯನ್ನು ನಿರ್ಮಿಸಿಕೊಟ್ಟಿತ್ತು. ಹೀಗಾಗಿ ಬದಲಾದ ಆರ್ಥಿಕ ಸ್ಥಿತ್ಯಂತರಗಳು ಇವುಗಳೆಲ್ಲವನ್ನು ಬದಲಾಯಿಸುತ್ತಾ ಬಂದಿದೆ.

ಸಮುದಾಯದ ಚಾರಿತ್ರಿಕ ಬೆಳವಣಿಗೆಯ ಇತಿಹಾಸವನ್ನು ಗಮನಿಸಿದಾಗ ಸಮುದಾಯದ ಎಲ್ಲಾ ಹೋರಾಟಗಳು ಆರ್ಥಿಕ ವ್ಯವಸ್ಥೆಯ ಮೂಲ ತಳಹದಿಯಿಂದಲೇ ಉದ್ಭವಗೊಂಡು ಸಂಕೀರ್ಣಗೊಳ್ಳುತ್ತಾ ಬಂದಿವೆ. ಸಮುದಾಯಗಳು ಯಾವುದಾದರೂ ಆಗಲಿ ಅಥವಾ ಮಾನವನ ಸಮೂಹವಾಗಲಿ ಜೀವಿಸುವ ಪ್ರತಿಯೊಂದು ಜನ ಸಮೂಹಗಳು ತನ್ನದೇ ಆದ ಆರ್ಥಿಕ ವ್ಯವಸ್ಥೆಯನ್ನು ಹೊಂದಿರುವುದು ಸಹಜ.ಅಲೆಮಾರಿಯಾದ ಹಕ್ಕಿಪಿಕ್ಕಿಯರು ಅಲೆಮಾರಿ ಆಧಾರಿತ ಜೀವನ ವಿಧಾನವನ್ನು ರೂಪಿಸಿಕೊಂಡು ಊರುಗಳಿಂದ ಊರುಗಳಿಗೆ ಪ್ರದೇಶದಿಂದ ಪ್ರದೇಶಕ್ಕೆ ಅಲೆಯುತ್ತಾ ಜೀವನ ಸಾಗಿಸುತ್ತಿದ್ದರು. ವ್ಯವಸಾಯದಿಂದ ಗಂಡಸರು ಕೃಷಿಕಾರ್ಮಿಕರಾದರೆ ಮಹಿಳೆಯರು ತನ್ನ ಆರ್ಥಿಕ ವ್ಯವಸ್ಥೆಯನ್ನು ನಿರ್ವಹಿಸುವಂತಹ ವ್ಯಾಪಾರಕ್ಕೆ ಮೊರೆಹೋಗಿದ್ದಾರೆ. ಹೀಗಾಗಿ ಸುತ್ತಲಿನ ಸಮುದಾಯಗಳ ಜೊತೆ ಗುರುತಿಸಿಕೊಳ್ಳುವಂತರಾಗಿದ್ದಾರೆ. ಕೂಲಿಗಾಗಿ ಸುತ್ತಲಿನ ಹಳ್ಳಿಗಳ ದೊಡ್ಡ ರೈತರನ್ನು ಅವಲಂಬಿಸಬೇಕಾದ ಪರಿಸ್ಥಿತಿ ನಿರ್ಮಾಣವಾಗಿದೆ..

ಆರ್ಥಿಕ ಸ್ವಾತಂತ್ರ್ಯವನ್ನು ಕಾಣದ ಹಕ್ಕಿಪಿಕ್ಕಿ ಸಮುದಾಯ ತನ್ನದೇ ಆದ ಅರ್ಥವ್ಯವಸ್ಥೆಯನ್ನು ತ್ಯಜಿಸಬೇಕಾಗಿಬಂದದ್ದು ಸ್ಥಿತ್ಯಂತರದ ಪ್ರಮುಖ ಬದಲಾವಣೆ. ಹೀಗಾಗಿ ಯೋಜನೆಗಳು ಹಕ್ಕಿಪಿಕ್ಕಿಯರನ್ನು ಆರ್ಥಿಕವಾಗಿ ದುರ್ಬಲಗೊಳ್ಳುವಂತೆ ಮಾಡಿತ್ತು. ಕಾಲೋನಿಯ ಹಕ್ಕಿಪಿಕ್ಕಿಯರು ನಗರದ ಸಮೀಪದಲ್ಲಿದ್ದರೂ ಸಹ ಅಷ್ಟೊಂದು ಆರ್ಥಿಕವಾಗಿ ಮುಂದುವರೆಯದ ಪರಿಸ್ಥಿತಿಯಲ್ಲೇ ಜೀವಿಸುತ್ತಿದ್ದಾರೆ. ಆಧುನೀಕರಣದ ಪ್ರವೇಶವಾದ ಮೇಲೆ ಕಾಲೋನಿಯ ಜನರು ನಿರಂತರವಾಗಿ ತಮ್ಮ ವೃತ್ತಿಗಳಲ್ಲಿ ಬದಲಾವಣೆಯನ್ನು ಬಯಸತೊಡಗಿದರು. ಸುತ್ತಲಿನ ಕೈಗಾರಿಕೆಗಳಲ್ಲಿ ಕೂಲಿ ಕೆಲಸದ ಕಾರ್ಮಿಕರಾಗಿ ದುಡಿಯುವ ಹಂತಕ್ಕೆ ಬಂದು ನಿಂತಿದ್ದಾರೆ.

ಕಾಲೋನಿಯಲ್ಲಿ ಸಾಕಷ್ಟು ಜನರು ಗುಡಿಕೈಗಾರಿಕೆಯಲ್ಲಿ ತೊಡಗಿರುವುದು ಮತ್ತು ಕರಕುಶಲ ಕಲೆಯಲ್ಲಿ ಪರಿಣಿತಿಯನ್ನು ಹೊಂದಿರುವುದು ಮುಖ್ಯವಾಗಿ ಕಂಡುಬರುತ್ತದೆ. ಆದರೆ ಸರಕಾರದ ಅಭಿವೃದ್ಧಿ ಯೋಜನೆಗಳು ಕಾಲೋನಿಯ ಜನರನ್ನು ಗುರುತಿಸುವಲ್ಲಿ ಇನ್ನು ಸಫಲವಾಗಿಲ್ಲ. ಮಾನವನ ಶ್ರಮ ಶಕ್ತಿಯಲ್ಲಿ ಹೇರಳವಾದ ಸಂಪತ್ತನ್ನೇ ಹೊಂದಿರುವ ಹಕ್ಕಿಪಿಕ್ಕಿಯರು ತಮ್ಮ ಆರ್ಥಿಕ ವ್ಯವಸ್ಥೆಗೆ ವಿವಿಧ ವೃತ್ತಿಗಳಿಗೆ ಬಂಡವಾಳದ ಅವಶ್ಯಕತೆ ಮುಖ್ಯವಾಗಿದೆ.

ಬದಲಾವಣೆಗೆ ಮುಖ ಮಾಡಿ ನಡೆಯುತ್ತಿರುವ ಸಂದರ್ಭದಲ್ಲಿ ಇವರು ಹೇಳುವಂತೆ, ನಮ್ಮ ಎಲ್ಲಾ ಬದಲಾವಣೆಗೆ ಸರಕಾರವೇ ಕಾರಣ. ಆದರೆ ನಮಗೆ ದೊರೆಯಬೇಕಾದ ಸೌಲಭ್ಯಗಳು ಕಾಲೋನಿಗೆ

ಬರುವುದೇ ಇಲ್ಲ. ಪಕ್ಕದ ಹಳ್ಳಿಗೆ ಎಲ್ಲಾ ರೀತಿಯ ಸೌಲಭ್ಯಗಳನ್ನು ಒದಗಿಸುತ್ತಾರೆ. ಆದರೆ ನಮ್ಮ ಕಾಲೋನಿಯಲ್ಲಿ ಯಾವುದೂ ಇಲ್ಲ. ನಾವು ಇಲ್ಲಿಗೆ ಬಂದು ೪೫ ವರ್ಷಗಳಾದರೂ ನಮ್ಮ ಕಾಲೋನಿ ಯ್ಯಾಂಗ ಐತಿ (ಹೇಗಿದೆ?) ನೋಡಿ ಎನ್ನುತ್ತಾರೆ.

ಕ್ಷೇತ್ರಕಾರ್ಯದಲ್ಲಿ ಕಂಡು ಬಂದ ನಿದರ್ಶನಗಳಿಂದ ಕಾಲೋನಿಯು ಒಂದು ಹಳ್ಳಿಯಾಗಿ ರೂಪಿತವಾಗಲು ಸಾಕಷ್ಟು ಸೌಲಭ್ಯಗಳು ಮುಖ್ಯವಾಗಿ ಬೇಕಾಗಿದೆ. ವಿಶಿಷ್ಟ ಉತ್ಪಾದನಾ ವ್ಯವಸ್ಥೆ ಹೊಂದಿರುವ ಕಾಲೋನಿಯ ಜನರಿಂದ ಹಲವು ಜನ ಹಾಗೂ ಹಳ್ಳಿಗಳಿಗೆ ಆದಾಯದಾಯಕವಾಗಿದೆ. ಸಾಮಾನ್ಯವಾಗಿ ಕಾಲೋನಿ ಜನರು ಖರ್ಚಿನ ಬಗ್ಗೆ ತಲೆಕೆಡಿಸಿಕೊಳ್ಳುವುದಿಲ್ಲ. ಹೀಗಾಗಿ ದುಡಿದ ಸಾಕಷ್ಟು ಹಣ ಇಲ್ಲಿ ಪೋಲಾಗುತ್ತಿದೆ.



ಅಧ್ಯಾಯ ೪

# ಅರಣ್ಯ, ಭೂಮಿ, ಭೂ ಹಿಡುವಳಿ : ಪಾರಂಪರಿಕ ತಿಳುವಳಿಕೆ

೧. ಅರಣ್ಯ ಮತ್ತು ಬುಡಕಟ್ಟು ಸಮುದಾಯಗಳ ಸಂಬಂಧ

೨. ಅರಣ್ಯದೊಂದಿಗೆ ಹಕ್ಕಿಪಿಕ್ಕಿ ಸಮುದಾಯದ ಸಂಬಂಧ

೩. ಭೂಮಿ

೪. ಹಕ್ಕಿಪಿಕ್ಕಿಯರು ಮತ್ತು ಭೂಮಿಯ ಸಂಬಂಧ

೫. ಭೂ ಹಿಡುವಳಿ ಮತ್ತು ಹಕ್ಕಿಪಿಕ್ಕಿಯರು.

೬. ಭೂ ಹಿಡುವಳಿ ಮತ್ತು ಆರ್ಥಿಕತೆ

೭. ಭೂ ಸುಧಾರಣೆ ಮತ್ತು ಹಕ್ಕಿಪಕ್ಕಿಯರು

# ಅರಣ್ಯ, ಭೂಮಿ, ಭೂ ಹಿಡುವಳಿ : ಪಾರಂಪರಿಕ ತಿಳುವಳಿಕೆ

ವಿಶ್ವದಲ್ಲಿ ಮಾನವನ ಸಮೂಹಕ್ಕೆ ವಿಶೇಷ ಸ್ಥಾನವಿದೆ. ಭೂಮಿ ತನ್ನ ಎಲ್ಲಾ ಜೀವರಾಶಿಗಳ ಆಶ್ರಯ ತಾಣ. ನೈಸರ್ಗಿಕ ಸಂಪನ್ಮೂಲಗಳಿಂದ ತುಂಬಿದ ಭೂಮಿಯು ತನ್ನ ಒಡಲಲ್ಲಿ ಅರಣ್ಯವನ್ನು ಅಡಗಿಸಿಕೊಂಡಿದೆ. ಇಂತಹ ಅರಣ್ಯವನ್ನು ಮೂಲನಿವಾಸಿಗಳಾದ ಅರಣ್ಯವಾಸಿಗಳು, ಆದಿವಾಸಿಗಳು, ಗಿರಿಜನರು ಸಂಪೂರ್ಣವಾಗಿ ಅವಲಂಬಿಸಿದ್ದಾರೆ. 'ಭಾರತದ ಮಟ್ಟಿಗೆ ಹೇಳುವುದಾದರೆ ಶೇ ೧೨ರಷ್ಟು ಮಾತ್ರ ಇರುವ ಅರಣ್ಯದಲ್ಲಿ ಸುಮಾರು ಬುಡಕಟ್ಟು ಸಮುದಾಯಗಳಿಗೆ ಆಶ್ರಯವನ್ನು ನೀಡಿದೆ. ಕರ್ನಾಟಕದಲ್ಲಿನ ಒಟ್ಟು ಭೂ ಗಾತ್ರಕ್ಕೆ ಹೋಲಿಸಿದರೆ, ಅರಣ್ಯದ ಪ್ರಮಾಣ ಶೇ. ೧೦ರಷ್ಟು ಮಾತ್ರ'[೧] ಇಂತಹ ಅರಣ್ಯದಲ್ಲಿ ವಾಸಿಸುತ್ತಿದ್ದ ಬುಡಕಟ್ಟು ಸಮುದಾಯಗಳಲ್ಲಿ ಹಕ್ಕಿಪಿಕ್ಕಿ, ಸಮುದಾಯವು ಒಂದಾಗಿದೆ.

ಪಂಚಭೂತಗಳಲ್ಲಿ ಒಂದಾದ ಭೂಮಿಯ ಬಗ್ಗೆ ಪುರಾಣಗಳಲ್ಲಿ ಸಹ ಉಲ್ಲೇಖವಿರುವುದು ನಾವು ಕಾಣಬಹುದು. ಜೀವಿಸುವ ಪ್ರತಿಯೊಂದು ಜೀವಿಗೆ ಆಸರೆ, ಈ ಭೂಮಿ. ಭೂಮಿಗೆ ನಿದ್ರೆ ಎಂಬುದೆ ಇಲ್ಲಾ ಪುರಾಣವಲ್ಲಿ ಭೂಮಿಯನ್ನು ತಾಯಿಗೆ ಹೋಲಿಸಿರುವುದು, ಜನನಿ, ಕ್ಷಮಾಯಾಧರಿತ್ರಿ ಎಂದೆಲ್ಲಾ ವರ್ಣನೆ ಕಂಡು ಬರುತ್ತದೆ. ಇಂತಹ ಭೂಮಿಯಲ್ಲಿ ಅರಣ್ಯ ಸಾಮಾನ್ಯವಾಗಿದೆ. ಭೂಮಿಯನ್ನು ಬಿಟ್ಟು ಅರಣ್ಯವಿಲ್ಲ, ಅದೇ ರೀತಿ ಅರಣ್ಯವನ್ನು ಬಿಟ್ಟು ಬುಡಕಟ್ಟು ಸಮುದಾಯಗಳಿಲ್ಲ. ಬುಡಕಟ್ಟು ಸಮುದಾಯಗಳ ಮೂಲ ಜನ್ಮಸ್ಥಳವೇ ಅರಣ್ಯ ಎನ್ನಬಹುದು. ಭೂಮಿಯ ಒಡಲಲ್ಲಿ ಅವಿತುಕೊಂಡಿರುವ ಸಸ್ಯರಾಶಿಯ ಪಸಿರು ಸಮುದಾಯಗಳ ಉಸಿರಾಗಿದೆ. ಜೀವಿಸುವ ಪ್ರತಿಯೊಂದು ಜೀವಿಗೂ ಆಹಾರ, ಔಷಧಿಯನ್ನು ಒದಗಿಸುವ ತಾಣವಾಗಿದೆ. ಆದಿಕಾಲದಿಂದಲೂ ಭೂಮಿ ಅರಣ್ಯಗಳ ಬಗ್ಗೆ ಮಾನವನು ವಿಶೇಷವಾದ ಕಾಳಜಿ ಹೊಂದಿರುವುದು ಕಂಡುಬರುತ್ತದೆ. ಮನುಷ್ಯ ಅರಣ್ಯವನ್ನು ಬಿಟ್ಟು ಬದುಕಲು

ಸಾಧ್ಯವಿಲ್ಲ. ಹೀಗಾಗಿ ಅರಣ್ಯವನ್ನು ಬಿಟ್ಟು ಯಾವುದೇ ಜೀವ ಸಂಕುಲವನ್ನು ಕಾಣಲು ಸಾಧ್ಯವಿಲ್ಲ. ಒಂದು ವೇಳೆ ಅರಣ್ಯವೇನಾದರೂ ನಾಶವಾದರೆ ಇಡೀ ಜೀವ ಸಂಕುಲ ನಾಶವಾದಂತೆ. ಜಗತ್ತಿನ ಇಡೀ ವಾತಾವರಣದ ಸಮತೋಲನವನ್ನ ಭೂಮಿ ತನ್ನ ಒಡಲಲ್ಲಿಟ್ಟುಕೊಂಡಿದೆ. ಕಾಡನ್ನು ಬೆಳೆಸಿ, ನಾಡನ್ನು ಉಳಿಸಿ ಎನ್ನುವ ಮಂತ್ರವು ಅರಣ್ಯ ಆಧುನಿಕ ಜಗತ್ತಿನ ಮಾನವನಿಗೂ ಎಷ್ಟು ಮಹತ್ವದ್ದು ಎನ್ನುವುದನ್ನು ತೋರಿಸುತ್ತದೆ. ಆದ್ದರಿಂದಲೇ ನೀರು, ಕಾಡು, ಎಲ್ಲಿರುತ್ತದೆಯೇ ಅಲ್ಲಿ ಸಂಸ್ಕೃತಿ ಅಥವಾ ನಾಗರಿಕತೆಯು ಸಹ ಇರುವುದು ವಾಸ್ತವಾಂಶವಾಗಿದೆ. ಹೀಗೆ ಯಾವುದೇ ಒಂದು ಸಂಸ್ಕೃತಿಯ ಉಗಮ ಈ ಅರಣ್ಯದಿಂದಲೇ ಎನ್ನಬಹುದು.

ಇತ್ತೀಚಿನ ದಿನಗಳಲ್ಲಿ ಜಗತ್ತಿನ ಎಲ್ಲಾ ರಾಷ್ಟ್ರಗಳು ಅರಣ್ಯ ಪರಿಸರಗಳ ಬಗ್ಗೆ ದೊಡ್ಡ ದೊಡ್ಡ ವಿಚಾರ ಸಂಕೀರ್ಣಗಳು ನಡೆಸುತ್ತಿರುವುದು ಸತ್ಯಸಂಗತಿ. ಅದೇ ರೀತಿಯಾಗಿ ಜಗತ್ತಿನ ಉದ್ದಗಲಕ್ಕೂ ಪರಿಸರ ಅರ್ಥಶಾಸ್ತ್ರದ ಬಗ್ಗೆ ಎಲ್ಲಿಲ್ಲದ ಮಹತ್ವದ ಬೆಳವಣಿಗೆಯು ಆಧುನಿಕ ಕಾಲದ ಪರಿಸರದ ಮಹತ್ವವನ್ನು ತಿಳಿಸುತ್ತದೆ. ಸೂಕ್ಷ್ಮ ಜೀವಿಗಳಿಂದ ಹಿಡಿದು, ಸಸ್ಯ, ಪ್ರಾಣಿ, ಮನುಷ್ಯ ಹೀಗೆ ವಿಪುಲ ಜೀವರಾಶಿಯನ್ನೊಳಗೊಂಡ ವಿಶೇಷತೆ ಭೂಗ್ರಹದ್ದು. ಇಂತಹ ಭೂಮಿಯ ಒಡಲಲ್ಲಿ ಸುಂದರವಾದ ಪ್ರಕೃತಿಯನ್ನು ಹೊಂದಿರುವ ಮಾನವ, ಪುರಾತನ ಕಾಲದಿಂದಲ್ಲೂ ಜೀವಿಸುತ್ತಾ ಬಂದಿರುವುದು ಸಾಮಾನ್ಯವಾಗಿ ತಿಳಿದ ವಿಷಯವಾಗಿದೆ. ಅರಣ್ಯವಾಸಿ ಸಮುದಾಯದವರಿಗೆ ಭೂಮಿ ಅರಣ್ಯದಲ್ಲಿ ಅಂತಹ ವಿಶೇಷತೆ ಕಾಣದಿದ್ದರೂ ಬದುಕಿ ಬಾಳಿದ್ದು ಈ ಪರಿಸರದಲ್ಲಿಯೇ. ಅರಣ್ಯವು ಇವರ ಜೀವನದ ಅತಿ ಮುಖ್ಯವಾದ ಆಧಾರ. ಇಂತಹ ಪರಿಸರವನ್ನು ಅವಲಂಬಿಸಿ, ಅದರ ಜೊತೆ ಜೊತೆಗೆ ಜೀವನ ವಿಧಾನವನ್ನು ರೂಪಿಸಿಕೊಂಡು ತಮ್ಮ ಪಾರಂಪರಿಕ ತಿಳುವಳಿಕೆಯಿಂದ ಸಂಸ್ಕೃತಿಕರಣಗೊಳ್ಳುತ್ತಾ ಬಂದ ಸಮುದಾಯವೇ ಹಕ್ಕಿಪಿಕ್ಕಿಯರು. ಹಕ್ಕಿಪಿಕ್ಕಿಯರು ಅಲೆಮಾರಿಗಳಾಗಿ ಅರಣ್ಯದಲ್ಲಿನ ಸಂಪತ್ತನ್ನೇ ಅವಲಂಬಿಸಿ, ಜೀವಿಸುತ್ತಿದ್ದ ಸಮುದಾಯ. ಅರಣ್ಯದಲ್ಲಿವೇ ಇವರ ವಾಸಸ್ಥಾನನಿನರು ಅರಣ್ಯದಲ್ಲಿ ಯಾವುದೇ ವಿಧವಾದ ತೊಂದರೆಗಳಿಲ್ಲದೆ ಆರಾಮಧಾಯಕವಾದ ಜೀವನ ಶೈಲಿಯನ್ನು ರೂಪಿಸಿಕೊಂಡಿದ್ದರು. ಮುಖ್ಯವಾಗಿ ಹಕ್ಕಿಪಿಕ್ಕಿಯುರು ಭೂಮಿಯನ್ನು ಅವಲಂಬಿಸಿ ದುಡಿಯಲು ಪ್ರಾರಂಭಿಸಿದ್ದು ಇತ್ತೀಚಿನ ದಿನಗಳಲ್ಲಿ ಎನ್ನುವುದು ಮುಖ್ಯ. ಸಮುದಾಯವು ಅರಣ್ಯದಿಂದಲೇ ತನ್ನೆಲ್ಲಾ ಬದಲಾವಣೆಗಳನ್ನು ಕಂಡಿರುವುದನ್ನು ಇಲ್ಲಿ ಗಮನಿಸಿಬಹುದು. ಪಾರಂಪರಿಕ ನೆಲೆಯಿಂದ ಬದಲಾವಣೆಯತ್ತ ಬಯಸಿ ನಡೆಯುತ್ತಿರುವುದು ಅರಣ್ಯ ಪರಿಸರದಿಂದಲೇ ಆದರೂ ಅವರು ವಾಸಸ್ಥಾನ ಇನ್ನು ಈ ಪರಿಸರವನ್ನು ಬಿಟ್ಟಿಲ್ಲ.

ಪ್ರಾಚೀನ ತಲೆಮಾರುಗಳಿಂದ ಹಕ್ಕಿಪಿಕ್ಕಿಯರು ಅರಣ್ಯದ ಬಗ್ಗೆ ಮತ್ತು ಭೂಮಿಯ ಬಗ್ಗೆ ವಿಶೇಷವಾದ ಒಲವು ಹೊಂದಿರುವುದು ಗಮನಿಸಬಹುಮು. ಅದೇ ರೀತಿಯಾಗಿ ಹಕ್ಕಿಪಿಕ್ಕಿಯರ ಜೀವನ ವಿಧಾನದಲ್ಲಿನ ಬದಲಾವಣೆಯಲ್ಲಿ ಸಹ ಅರಣ್ಯ ಭೂಮಿ, ಭೂ ಹಿಡುವಳಿಗಳು ವಿಶೇಷ ಪಾತ್ರವಹಿಸಿರುವುದು,

ಪ್ರಸ್ತುತ ಗಮನಿಸಬೇಕಾದ ವಿಷಯವಾಗಿದೆ. ಬದುಕಿನ ಅವಿಭಾಜ್ಯ ಅಂಗವೆಂದೇ ಪರಿಗಣಿಸಿದ್ದ ಅರಣ್ಯದ ಅವಲಂಬನೆ ಸಾಕಷ್ಟು. ಇನ್ನು ಅರಣ್ಯದಲ್ಲಿಯೆ ವಾಸವಾಗಿದ್ದ ಈ ಸಮುದಾಯದ ಜನರು ಅರಣ್ಯ ಉತ್ಪನ್ನಗಳಿಂದಲೇ ಬದುಕನ್ನು ಸಾಗಿಸುತ್ತಿದ್ದಾರೆ.

ಪಾರಂಪರಿಕ ತಿಳುವಳಿಕೆಯ ವಿಕಾಸದ ಹಾದಿಯನ್ನು ತಿಳಿದು ಹೊರಟರೇ, ಭೂಮಿಯ ಮೇಲೆ ಹರಡಿಕೊಂಡಿರುವ ಮಾನವ ಆಹಾರದ ಆವಶ್ಯಕತೆಯನ್ನು ವಿಭಿನ್ನ ಮೂಲಗಳಿಂದ ಪಡೆಯಬೇಕಾಯಿತು. ಹೀಗಾಗಿ ಪ್ರಾಣಿಗಳನ್ನು ಬೇಟೆಯಾಡಿ ತಿನ್ನುವುದು ಮತ್ತು ಸೊಪ್ಪುಗಳನ್ನು ಕಿತ್ತು ತಿನ್ನ ತೊಡಗಿದ್ದ. ಇದರಿಂದಾಗಿ ಮಾನವನಿಗೆ ಪೋಷಕವಾದ ಹಾಗೂ ಸಹಾಯಕವಾದ ಆಹಾರವು ಪರಿಸರದಲ್ಲಿ ದೊರೆಯ ತೊಡಗಿದರಿಂದ ಅರಣ್ಯವು ಮನುಷ್ಯನ ಬದುಕಿನಲ್ಲಿ ಹಾಸು ಹೊಕ್ಕಾಗಿತ್ತು. ಇನ್ನು ಸಮಾಜದಲ್ಲಿ ಮಾನವನು ಒಬ್ಬ ಜೀವಿಯಾಗಿ ಪಾರಂಪರಗತವಾಗಿ ಅವಲಂಬಿಸಿಕೊಂಡು ಬಂದಿರುವ ಅರಣ್ಯ ಮತ್ತು ಭೂಮಿ, ಇವುಗಳೆಲ್ಲವು ನಾಗರಿಕತೆಯ ಜೊತೆಗೆ ಹಂಚಿಕೊಳ್ಳುವ, ಬಳಸಿಕೊಳ್ಳುವ ಕ್ರಿಯೆಯಿಂದಾಗಿಯೇ ಇಲ್ಲಿನ ಪರಿಸರದಲ್ಲಿ ಸಾಮರಸ್ಯ, ಸಂಘರ್ಷಗಳೆರಡೂ ಏರ್ಪಡುತ್ತಿದ್ದವು. ಅರಣ್ಯವಾಸಿಗಳೆಂದೇ ಗುರುತಿಸಿಕೊಂಡಿದ್ದ ಹಕ್ಕಿಪಿಕ್ಕಿಯರು ಒಂದು ವಿಸ್ಮಯ ಲೋಕವನ್ನೆ ಅರಣ್ಯದಲ್ಲಿ ಕಟ್ಟಿಕೊಂಡಿದ್ದರು. ಅರಣ್ಯ ಹಕ್ಕಿಪಿಕ್ಕಿಯರ ಜೀವನ ವಿಧಾನದಲ್ಲಿ ಬಹಳ ಮುಖ್ಯವಾದ ಪಾತ್ರವಹಿಸಿದೆ. ಭೂ ಹಿಡುವಳಿಯು ಅರಣ್ಯದ ನಂತರದ ಉತ್ಪಾದನಾ ಕೇಂದ್ರ ಬಿಂದುವಾಗಿ ಪರಿವರ್ತನೆಗೊಂಡಿದೆ. ಬದಲಾದ ಸಾಮಾಜಿಕ ವ್ಯವಸ್ಥೆಯಲ್ಲಿ ಭೂಮಿಯು ಭೂಸುಧಾರಣಾ ಕಾಯ್ದೆಯಿಂದಾಗಿ ದೊರೆತಿರುವುದರಿಂದ, ಭೂಮಿಯ ಅವಲಂಬನೆಯಿಂದಾಗಿ ಇವರ ಬದುಕಿನಲ್ಲಿ ಅನೇಕ ಬದಲಾವಣೆಗಳಾದವು.

## ೧. ಅರಣ್ಯ ಮತ್ತು ಬುಡಕಟ್ಟುಗಳ ಸಂಬಂಧ

ಶತಮಾನಗಳಿಂದಲೂ ಬುಡಕಟ್ಟು ಸಮುದಾಯವೆಂದರೆ ಮುಖ್ಯವಾಗಿ ಗಮನಿಸುವುದು ಅರಣ್ಯವಾಸಿ, ಗಿರಿಜನರು, ಆದಿವಾಸಿಗಳು ಎಂದೇ ಗುರುತಿಸಲಾಗುತ್ತಿದೆ. ಹೀಗಾಗಿ ಸಮುದಾಯಗಳನ್ನು ಗುರುತಿಸುವಾಗ ಅರಣ್ಯದ ಕಲ್ಪನೆ ಸಹಜವಾಗಿ ಮೂಡುತ್ತದೆ. ಆದಿಮಕಾಲದ ಬುಡಕಟ್ಟು ಸಮುದಾಯಗಳ ಆಶ್ರಯ ತಾಣಗಳೇ ಈ ಅರಣ್ಯಗಳು. ಮುಖ್ಯವಾಗಿ ಜಗತ್ತಿನ ಎಲ್ಲಾ ಭೂ ಭಾಗದ ಆದಿವಾಸಿಗಳು ಅರಣ್ಯದಲ್ಲಿನ ಮೂಲನಿವಾಸಿಗಳೆಂದೇ ಗುರುತಿಸಿಕೊಂಡಿದ್ದಾರೆ. ಆದರೆ ಸಾಕಷ್ಟು ಸಮುದಾಯಗಳು ಹೊರ ಜಗತ್ತಿನ ನಾಗರಿಕತೆಯೊಂದಿಗೆ ಗುರುತಿಸಿಕೊಂಡಿವೆ. ಹಲವು ಸಮುದಾಯಗಳು ನಾಗರಿಕ ಪ್ರಪಂಚಕ್ಕೆ ಬರದೇ ಇರವುದು ಸಹ ಕಂಡುಬರುತ್ತದೆ. ಆಫ್ರಿಕಾ ಖಂಡದಲ್ಲಿನ ಆರಣ್ಯವು ಇದಕ್ಕೆ ಉತ್ತಮ ಉದಾಹರಣೆ ಎನ್ನಬಹುದು. ಜೊತೆಗೆ ದ್ವೀಪ ರಾಷ್ಟ್ರಗಳಲ್ಲೂ ಸಹ ಮುಖ್ಯವಾಗಿ ಕಂಡು ಬರುತ್ತಾರೆ. ಎಲ್ಲಾ ಬುಡಕಟ್ಟು ಸಮುದಾಯಗಳು ಅರಣ್ಯದ ಆಶ್ರಯದಲ್ಲೇ ಬೆಳಕಿಗೆ ಬಂದವುಗಳು. ಅರಣ್ಯ ಬಿಟ್ಟು ಸಮುದಾಯ ಜೀವಿಸಿದ ಲಕ್ಷಣಗಳು ಕಂಡುಬರುವುದಿಲ್ಲ. ಕರ್ನಾಟಕದಲ್ಲಿ ಹಲವು ಬುಡಕಟ್ಟು

ಸಮುದಾಯಗಳನ್ನು ಗುರುತಿಸ ಹೊರಟರೆ, ಬಹಳಷ್ಟು ಸಮುದಾಯಗಳು ಬೆಟ್ಟ ಗುಡ್ಡಗಳ ಅರಣ್ಯವಾಸಿಗಳೇ ಎನ್ನಬಹುದು. ಅಂತಹ ನಿದರ್ಶನಗಳಿಗೆ ಪಶ್ಚಿಮ ಘಟ್ಟಗಳಲ್ಲಿನ ಹಲವಾರು ಬುಡಕಟ್ಟು ಸಮುದಾಯಗಳನ್ನು ಹೆಸರಿಸಬಹುದು.

ಬುಡಕಟ್ಟು ಸಮುದಾಯಗಳ ಇತಿಹಾಸವನ್ನು ನೋಡಿದಾಗ ಆದಿಮಕಾಲದಿಂದಲ್ಲೂ ಮಾನವನ ಸರ್ವಾಂಗೀಣ ಬೆಳವಣಿಗೆಯಲ್ಲಿ ಅರಣ್ಯ ಪ್ರಮುಖ ಪಾತ್ರ ವಹಿಸಿದೆ. ಇಂದಿನ ಆಧುನಿಕ ಜಗತ್ತಿನಲ್ಲಿಯೂ ಸಹ ಎಷ್ಟೋ ಬುಡಕಟ್ಟು ಸಮುದಾಯಗಳು ಅರಣ್ಯವನ್ನು ನಂಬಿ ಜೀವಿಸುತ್ತಿರುವ ಉದಾಹರಣೆಗಳು ನಮ್ಮ ಕಣ್ಣು ಮುಂದೆ ಇವೆ. ಅರಣ್ಯವನ್ನು ಕುರಿತು ತಿಳಿಯುವಲ್ಲಿ ಅರಣ್ಯದ ಒಡೆಯರಾದ ಬುಡಕಟ್ಟು ಸಮುದಾಯಗಳ ಸಂಬಂಧ ಗುರುತಿಸಬೇಕಾಗುತ್ತದೆ. ಅರಣ್ಯಗಳ ಜೊತೆಗಿನ ಬದುಕಿನ ಸಂಬಂಧವನ್ನು ರೂಪಿಸಿಕೊಂಡ ರೀತಿ ನೀತಿಗಳು, ಮನುಷ್ಯ ಮತ್ತು ಅರಣ್ಯ ಬದುಕಿನ ವಿಧಾನದಲ್ಲಿ ಒಂದಕ್ಕೊಂದು ಹಣೆದುಕೊಂಡಿದ್ದು ಮಹತ್ವದ ಕೊಡು ಕೊಳಿಗಳನ್ನು ರೂಢಿಸಿಕೊಂಡಿದ್ದಾನೆ.

ಭೂಮಿಯ ಒಂದು ಭಾಗವಾದ ಅರಣ್ಯ ಪ್ರಕೃತಿದತ್ತವಾದರೂ ಅದು ಬುಡಕಟ್ಟು ಸಮುದಾಯದ ಸಮಾಜ ರಚನೆಯ ಪ್ರಮುಖವಾದ ಕೇಂದ್ರಬಿಂದು. ಅರಣ್ಯದಲ್ಲಿನ ಮಾನವನ ಬದುಕು, ವ್ಯಕ್ತಿತ್ವ, ಸುಖ ದುಃಖಗಳಿಗೆ ಮಹತ್ವದಾಗಿತ್ತು. ಸೌಂದರ್ಯಾನುಭೂತಿಯನ್ನು ದೇವತೆಗಳಿಗಿಂತ ಹೆಚ್ಚು ಪ್ರಾಮುಖ್ಯತೆ ನೀಡಿ, ಜೀವನ ಕ್ರಮಕ್ಕೆ ಹೆಚ್ಚು ಹೊತ್ತು ಕೊಟ್ಟು ಸಹಜ ಬದುಕನ್ನು ನಿರ್ಮಿಸಿಕೊಂಡಿದ್ದ ಬುಡಕಟ್ಟು ಸಮುದಾಯಗಳು, ಅರಣ್ಯದ ದುಡಿಮೆಗೆ ಹೆಚ್ಚು ಪ್ರಾಶ್ಯಸ್ತವಿಲ್ಲದೆ ಪ್ರಕೃತಿಯ ಜೊತೆ ಸಾಮರಸ್ಯದ ಸಹಜ ಜೀವನ ರೂಢಿಸಿಕೊಂಡಿದ್ದಾರೆ. ಅರಣ್ಯದ ನಿಗೂಢತೆಯ ಜೊತೆಗೆ ಅದಮ್ಯ ಉತ್ಸಾಹವನ್ನು ತಮ್ಮ ಜೀವನದ ಶೋಧನೆಗಳಲ್ಲಿ ಕಾಂತ್ರಿಕಾರಕ ಬದಲಾವಣೆಗಳನ್ನು ಬಯಸುತ್ತಾ ಸಫಲತೆ, ವಿಫಲತೆಗಳ ಕಾಳಜೀ ವಹಿಸದೇ ತಮ್ಮ ಬದುಕನ್ನು ಕಟ್ಟಿಕೊಂಡಿದ್ದರು.

ಮುಖ್ಯವಾಗಿ ಅರಣ್ಯವೆಂದರೆ ಸಕಲ ಸಂಪತ್ತನ್ನು ಕೇಂದ್ರಿಕರಿಸಿಕೊಂಡಿರುವ ಒಂದು ಸಂಪತ್ತಿನ ಗಣಿ ಎನ್ನಬಹುದು. ಅರಣ್ಯ ಜೀವನವ ಬುಡಕಟ್ಟು ಸಮುದಾಯಗಳ ಸಮಾಜದ ರಚನೆ ವಿಶೇಷಗಳಿಂದ ಕೂಡಿತ್ತು. ಆರ್ಯರ ಕಾಲದಿಂದಲೂ ಜೈವಿಕ ಸಮಾಜದಲ್ಲಿ ಬದಲಾವಣೆಗಳು ನಡೆಯುತ್ತಿರುವುದು ಅರಣ್ಯದಿಂದಲೇ 'ಇಂತಹ ಅರಣ್ಯದಲ್ಲಿ ಪಾಲು ಪಡೆದ ಭಾರತ ಸುಮಾರು ೨೧/೨ ಕೋಟಿ ಆದಿವಾಸಿ ಜನಾಂಗವನ್ನು ತನ್ನ ಒಡಲಲ್ಲಿ ಇಟ್ಟುಕೊಂಡಿದೆ'[೨] ಆದಿಮಕಾಲದ ಬುಡಕಟ್ಟು ಸಮುದಾಯಗಳು ತಮ್ಮ ಜೀವಿತದ ಕಾಲವೆಲ್ಲಾ ಅರಣ್ಯಗಳಲ್ಲೆ ಕಳೆಯುತ್ತಿದ್ದರು. ಆಧುನಿಕ ಅಭಿವೃದ್ಧಿ ಕಲ್ಪನೆಗಳು ಅರಣ್ಯದಿಂದ ಈ ಸಮುದಾಯಗಳನ್ನು ಒಕ್ಕಲೆಬ್ಬಿಸುತ್ತಿರುವುದು ನಿಜಸಂಗತಿ. ಇದರಿಂದ ಅರಣ್ಯದ ಉಪುತ್ಪನ್ನಗಳನ್ನು ನಂಬಿ ಬದುಕುತ್ತಿದ್ದ ಸಮುದಾಯಗಳು ಇಂದು ಆಧುನಿಕ ನಗರಗಳ ರಸ್ತೆ, ಬೀದಿಗಳಲ್ಲಿ ಕೊಳಕರಂತೆ ಬಿಕ್ಷುಕರಂತೆ, ಕೊಳಚೆ ಪ್ರದೇಶಗಳಲ್ಲಿ ಕಂಡು ಬರುತ್ತಿದ್ದಾರೆ.

ಅರಣ್ಯದ ಉಪಉತ್ಪನ್ನಗಳಾದ ಮರಮುಟ್ಟು, ಉರುವಲು, ಕಟ್ಟಿಗೆ, ದಿನನಿತ್ಯದ ಆಹಾರಕ್ಕೆ ಪ್ರಾಣಿ, ಪಕ್ಷಿಗಳು, ಗಡ್ಡೆ ಗೆಣಸು ಹಣ್ಣು, ಸೊಪ್ಪುಗಳು ಅರಣ್ಯದಿಂದಲೇ ಸಂಗ್ರಹಿಸುತ್ತಿದ್ದರು. ಲಘು ಬೇಸಾಯ ಪದ್ಧತಿಯನ್ನು ಅಳವಡಿಸಿಕೊಂಡು ಭೂಮಿಯನ್ನು ವ್ಯವಸಾಯಕ್ಕೆ ಯೋಗ್ಯವಾಗುವಂತೆ ಮಾಡಿಕೊಂಡಿದ್ದರು. ನಂತರ ಉತ್ಪಾದನಾ ವಿಧಾನದಲ್ಲಿನ ಪರಿಕರಗಳು ಬದಲಾವಣೆಗೊಂಡು ಗಣ ವ್ಯವಸ್ಥೆಯು ಪ್ರಾರಂಭಗೊಂಡಿತ್ತು. ಒಂದೆಡೇ ಹೆಚ್ಚಿದ ಜನಸಂಖ್ಯೆ ಗುಂಪುಗಳಾಗಿ ಜೀವಿಸಲು ಪ್ರಾರಂಭಿಸಿದರು.

## ೨. ಅರಣ್ಯದೊಂದಿಗೆ ಹಕ್ಕಿಪಿಕ್ಕಿ ಸಮುದಾಯದ ಸಂಬಂಧ

ಬುಡಕಟ್ಟು ಸಮುದಾಯವಾದ ಹಕ್ಕಿಪಿಕ್ಕಿಯರು ಅರಣ್ಯವನ್ನೇ ಅವಲಂಬಿಸಿದ ಜೀವನಾಧರ ವ್ಯವಸ್ಥೆಯನ್ನು ರೂಪಿಸಿಕೊಂಡಿದ್ದ ಸಮುದಾಯ. ಅಲೆಮಾರಿಗಳಾಗಿದ್ದರೂ ಅರಣ್ಯ ಇವರನ್ನು ಪರೋಕ್ಷವಾಗಿ ಪೋಷಿಸುತ್ತಿತ್ತು. ಈಗಲೂ ಅವರು ಜೀವಿಸುವ ಪ್ರದೇಶ ಅರಣ್ಯದ ಸಮೀಪದಲ್ಲೇ ಇರುವುದನ್ನು ಗುರುತಿಸಬಹುದಾಗಿದೆ. ಅರಣ್ಯ ಇವರ ಪಾರಂಪರಿಕ ಆರ್ಥಿಕ ಚಲನೆಗಳನ್ನು ರೂಪಿಸುತ್ತಿತ್ತು. ಹಕ್ಕಿಪಿಕ್ಕಿಯರ ಜೀವನ ವಿಧಾನಕ್ಕೆ ಅರಣ್ಯದ ಉಪಉತ್ಪನ್ನಗಳೇ ಆಧಾರವಾಗಿದ್ದವು.

ಅರಣ್ಯ ಉತ್ಪನ್ನಗಳನ್ನು ಬೇಟೆಯ ಮುಖಾಂತರ ಸಂಗ್ರಹಿಸಿ ತರುವ ಪುರುಷರು ಅದನ್ನು ಮಾರುವುದಕ್ಕೆ ಮಹಿಳೆಯರು ವಿಶೇಷವಾಗಿ ತೊಡಗಿಕೊಳ್ಳುತ್ತಿದ್ದರು. ಆಹಾರ ಸಂಗ್ರಹಣೆಗೆ ಅರಣ್ಯವನ್ನೇ ಇವರು ಆಶ್ರಯಿಸಿದ್ದರು. ಹಕ್ಕಿಪಿಕ್ಕಿಯರು ತಾವು ಬೇಟೆಯಾಡುವ ಪ್ರಮುಖ ಪ್ರಾಣಿಗಳ ಚರ್ಮ, ಉಗುರು, ಹಲ್ಲು ಹಾಗೂ ಮಾಂಸಗಳನ್ನು ಮಾರಾಟಕ್ಕೆ ಬಳಸಿಕೊಳ್ಳುತ್ತಿದ್ದರು. ಕಾಡಿನಲ್ಲಿ ದೊರೆಯುವ ಒಂದು ವಿಧವಾದ ಪ್ರಾಣಿಯಿಂದ ಸಂಗ್ರಹಿಸುವ ಗೋರಂಜನ ಮತ್ತು ಕಸ್ತೂರಿ ಮೃಗದಿಂದ ತರುವ ಕಸ್ತೂರಿಯು ಇವರು ಮಾರಾಟದ ವಸ್ತುವಾಗಿರುತ್ತಿತ್ತು. ನೀರಿನಲ್ಲಿ ದೊರೆಯುವ ಏಡಿ, ಆಮೆ, ಮೊಸಳೆ, ಮೀನುಗಳಿಂದ ಎಣ್ಣೆಯನ್ನು ತೆಗೆದು ಅರಣ್ಯದಲ್ಲಿನ ವಿವಿಧ ಬಗೆಯ ಸಸ್ಯಗಳನ್ನು ಅದರ ಜೊತೆ ಮಿಶ್ರಣ ಮಾಡಿ ವಿವಿಧ ರೋಗಗಳಿಗೆ ಮನೆ ಮದ್ದಾಗಿ ಮಾರಾಟ ಮಾಡುತ್ತಿದ್ದರು.

ಕಾಡಿನಲ್ಲಿ ದೊರೆಯುವ ಪ್ರಮುಖ ಪಕ್ಷಿಗಳಾದ ನವಿಲು, ಗೌಜಲಹಕ್ಕಿ, ಲಾವಗನಹಕ್ಕಿ, ಪರಿವಾಳ, ಹದ್ದು, ಉಡ, ಕಾಡು ಕೋಳಿ, ಪುರ್ಲಿ ಮುಂತಾದ ಪಕ್ಷಿಗಳಿಂದ ವಿಶೇಷವಾಗಿ ಎಣ್ಣೆಯನ್ನು ತಯಾರಿಸಿ ಮಾರಾಟ ಮಾಡುತ್ತಿದ್ದರು. ಹಲವಾರು ಜಾತಿಯ ಪಕ್ಷಿಗಳನ್ನು ಹಿಡಿದು ಮಾರಾಟ ಮಾಡುವುದು ಪ್ರಸ್ತುತದ ವರೆಗೂ ಕಾಣಬಹುದಾಗಿತ್ತು. ಅರಣ್ಯದಲ್ಲಿ ದೊರೆಯುವ ಅತಿ ಮುಖ್ಯವಾದ ಸಸ್ಯರಾಶಿಯನ್ನು ತಮ್ಮ ಬದುಕಿನ ನಿರ್ವಹಣೆಗೆ ಬಳಸಿಕೊಂಡ ನಿದರ್ಶನಗಳು ಇನ್ನೂ ಹಕ್ಕಿಪಿಕ್ಕಿಯರಲ್ಲಿ ಜೀವಂತವಾಗಿವೆ. ಅರಣ್ಯ ಉತ್ಪನ್ನಗಳಿಂದ ಮನುಷ್ಯನ ಶರೀರದ ಎಷ್ಟೇ ಅಂಗಗಳಿಗೆ ಬರುವ ಕಾಯಿಲೆಗಳಿಗೆ ನಾಟಿ ಔಷಧ ಪದ್ಧತಿಯನ್ನು ಮಾಡುವುದು ಈ ಜನರ ವಿಶೇಷತೆ. ಮನುಷ್ಯನ ಕಾಯಿಲೆಗಳಿಗೆ ಅರಣ್ಯ ಉತ್ಪನ್ನ ಸಸ್ಯ ಮತ್ತು ಹಲವು ವಿಧವಾದ ಪ್ರಾಣಿ, ಪಕ್ಷಿಗಳ ಎಣ್ಣೆಯನ್ನು ಬೆರಸಿ ಭಾರತದ ಮೂಲೆ ಮೂಲೆಗಳಲ್ಲಿ

ಮಾರಾಟ ಮಾಡುತ್ತಿದ್ದರು. ಇದರಿಂದ ಸಮುದ್ರ ತೀರಗಳಲ್ಲಿ ಹೆಚ್ಚು ಜನರಿಗೆ ಉದ್ಯೋಗ ದೊರೆಯುವಂತೆ ಆಗಿದೆ ಎನ್ನಲಾಗಿದೆ.

ಹುಲಿ ಉಗುರು, ಹಲ್ಲು, ಚರ್ಮ, ನರಿ, ಬೊಂಬೆ ವಿವಿಧ ರೀತಿಯ ಎಣ್ಣೆ, ಗೋರಂಜನ ಕಸ್ತೂರಿಯನ್ನ ಜನ ಇಂದಿಗೂ ಕೇಳಿಪಡೆಯುತ್ತಿರುವುದು ವಾಸ್ತವದ ಸಂಗತಿ. ಆದರೆ ಹಕ್ಕಿಪಿಕ್ಕಿಯರಿಗೆ ಇಂದು ಅರಣ್ಯದ ಪ್ರವೇಶವಿಲ್ಲವಾಗಿದೆ. ಅರಣ್ಯದೊಂದಿಗೆ ವಿಶೇಷವಾಗಿ ಗುರುತಿಸಿಕೊಂಡ ಸಮುದಾಯ ಅರಣ್ಯದ ಉಪಉತ್ಪನ್ನಗಳಿಂದಲೇ ವಿವಿಧ ಬಗೆಯ ಬೇರೆ ವೃತ್ತಿಗಳನ್ನು ರೂಪಿಸಿಕೊಂಡಿದ್ದರು. ಬೇಟೆ ಮತ್ತು ವ್ಯಾಪಾರ ಸಮುದಾಯದ ಮೂಲ ವೃತ್ತಿಗಳಾಗಿದ್ದವು. ಅರಣ್ಯದಲ್ಲಿನ ಉತ್ಪನ್ನಗಳ ಬಳಕೆಯ ಇವರ ಪಾರಂಪರಿಕ ತಿಳುವಳಿಕೆಯನ್ನು ರೂಪಿಸಿತು. ಇದು ಅವರ ನಿತ್ಯದ ಹೊಟ್ಟೆಪಾಡಿನ ಕಷ್ಟಗಳನ್ನು ನಿವಾರಿಸಿತು. ವ್ಯಾಪಾರದಿಂದ ಗಳಿಸುವ ಆದಾಯದಿಂದ ಅರಣ್ಯದಲ್ಲಿಯೆ ತನ್ನ ಸಂಪ್ರದಾಯ, ಆಚರಣೆ, ಜೀವನ ವಿಧಾನಗಳನ್ನು ಕಟ್ಟಿಕೊಂಡಿದ್ದರು. ಅರಣ್ಯ ಉತ್ಪನ್ನಗಳಿಂದಲೇ ಸಂಗ್ರಹವಾದ ಹಣದಿಂದಲೇ ಹಬ್ಬಗಳು ಮತ್ತು ಕುಟುಂಬದಲ್ಲಿನ ವಿವಾಹ ಕಾರ್ಯಗಳು ನಡೆಯುತ್ತಿತ್ತು. ಅರಣ್ಯವನ್ನು ದೇವರು ಕೊಟ್ಟಿದ್ದು, ಅದರಿಂದ ನಾವು ಅರಣ್ಯದೊಳಗೆ ದೇವರು ಮಾಡುವುದು ಮುಖ್ಯ ಎನ್ನುತ್ತಾರೆ. ಅರಣ್ಯ ಉತ್ಪನ್ನಗಳು ಎರಡು ರೀತಿಯ ಅನುಕೂಲತೆಯನ್ನು ಹಕ್ಕಿಪಿಕ್ಕಿಯರಿಗೆ ನೀಡಿತ್ತು. ಆಹಾರದ ಮೂಲವಾಗಿ, ವ್ಯಾಪಾರದ ಮೂಲವಾಗಿ ಇವರಿಗೆ ದಕ್ಕಿದ್ದವು. ಅರಣ್ಯದಲ್ಲಿನ ಜೀವನ ಹಕ್ಕಿಪಿಕ್ಕಿಯರನ್ನು ಆರೋಗ್ಯ ಹಾಗೂ ದೃಢಕಾಯರಾಗಿ ಜೀವನ ನಡೆಸುವಂತೆ ಮಾಡಿತ್ತು. ಅರಣ್ಯದಲ್ಲೇ ಅರಣ್ಯ ಉತ್ಪನ್ನದಿಂದಲೇ ತಮ್ಮ ಸಂಸ್ಕೃತಿಯನ್ನು ಕಟ್ಟಿಕೊಂಡಿದ್ದರು. ಸಾಮಾಜಿಕ ವ್ಯವಸ್ಥೆಯಲ್ಲಿ ತನ್ನದೇ ಪ್ರತ್ಯೇಕವಾದ ಪರಂಪರೆ ಕಟ್ಟಿಕೊಂಡು ಇವರು ಪ್ರತ್ಯೇಕವಾಗಿ ಜೀವಿಸುತ್ತಿದ್ದರು.

ಹಕ್ಕಿಪಿಕ್ಕಿ ಕಾಲೋನಿಯ ನಿವಾಸಿಗಳು ಹೇಳುವಂತೆ ' ಕಾಡು ನಮ್ಮದು, ಇದಕ್ಕೆ ನಾವೇ ಒಡೆಯರು. ನಾವು ಇಲ್ಲಿ ಬಂದಾಗ ರಾಗಿ ಹಳ್ಳಿ ಕಾಡು ಇದು ದೊಡ್ಡದು. ನಮ್ಮ ಜೀವನ ಎಲ್ಲಾ ಇದ್ರಾಗೆ ನಂಬಿದ್ದೇವೆ. ನಮ್ಮ ಕಾಲದಾಗ ನಮ್ಮ ಜನದ್ದೊರೂ ಚೆನ್ನಾಗಿದ್ದೀವಿ. ಹಕ್ಕಿ ಹಿಡಿತಿದ್ದೀವಿ. ನಮ್ಮ ಕೆಲಸಗಳು ಕಾಡಾಗೇ. ಕಾಡಲ್ಲಿ ಮಾಡೊ ಬೇಟೆಯಿಂದ ಊಟ ಮಾಡುತ್ತಿದ್ದೀವಿ. ನಮ್ಮ ಊಟ ಅಂದರೆ ಸ್ವಾಮಿ ಮಾಂಸದ್ದು, ರಾತ್ರಿ ಹೊತ್ತು ಮಾಂಸ ಇಲ್ಲ ಅಂದ್ರೆ ನಮಗೆ ನಿದ್ರೆ ಇರಲಿಲ್ಲ. ಮನೆಗೆ ಸೌದೆ, ಪುಲ್ಲಿ (ಕಟ್ಟಿಗೆ) ಎಲ್ಲಾನೂ ತರುತ್ತಿದ್ದೀವಿ. ಮಾಂಸನಾ ಯಾವತ್ತು ಕಾಸು ಕೊಟ್ಟು ಕೊಂಡು ತಿನ್ನುತ್ತಿರಲಿಲ್ಲ. ಈವಾಗ ನಾವು ಕಾಡಾಗೇ ಹೋಗೋ ಅಂಗೆ ಇಲ್ಲಂದಗೆ ಮಾಡವರೇ ನಮಗೆ ಕಾಡು ಜೀವನ ಚೆನ್ನಾಗಿ ಹಿಡಿಸಿತ್ತು' ಎನ್ನುತ್ತಾರೆ. ಹೀಗೆ ಅರಣ್ಯವೆಂದರೆ ಹಕ್ಕಿಪಿಕ್ಕಿಯರಿಗೆ ಜೀವನ ವಿಧಾನ ಎನ್ನುವ ಮಟ್ಟಿಗೆ ಅವರುಗಳಲ್ಲಿ ಪ್ರಭಾವ ಬೀರಿದೆ. ಅರಣ್ಯವನ್ನು ಪೂಜಿಸುತ್ತಿದ್ದ ಸಮುದಾಯದವರು. ಅರಣ್ಯವನ್ನು ಎಂದು ನಾಶ ಮಾಡುವವರಾಗಿರಲಿಲ್ಲ. ಅರಣ್ಯದ ಬಗ್ಗೆ ಅಪಾರ ನಂಬಿಕೆ, ಕಾಳಜಿ ವಹಿಸಿದ ಈ ಜನರು ಅರಣ್ಯವೇ ನಮ್ಮ ಸಂಪತ್ತು ಎಂದು ನಂಬಿ ಜೀವಿಸುತ್ತಿದ್ದರು. ಇತ್ತೀಚಿನ ಬದಲಾದ

ಪರಿಸ್ಥಿತಿಯಲ್ಲಿಯೂ ಸಹ ಅವರುಗಳ ವಾಸಸ್ಥಾನ ಅರಣ್ಯಗಳ ಸಮೀಪವೇ ಆದರೂ ಅರಣ್ಯ ಪ್ರವೇಶವಿಲ್ಲ. ಮುಕ್ತವಾಗಿದ್ದ ಅರಣ್ಯಕ್ಕೆ ಹಲವಾರು ನಿರ್ಬಂಧಗಳನ್ನು ಹಾಕಿದ್ದಾರೆ. ಕಾಲೋನಿಯ ಜನರಿಗೆ ಅರಣ್ಯದ ಅಧಿಕಾರಿಗಳು ಶಿಕ್ಷೆಯ ರೂಪದಲ್ಲಿ ಹಿಂಸೆ ಮಾಡುತ್ತಿರುವುದು, ಭೂತಾನಾಹಳ್ಳಿ ಹಕ್ಕಿಪಿಕ್ಕಿ ಕಾಲೋನಿಯಲ್ಲಿ ಕಂಡು ಬರುತ್ತದೆ. ಹೀಗೆ ಅರಣ್ಯವನ್ನೇ ಅವಲಂಬಿಸಿದ ಬದುಕು ಹಕ್ಕಿಪಿಕ್ಕಿಯರದು.

೩. ಭೂಮಿ

ವಿಶ್ವದ ವಿಸ್ಮಯಗಳಲ್ಲಿ ಭೂಮಿಯನ್ನು ಕುರಿತು ವಿಪುಲವಾದ ಐತಿಹ್ಯಗಳು ಪ್ರಚಲಿತವಾಗಿವೆ.ಅಂತೆಯೇ ಅದನ್ನು ಅರ್ಥೈಸುವ ಪ್ರಯತ್ನಗಳು ಬೇಕಾದಷ್ಟು ನಡೆದಿವೆ. ಪ್ರಾಚೀನ ಸಂಸ್ಕೃತಿಗಳಲ್ಲಿ ಭೂಮಿಯನ್ನು ವಿವಿಧ ದೃಷ್ಟಿಕೋನಗಳಿಂದ ನೋಡಲಾಗಿದೆ. ಸೃಷ್ಟಿಪುರಾಣಗಳು ಮತ್ತು ಧಾರ್ಮಿಕ ತಿಳುವಳಿಕೆ ರೂಪಗೊಂಡಿವೆ. ಹೀಗಾಗಿ ಭೂಮಿ ಎಂದರೆ ಒಂದು ಪಾರಂಪರಿಕ ಸಂಪನ್ಮೂಲ ಎಂದೇ ನಮಗೆ ಭಾಸವಾಗುತ್ತದೆ. ಇನ್ನು ಜನಪದ ಮತ್ತು ಬುಡಕಟ್ಟು ಸಮುದಾಯಗಳಲ್ಲಿ ಭೂಮಿಯ ಕಲ್ಪನೆಯೇ ಬೇರೆಯಾಗಿದೆ. ಭೂಮಿ ಆರ್ಥಿಕ ಭದ್ರತೆಯನ್ನು ಒದಗಿಸುವ ಗಣಿಯು ಸಹ ಆಗಿದೆ. ಬುಡಕಟ್ಟು ಸಮುದಾಯಗಳ ಸೃಷ್ಟಿ ಪುರಾಣಗಳನ್ನು ಗಮನಿಸುವಾಗ ಒಂದಲ್ಲ ಒಂದು ರೀತಿಯಲ್ಲಿ ತನ್ನ ಸೃಷ್ಟಿ ಪುರಾಣಗಳಲ್ಲಿ ಭೂಮಿಯ ಅವಲಂಬನೆ ಬುಡಕಟ್ಟು ಸಮುದಾಯಗಳಿಗೆ ಅಗತ್ಯ ಮತ್ತು ಅನಿವಾರ್ಯವೂ ಆಗಿದೆ.

ಆದಿವಾಸಿ ಬುಡಕಟ್ಟು ಸಮುದಾಯಗಳು ಭೂಮಿಯ ಸಂಬಂಧಗಳನ್ನ ತನ್ನ ಸೃಷ್ಟಿ ಪುರಾಣದ ಐತಿಹಾಸಿಕ ಮತ್ತು ಪೌರಾಣಿಕ ಕಥೆಗಳಲ್ಲೂ ಕಟ್ಟಿಕೊಂಡು ಬಂದಿವೆ. ಭೂಮಿಯು ಸಮುದಾಯದ ಒಟ್ಟು ಆಶಯಗಳನ್ನು ಪ್ರತಿನಿಧಿಸುತ್ತದೆ. ಅರಣ್ಯದಲ್ಲಿ ವಾಸಿಸುವ ಈ ಜನರು ಭೂಮಿಯನ್ನು ವಿಶೇಷವಾಗಿ ಪರಿಗಣಿಸುತ್ತಾರೆ. ಅರಣ್ಯವೆಂದರೆ ಭಗವಂತನ ಸ್ವರೂಪವೇ ಎಂದು ತಿಳಿದು, ಅದನ್ನು ದೇವರ ಸ್ವತ್ತು ಎಂದು ಅದರ ರಕ್ಷಣೆಗಾಗಿ ದುಡಿಯುತ್ತಿದ್ದರು. ಅರಣ್ಯದಲ್ಲಿನ ಇಂತಹ ಸಮುದಾಯಗಳು ಭೂಮಿಯನ್ನು ಕಾನೂನುಬದ್ಧ ಹಕ್ಕಾಗಿ ದೊರೆತ ಸಂಪನ್ಮೂಲ ಎಂದು ತಿಳಿದಿಲ್ಲ. ಭೂಮಿಯು ಸಕಲ ಸಂಪತ್ತನ್ನ ಹೊಂದಿರುವುದರಿಂದ ತಮ್ಮ ಉತ್ಪಾದನಾ ಚಟುವಟಿಕೆಗಳ ಕೇಂದ್ರವೆಂದೇ ಪರಿಗಣಿಸಿಕೊಂಡು ಜೀವಿಸುತ್ತಿದ್ದಾರೆ.

ಬೇಟೆಯ ಸಂಬಂಧ, ಕಾಡಿನ ಮೋಹಕತೆ ಈ ಎರಡು ಅಂಶಗಳು ಹಕ್ಕಿಪಿಕ್ಕಿ ಸಮುದಾಯದ ಪಾರಂಪರಿಕ ತಿಳುವಳಿಕೆ ರೂಪಗೊಳ್ಳಲು ಕಾರಣವಾಗಿವೆ. ದಟ್ಟವಾಗಿ ಹರಡಿದ್ದ ಅರಣ್ಯಗಳು ಭೂಮಿಯ ಮೇಲ್ಮೈ ಲಕ್ಷಣಗಳಲ್ಲಿ ಪ್ರಮುಖವಾಗಿದ್ದವು. ಬೆಟ್ಟ ಪ್ರದೇಶದ ಭೂಮಿಯಲ್ಲಿ ಬೇಸಾಯ ಮಾಡಿಕೊಂಡು ಹಂತ, ಹಂತದ ಬೆಳವಣಿಗೆಯನ್ನು ಕಾಣತೊಡಗಿದ್ದ ಸಮುದಾಯಗಳೇ ಜಗತ್ತಿನ ಎಲ್ಲಾ ಭೂ ಭಾಗದಲ್ಲಿನ ದಟ್ಟ ಕಾಡುಗಳನ್ನು ಆಶ್ರಯತಾಣವಾಗಿ ಹೊಂದಿದ್ದವು. ದಟ್ಟ ಮತ್ತು ಸಂಪದ್ಭರಿತ ಅರಣ್ಯ, ಫಲವತ್ತಾದ ಭೂಮಿ, ಸದಾಜಿನುಗುವ ತೊಳ್ಳೆಗಳು (ಕೊಳ್ಳಗಳು) ನದಿಗಳು ಪರಿಸರದ ಕೊಡುಗೆಗಳಾಗಿದ್ದವು

ಮತ್ತು ಸಾಮಾಜಿಕ ಜೀವನದಲ್ಲಿ ಸಾಮಾನ್ಯವಾಗಿದ್ದವು. 'ಸಾಮಾಜಿಕ ವ್ಯವಸ್ಥೆಯಲ್ಲಿ ಕೆಳಜಾತಿಯ ಮತ್ತು ಆದಿವಾಸಿ ಸಮುದಾಯಗಳೇ ಉತ್ಪಾದನಾ ವ್ಯವಸ್ಥೆಯಲ್ಲಿ ಪಾಲ್ಗೊಳ್ಳಬೇಕಿದ್ದರಿಂದ ಭೂಮಿಯ ಅಸಮಾನ ಹಂಚಿಕೆಯ ಪ್ರಶ್ನೆ ಅಂದು ಅಷ್ಟು ಗಂಭೀರವಾಗಿರಲಿಲ್ಲ.' [೩]

### ೪. ಹಕ್ಕಿಪಿಕ್ಕಿಯರು ಮತ್ತು ಭೂಮಿ ಸಂಬಂಧ

ಭಾರತದ ಮಟ್ಟಿಗೆ ಹೇಳುವುದಾದರೆ ಆದಿಮ ಸಮಾಜಗಳು ಕೃಷಿಯನ್ನು ನಂಬಿಕೊಂಡೇ ಬಂದಿವೆ. ಆದಿಕಾಲದಿಂದ ಆಧುನಿಕರಣದ ಹೊಸ ಜಗತ್ತಿನವರೆಗೂ ನಡೆದಿರುವ ಬದಲಾವಣೆಗಳಲ್ಲಿ ಈ ಭೂಮಿಯ ಮೇಲಿನ ವ್ಯಾಮೋಹಕ್ಕಾಗಿಯೇ ನಡೆದಿರುವ ಹೋರಾಟ ಕೈಗಾರಿಕೀಕರಣದ ಹೊರತಾಗಿಯೂ ಗಮನಿಸಬಹುದಾದ ಅಂಶವೇ ಸರಿ. ಆದಿಮಕಾಲದ ಸಾಮಜಿಕ ವ್ಯವಸ್ಥೆಯ ಕುಟುಂಬದ ಉದಯದಿಂದ ಪ್ರಾರಂಭಗೊಂಡು ಆಧುನಿಕ ಪ್ರಭುತ್ವಗಳು ಬೆಳೆದು ಇದರಿಂದ ರಾಜ್ಯದ ಕಲ್ಪನೆಯವರೆಗೂ ನಡೆಯುತ್ತಾ ಬಂದಿರುವ ಹೋರಾಟ ಭೂಮಿಯನ್ನು ಕೇಂದ್ರವಾಗಿಟ್ಟುಕೊಂಡು. ಶತಮಾನಗಳ ಕಾಲದ ಆಡಳಿತ ನಡೆಸಿದ ಹಲವಾರು ಸಾಮ್ರಾಜ್ಯಗಳು ಮತ್ತು ಆಧುನಿಕ ರಾಜ್ಯ ವ್ಯವಸ್ಥೆ ಇಂದಿಗೂ ಆದಾಯದ ಮೂಲವಾಗಿ ಭೂಮಿಯನ್ನು ಅವಲಂಬಿಸಿವೆ. ಸರಕಾರದ ವಾರ್ಷಿಕ ಆದಾಯದ ಬಾಬ್ತುಗಳಲ್ಲಿ ಕಂದಾಯ ಇಲಾಖೆಯನ್ನು ಪ್ರಾರಂಭಿಸಿ, ಭೂಮಿಯಿಂದ ಬರುವ ಆದಾಯವನ್ನು ಪ್ರತ್ಯೇಕವಾಗಿ ಪರಿಗಣಿಸುವ ಇಂದಿನ ಕಾಲದವರೆಗೂ ಭೂಮಿಯ ಮಹತ್ವ ಹೆಚ್ಚು ವ್ಯಾಪಿಸಿದೆ.

ಹಕ್ಕಿಪಿಕ್ಕಿಯರ ಸೃಷ್ಟಿ ಪುರಾಣವು ಸಹ ಭೂಮಿಯನ್ನು ಕೇಂದ್ರವಾಗಿಟ್ಟುಕೊಂಡಿವೆ.' ಮನುಷ್ಯನ ಹುಟ್ಟುನಿಂದಲೂ ನಾವಿದ್ದೇವೆ. ನಮ್ಮ ದೊಡ್ಡ ದೇವರಾದ ದಾದಾಜಿ ಜೀವವನ್ನು ಸೃಷ್ಟಿಸಿದ ಆ ಜೀವಕ್ಕೆ ನೆಲ ಇರಲಿ ಎಂದ. ಆ ಕಾಲದಲ್ಲಿ ಈ ಭೂಮಿಯನ್ನು ಒಂದು ಹೆಣ್ಣು ದೆವ್ವ ಆಳುತ್ತಿದ್ದಳು. ಆ ದೆವ್ವ ದೊಡ್ಡ ದೇವರಾದ ದಾದಾಜಿಗೆ ಈ ನೆಲವನ್ನು ಕೊಟ್ಟು ಜೀವಿಗಳೆಲ್ಲಾ ನಿನ್ನ ಅಂಕೆಯಲ್ಲಿರಲಿ(ಹಿಡಿತದಲ್ಲಿ). ಸತ್ತವರೆಲ್ಲಾ ನೆಲದೊಳಕ್ಕೆ ನನ್ನ ಅಂಕೆಗೆ ಬರಲಿ ಎಂದು ಹೇಳಿದಳು. ಈ ಒಪ್ಪಂದದ ಪ್ರಕಾರ ಆ ಹೆಣ್ಣು ದೆವ್ವವನ್ನು ತೃಪ್ತಿಪಡಿಸಲು ಸತ್ತ ಮನುಷ್ಯ ಮತ್ತು ಅವನ ವಸ್ತುಗಳನ್ನು ಭೂಮಿಯಲ್ಲಿ ಹೂಳುತ್ತಾರೆ. ಏಕೆಂದರೆ ಆ ದೆವ್ವಕ್ಕೆ ಸೇರಿದ ಆಸ್ತಿಯೆಂದು'[೪] ಹೀಗೆ ಸಮುದಾಯದ ಸೃಷ್ಟಿಪುರಾಣದಲ್ಲೇ ಭೂಮಿಯ ಸಂಬಂಧವನ್ನು ಹೊಂದಿರುವ ಹಕ್ಕಿಪಿಕ್ಕಿಯರು ಭೂಮಿ ಮತ್ತು ಮಣ್ಣಿನ ಕಲ್ಪನೆಯು ಮುಖ್ಯವಾಗಿದೆ. ಅವುಗಳ ಅವಲಂಬಿತ ಸಂಬಂಧವನ್ನು ಸೂಚಿಸುತ್ತದೆ.

ಆದಿಮಕಾಲದಿಂದಲೂ ಬುಡಕಟ್ಟು ಸಮುದಾಯವಾದ ಹಕ್ಕಿಪಿಕ್ಕಿಯರಲ್ಲಿ ಭೂಮಿ ಮತ್ತು ಆತ್ಮಗಳ ಅನುಸಂಧಾನದ ಮಟ್ಟದಲ್ಲಿ ದೈವದ ಕಲ್ಪನೆ ಮೂಡಿರುವುದು ಸಹಜವೇ. ಬುಡಕಟ್ಟು ಸಮುದಾಯದ ಆರಂಭಿಕ ಹಂತದಿಂದಲೇ ಭೂಮಿಯ ಕಲ್ಪನೆ ಮೂಡಿದೆ. ಇದು ವಿಶೇಷತೆಯೇನೂ ಅಲ್ಲ. ಮಾನವನ ಸೃಷ್ಟಿಯಿಂದಲೇ ಭೂಮಿ ಎನ್ನುವಂತಹುದು ಸಹ ಮುಖ್ಯ. ಹೀಗಾಗಿ ಭೂಮಿಯ ಅವಲಂಬನೆ ಸಾಕಷ್ಟು. ಜೀವನ ಮಾರ್ಗಕ್ಕೆ ಬೇಟೆಯೇ ಆಧಾರವಾಗಿದ್ದ ಸ್ಥಿತಿಯಲ್ಲಿಯೂ ಅವರುಗಳ ಮೂಲ ಕೇಂದ್ರ ಭೂಮಿ.

ಭೂಮಿಯ ಜಾಗದಲ್ಲಿ ಅರಣ್ಯ ಸಂಪತ್ತಿನ ಭಂಡಾರವನ್ನು ಪಡೆದಿದ್ದರಿಂದ ಅದನ್ನು ಅವಲಂಬಿಸಿಯೇ ದುಡಿಯುವವರಾಗಿದ್ದಾರೆ. ಭೂಮಿಯು ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಹಕ್ಕಿಪಿಕ್ಕಿಯರಿಗೆ ಬಹಳಷ್ಟು ಮಹತ್ವದ ಕೊಡುಗೆಯನ್ನೇ ನೀಡಿದೆ.

ಹಕ್ಕಿಪಿಕ್ಕಿಯರು ಪೂರ್ವದಲ್ಲಿ ಭೂಮಿಯನ್ನು ಅವಲಂಬಿಸಿದ ಜೀವನ ವಿಧಾನವೇ ಆದರೂ ಬಳಕೆ ಮಾತ್ರ ಇತ್ತೀಚಿನದು. ವ್ಯಾಪಾರಿ ಮನೋಭಾವದವರಾದ ಇವರು ಎಂದೂ ಭೂಮಿಯಲ್ಲಿ ದುಡಿದವರಲ್ಲ. ಏನಿದ್ದರೂ ದೊರೆಯುವ ವಿಶೇಷ ವಸ್ತುಗಳ ಮಾರಾಟದಿಂದ ವ್ಯಾಪಾರದ ಮನೋವೃತ್ತಿ ಬೆಳೆಸಿಕೊಂಡು ಬಂದಿದ್ದ ಸಮುದಾಯ. ತನ್ನ ಕಲ್ಪನೆಯಲ್ಲಿ ಭೂಮಿಯು ಇದ್ದರೂ ಸಹ ಅದನ್ನು ತನ್ನ ಉತ್ಪಾದನಾ ಅಂಗವೆಂದೇ ತಿಳಿದಿರಲಿಲ್ಲ. ಹೀಗಾಗಿ ಇವರುಗಳು ಭೂಮಿಯನ್ನು ವಾಸಿಸಲು ಬೇಕಾಗುವ ಪರಿಸ್ಥಿತಿಗೆ ಮಾತ್ರ ಬಳಸುತ್ತಿದ್ದರು. ಹೆಚ್ಚಾಗಿ ವಾಸಿಸುತ್ತಿದ್ದುದ್ದು ಅರಣ್ಯದಲ್ಲೇ ಆದರೂ ಗುಡ್ಡಗಾಡು ಹಳ್ಳಿಗಳಿಂದ ನಗರಗಳಿಂದ ದೂರ ಇರುವ ಸರಕಾರಿ ಭೂಮಿಯಲ್ಲಿಯೇ. ಹಕ್ಕಿಪಿಕ್ಕಿಯರು ಅಲೆಮಾರಿ ಹಂತದಲ್ಲಿದ್ದಾಗ ಅವರ ಬದುಕಿನ ದಾರಿ ಮತ್ತು ಜ್ಞಾನವಾಗಲಿ, ರೀತಿ ನೀತಿಗಳಾಗಲಿ, ನಿಯಮ, ಶಿಸ್ತು ಯಾವುದೂ ಇರಲಿಲ್ಲ. ಬದುಕು ಅಭದ್ರತೆಯಿಂದ ಕೂಡಿತ್ತು. ಭದ್ರತೆಗಾಗಿ ಭೂಮಿಯ ಆಶ್ರಯ ಪಡೆದು ಪ್ರಕೃತಿಯನ್ನು ಅವಲಂಬಿಸಿ, ಪ್ರಕೃತಿಯ ಉತ್ಪನ್ನವನ್ನು ಕಚ್ಚಾರೀತಿಯಲ್ಲಿ ಸ್ವೀಕರಿಸಲು ತೊಡಗಿದ ಹಕ್ಕಿಪಿಕ್ಕಿಯರ ಜೀವನಕ್ಕೆ ಮೂಲಸಾಮಾಗ್ರಿ ಒದಗಿಸುವ ತಾಣವೆಂದೇ ಗುರುತಿಸಿಕೊಂಡಿದ್ದರು. ಇಂದು ಭೂಮಿಯು ಹಕ್ಕಿಪಿಕ್ಕಿಯರಿಗೆ ವಿಶೇಷವಾಗಿ ಜೀವಿಸಲು ಬೇಕಾದ ಸೌಲಭ್ಯಗಳನ್ನು ಒದಗಿಸುತ್ತಿದೆ. ಭೂಮಿಯಿಂದಲೇ ವ್ಯವಸಾಯಗಾರರಾಗಿ ದುಡಿದ ಇವರುಗಳು ತಮ್ಮ ಬದುಕಿನ ವ್ಯವಸ್ಥೆಯಲ್ಲಿ ಪ್ರಧಾನವಾದ ಅಂಗವಾಗಿ ಪರಿವರ್ತಿಸಿಕೊಂಡಿದ್ದಾರೆ. ಇದು ಬದಲಾದ ಸಾಮಾಜಿಕ ಆರ್ಥಿಕ ವ್ಯವಸ್ಥೆಯನ್ನು ರೂಢಿಸಿಕೊಂಡಿರುವ ಹಕ್ಕಿಪಿಕ್ಕಿಯರಲ್ಲಿ ಕಾಣಬಹುದಾಗಿದೆ.

## ೫. ಭೂ ಹಿಡುವಳಿ ಮತ್ತು ಹಕ್ಕಿಪಿಕ್ಕಿಯರು

ಪ್ರಾಚೀನ ಕಾಲದಿಂದಲೂ ಭಾರತೀಯ ಸಮಾಜದಲ್ಲಿ ಭೂ ಒಡೆತನ ಹೊಂದಿದ ಸಮುದಾಯಗಳು ಭೂ ಒಡೆತನ ಹೊಂದದ ಇತರ ಸಮುದಾಯಗಳನ್ನು ಯಾವಾಗಲೂ ಅವಲಂಬಿಸಿಕೊಂಡು ಬಂದಿರುವುದು ಕಂಡುಬರುತ್ತದೆ. ಖಾಸಗೀ ಆಸ್ತಿ ರೂಪಗೊಂಡ ಕಾಲದಿಂದಲೂ ಸಹ ಇದನ್ನು ಗಮನಿಸಬಹುದು. ಸ್ವಾತಂತ್ರ್ಯದ ನಂತರ ಭಾರತದಲ್ಲಿ ಹೊಸ, ಹೊಸ ಆಶೋತ್ತರಗಳು ಬೆಳಕಿಗೆ ಬಂದವು. ಸರಕಾರಗಳು ಪ್ರಾರಂಭಗೊಂಡವು. ರಾಜಕೀಯ ಪ್ರಾಬಲ್ಯತೆ ಬೆಳೆಯಿತು. ಇವರಿಂದ ಸರಕಾರದ ಕಾರ್ಯಗಳೂ ಹೆಚ್ಚಾಗುತ್ತಾ ಬಂದವು. ನಂತರ ದಿನಗಳಲ್ಲಿ ಸರಕಾರಗಳು ಭೂ ಸುಧಾರಣೆಗಳ ಬಗ್ಗೆ ವಿಶೇಷವಾದ ಕಾಯಿದೆ ಕಾನೂನುಗಳನ್ನು ಜಾರಿಗೆ ತಂದರು. ಅಭಿವೃದ್ಧಿಯ ಕಾರ್ಯಗಳು ಬೆಳೆಯ ತೊಡಗಿದವು. ಹೀಗೆ ರೂಪಿತವಾದ ಸರಕಾರಗಳು ಮಾನವನ ಕಲ್ಯಾಣ ಕಾರ್ಯಕ್ರಮದತ್ತ ಗಮನಹರಿಸುತ್ತಿರುವುದು ಮುಖ್ಯವಾಗಿತ್ತು. ಇದರಿಂದ ಶೋಷಿತ ವರ್ಗದಲ್ಲಿ ನಿಂತ ಬುಡಕಟ್ಟು ಸಮುದಾಯಗಳನ್ನು ಗುರುತಿಸಿ ಯೋಜನೆಗಳು ಸಹ

ರೂಪಿತಗೊಂಡವು. ಹೀಗೆ ರೂಪುಗೊಂಡ ಹೊಸ ಬದಲಾವಣೆಯು ಬುಡಕಟ್ಟು ಸಮುದಾಯಗಳ ಉತ್ಪಾದನಾ ವಿಧಾನವನ್ನು ಬದಲಾಯಿಸಿ ಮುಖ್ಯವಾಹಿನಿಗೆ ತಂದು ನಾಗರಿಕರಂತೆ ಜೀವಿಸಲು ಸಕಲ ಸೌಲಭ್ಯಗಳನ್ನು ದೊರಕಿಸಿ ಕೊಡುವ ಭರವಸೆಯನ್ನು ನೀಡಿದ ಸರಕಾರ ನಂತರ, ಪರ್ಯಾಯವಾಗಿ ಉತ್ಪಾದನಾ ವಿಧಾನವನ್ನೇ ರೂಪಿಸಬೇಕಾದ ಪರಿಣಾಮವಾಗಿ ಭೂಮಿಯನ್ನು ಬುಡಕಟ್ಟು ಸಮುದಾಯಗಳಿಗೆ ಹಂಚಿತು. ಇದರಿಂದಾಗಿ ಹಕ್ಕಿಪಿಕ್ಕಿ ಸಮುದಾಯ ವ್ಯವಸಾಯದ ಬಗ್ಗೆ ವಿಶೇಷ ತಿಳುವಳಿಕೆ ಮೂಡುವಂತಾಯಿತು. ನಾಗರಿಕತೆಯ ಮುಖ್ಯಧಾರೆಗೆ ತರುವ ಪ್ರಯತ್ನದಲ್ಲಿ ಅಂದಿನ ಸರಕಾರಗಳು ಕೈಗೊಂಡ ಕ್ರಮಗಳು ಹಕ್ಕಿಪಿಕ್ಕಿಯರನ್ನು ಭೂ ಹಿಡುವಳಿದಾರರನ್ನಾಗಿ ಮಾಡಿತ್ತು.

ಅಲೆಮಾರಿಗಳಾದ ಹಕ್ಕಿಪಿಕ್ಕಿಯರು ಸರಕಾರದ ಭೂಮಿಯನ್ನು ಪಡೆದ ನಂತರ, ಇಲ್ಲಿನ ಪ್ರತಿ ಕುಟುಂಬವು ಸಹ ಕಾನೂನುಬದ್ಧ ಭೂಹಿಡುವಳಿ ಪಡೆಯುವಂತಾಯಿತು. ಅದುವರೆಗೂ ಅವರುಗಳಿಗೆ ಭೂಮಿ ಕಾನೂನು ಬದ್ಧ ಹಕ್ಕು ಎಂದು ಅನ್ನಿಸಿರಲಿಲ್ಲ. ಭೂಹಿಡುವಳಿ ಎಂದಾಗ ಪ್ರತಿಯೊಂದು ಕುಟುಂಬದ ಸದಸ್ಯರು ತನ್ನ ಭೂಮಿಯಲ್ಲಿ ಅಥವಾ ಸ್ಥಳದಲ್ಲಿ ಸಾಗುವಳಿ ಮಾಡಲೇಬೇಕಾಗಿತ್ತು. ಹೀಗೆ ಸಾಗುವಳಿ ಮಾಡುವ ಕ್ಷೇತ್ರವನ್ನು ಭೂಹಿಡುವಳಿಗಳಾಗಿ ಮಾಡಲೇಬೇಕಾಯಿತು. ಭೂಮಿ ಹಂಚಿಕೆಯಿಂದ ಅಲೆಮಾರಿತನ ಕಡಿಮೆಯಾದರೂ ಉತ್ಪಾದನೆ  ನಿರೀಕ್ಷಿಸಿದಂತೆ ನಡೆಯಲಿಲ್ಲ. ಆದರೆ ಭೂಹಿಡುವಳಿ ಹಕ್ಕಿಪಿಕ್ಕಿಯರನ್ನು ಭೂಮಿಯ ಒಡೆತನವನ್ನು ಕಲ್ಪಿಸಿತ್ತು. ಅದರಿಂದ ಹೆಚ್ಚಿನ ಸ್ಥಾನಮಾನಗಳು ಬದಲಾಗಲಿಲ್ಲ. ಭೂಮಿಯ ಮಾಲಿಕತ್ವದ ತತ್ ಸಂಬಂಧಿ ಅಧಿಕಾರ ಮಾತ್ರ ದೊರೆಯಿತು. ಸಾಗುವಳಿ ಪ್ರತ್ಯೇಕವಾದ ಪಾಣಿ, ಪಟ್ಟ, ರಶೀದಿಗಳ ಮಾಲೀಕತ್ವದ ಫಲ ಇನ್ನು ಸಮುದಾಯವನ್ನು ತಲುಪಿಲ್ಲ.

ಭೂಹಿಡುವಳಿಯು ಒಂದೆಡೆ ಸ್ಥಿರವಾಗಿ ನೆಲೆನಿಲ್ಲಲು ಕಾರಣವಾದರೆ, ಭೂಮಿಯಿಂದ ತೊಂದರೆಗಳು ಮಾತ್ರ ತಪ್ಪಿಲ್ಲ. ಬ್ರಿಟಿಷರ ಕಾಲದಂತೆ ಭೂಸುಧಾರಣೆ ಮತ್ತು ಕಂದಾಯ ಪದ್ದತಿಗಳು ಇಂದಿಗೂ ಸಹ ಹಕ್ಕಿಪಿಕ್ಕಿಯರಿಗೆ ಅನುಕೂಲವಾದ ವಾತಾವರಣವನ್ನು ಸೃಷ್ಟಿಸಿಲ್ಲ. ಆದಿಮಕಾಲದಲ್ಲಿ ಅರಣ್ಯದಲ್ಲಿ ಒಕ್ಕಲೆಬ್ಬಿಸಿದ ರೀತಿಯಲ್ಲಿಯೇ ಶೋಷಿಸುತ್ತಿರುವುದು ಸಾಮಾನ್ಯ ಸಂಗತಿಯಾಗಿದೆ. ಈ ಬದಲಾದ ವ್ಯವಸ್ಥೆಯಿಂದಲೇ ಹಕ್ಕಿಪಿಕ್ಕಿಯರು ಹೊಸ ಕನಸುಗಳನ್ನು ಕಟ್ಟಿಕೊಂಡಿದ್ದರು. ಹೀಗಾಗಿ ಹಕ್ಕಿಪಿಕ್ಕಿಯರಿಗೆ ಭೂಹಿಡುವಳಿ ಒಂದು ರೀತಿ ಅಲ್ಪಾವಧಿಯ ಅನುಕೂಲವನ್ನು ಕಲ್ಪಿಸಿ ನಂತರ ದೀರ್ಘಾವಧಿಯ ಕಷ್ಟಗಳನ್ನು ತಂದೊಡ್ಡಿದೆ.

ದಿವಂಗತ ರಾಚಯ್ಯ, ಅರಸು, ಬಸವಲಿಂಗಪ್ಪನವರು ಸಾಗುವಳಿ ಪತ್ರ ಕೊಡಲು ಅಂದಿನ ದಿನಗಳಲ್ಲಿ ಹಕ್ಕಿಪಿಕ್ಕಿ ಕಾಲೋನಿಗೆ ಬಂದಿದ್ದರೂ, ಆ ಸಮುದಾಯದಲ್ಲಿ ಕಾಲೋನಿಯ ಜನರು ವಿದ್ಯಾವಂತರಿಲ್ಲದೆ ಯಾರು ಮುಂದೆ ಬರದ ಕಾರಣ ಇವರ  ಸಾಗುವಳಿ ತಪ್ಪಿಹೋಯಿತು. ಸ್ವಯಂ ಸೇವಾ ಸಂಸ್ಥೆಯಾದ ವಿದೇಶಿ ಮಹಿಳಾ ಸ್ಕೀಂನವರು ಕಾಲೋನಿಯನ್ನು ೫ ವರ್ಷಗಳವರೆಗೆ ಅಭಿವೃದ್ಧಿ ಪಡಿಸಲು ಗುತ್ತಿಗೆ ಪಡೆದದ್ದು, ಇನ್ನೊಂದು ಕಾರಣವಾಗಿತ್ತು. ಮಹಿಳಾ ಸ್ಕೀಂನವರು ವ್ಯವಸಾಯದಲ್ಲಿ ಪರಿಣಿತರಾಗುವಂತೆ

ಅವರುಗಳಿಗೆ ಭೂಮಿಯ ಮೇಲಿನ ವ್ಯಾಮೋಹ ಹೆಚ್ಚುವಂತೆ ಮಾಡಿದರು. ಇದರಿಂದ ಪ್ರತಿ ಕುಟುಂಬವು ನಿರ್ಧಿಷ್ಟವಾಗಿ ಭೂಹಿಡುವಳಿಯನ್ನು ಆರ್ಥಿಕ ಹಿಡುವಳಿಗಳಾಗಿ ಮಾರ್ಪಡಿಸಿ ಕೊಳ್ಳಲು ಸಹಾಯಕವಾಗಿತ್ತು.

ವರ್ತಮಾನದಲ್ಲಿ ಹಕ್ಕಿಪಿಕ್ಕಿಯರ ಭೂಹಿಡುವಳಿಗಳು ಪ್ರತಿಕುಟುಂಬಕ್ಕೆ ೩ ಎಕರೆ ಎಂದು ಘೋಷಿಸಿರುವುದು ಮಾತ್ರ ಯಾವುದೇ ವಿಧವಾದ ಸರ್ವೆ, ಅಳತೆ ಮಾಡಿ ನೀಡಿದ್ದಲ್ಲ. ಕಂದಾಯ ಇಲಾಖೆಯಿಂದಲೂ ಪರಿಶೀಲನೆ ಸಹ ನಡೆದಿಲ್ಲ. ಒಟ್ಟು ಪ್ರದೇಶದಲ್ಲಿ ೩೫೦ ಎಕರೆ ಭೂಮಿ ಎಂದು ಅಧಿಸೂಚನೆಯಲ್ಲಿದೆ. ಪ್ರಸ್ತುತದಲ್ಲಿ ೧೦೨ ಕುಟುಂಬಗಳು ಕಾಲೋನಿಯಲ್ಲಿ ಕಂಡು ಬರುತ್ತವೆ. ಪ್ರತಿಕುಟುಂಬವು ಮೂರು ಎಕರೆ ಎಂದು ಅವರುಗಳೇ ಹಂಚಿಕೊಂಡು ವ್ಯವಸಾಯ ಮಾಡುತ್ತಿದ್ದಾರೆ. ೨೪೬ ಎಕರೆಯಲ್ಲಿ ಕೃಷಿ ಚಟುವಟಿಕೆ ನಡೆಯುತ್ತಿದೆ. ಉಳಿದ ಪ್ರದೇಶದಲ್ಲಿ ಕಾಲೋನಿಯನ್ನು ನಿರ್ಮಿಸಿಕೊಂಡಿರುವುದು ಕಾಣಬಹುದು. ಹೀಗಾಗಿ ಹಕ್ಕಿಪಿಕ್ಕಿಯರ ಬಳಿ ಭೂಮಿಯ ಬಗ್ಗೆ ಯಾವುದೇ ಕಾನೂನು ಬದ್ಧ ಆಧಾರಗಳು ಇಲ್ಲದಿದ್ದರೂ ಸರಕಾರ ನೀಡಿರುವ ಅಧಿಸೂಚನೆ ಮತ್ತು ಪಟ್ಟ ಮಾತ್ರ ಹೊಂದಿರುವವರು. ಭೂಮಿಯ ಸಾಗುವಳಿ ಪತ್ರಕ್ಕೆ ಪ್ರತಿಕುಟುಂಬವು ಸಹ ಕಾತುರದಿಂದ ಕಾಯುತ್ತಿದೆ.

ಹಕ್ಕಿಪಿಕ್ಕಿಯರ ಭೂಮಿಯು ಸಣ್ಣ ಪ್ರಮಾಣದಲ್ಲಿದೆ, ನೀರಾವರಿ ಸೌಲಭ್ಯಗಳಿಲ್ಲ. ಖುಷ್ಕಿ ಬೇಸಾಯವನ್ನು ಮಾತ್ರ ಮಾಡುವವರಾಗಿದ್ದಾರೆ. ಈ ಭೂಮಿಯಲ್ಲಿ ಪ್ರಮುಖ ವಾಣಿಜ್ಯ ಬೆಳೆಗಳನ್ನು ಬೆಳೆದಿದ್ದನ್ನು ಹಕ್ಕಿಪಿಕ್ಕಿಯರು ನೆನೆಯುತ್ತಾರೆ. ಮಹಿಳಾ ಸ್ಕೀಂನಿಂದ ವ್ಯವಸಾಯದ ಮಾರ್ಗದರ್ಶನ ಪಡೆದ ನಂತರದ ದಿನಗಳಲ್ಲಿ ಉತ್ತಮ ವ್ಯವಸಾಯಗಾರರಾಗಿ ದುಡಿದಿದ್ದು ಮೆಲಕು ಹಾಕುತ್ತಾರೆ. ಭೂಮಿಯನ್ನು ಸರಕಾರದಿಂದ ನೇರವಾಗಿ ಪಡೆದಿದ್ದು ಅದರ ಸ್ವಾಮಿತ್ವದ ಹಕ್ಕು ಪಡೆಯದೇ ಇರುವುದು ವಿಪರ್ಯಾಸವೇ ಸರಿ. ಸಾಗುವಳಿ ಇಲ್ಲದೆ ಇರುವುದರಿಂದ ಕಂದಾಯವನ್ನು ಸಹ ಅಧಿಕಾರಿಗಳು ಕಟ್ಟಿಸಿಕೊಳ್ಳುವುದಿಲ್ಲ. ಹಕ್ಕಿಪಿಕ್ಕಿಯರು ನೆಪಮಾತ್ರಕ್ಕೆ ಭೂಮಿಯ ಮಾಲಿಕರಾಗಿದ್ದಾರೆ. ಸರಕಾರದಿಂದ ಯಾವುದೇ ಸೌಲಭ್ಯಗಳು ಪಡೆಯಬೇಕಾದರೂ ಸಹ ಸಾಗುವಳಿ ಮುಖ್ಯವಾಗಿದೆ. ಇತ್ತೀಚಿನ ದಿನಗಳಲ್ಲಿ ಯಾವುದೇ ಸೌಲಭ್ಯಗಳೂ ಕಾಲೋನಿಯ ಕಡೆ ಮುಖ ಸಹ ಮಾಡಿದಂತಿಲ್ಲ. ಸಾಗುವಳಿಯನ್ನು ಕೇಳುತ್ತಿರುವುದು ಇತ್ತೀಚಿನ ಕಾಲೋನಿಯ ಜನರ ಬದಲಾವಣೆಯಾದರೂ, ಅದಕ್ಕೆ ಅರಣ್ಯದ ಅಧಿಕಾರಿಗಳು ಅಡ್ಡಿಪಡಿಸುತ್ತಿದ್ದಾರೆ. ಅರಣ್ಯದ ಸಮೀಪವೇ ಇರುವ ಈ ಭೂಮಿಯನ್ನು ಅರಣ್ಯದವರು ಆಕ್ರಮಿಸಿಕೊಂಡಿರುವುದು ಕಾಣಬಹುದಾಗಿದೆ. ದಿನನಿತ್ಯಲೂ ಅರಣ್ಯದ ಅಧಿಕಾರಿಗಳು ಹಕ್ಕಿಪಿಕ್ಕಿಯರನ್ನು ಬೇರೆಕಡೆಗೆ ಹೋಗುವಂತೆ ಹೇಳುತ್ತಿರುವುದರಿಂದ ಕಾಲೋನಿಯ ಜನರ ಆತಂಕಕ್ಕೆ ಕಾರಣವಾಗಿದೆ. ಹಕ್ಕಿಪಿಕ್ಕಿಯರ ಅನೇಕ ಜಮೀನುಗಳನ್ನು ಅರಣ್ಯ ಇಲಾಖೆಯವರು ವಿದ್ಯುತ್ ಬೇಲಿ ಕಟ್ಟಿಕೊಂಡು ಅರಣ್ಯಕ್ಕೆ ಸೇರಿಸಿಕೊಂಡಿದ್ದಾರೆ. ಸರ್ವೆ ಅಧಿಕಾರಿಗಳು ಹಕ್ಕಿಪಿಕ್ಕಿ ಕಾಲೋನಿಯನ್ನು ಸರ್ವೆ ಮಾಡಿ ೩೫೦ ಎಕರೆ ಭೂಮಿಯನ್ನು ಗುರುತಿಸಿ ಕೊಟ್ಟಲ್ಲಿ ಅವರಿಗೆ ಅನುಕೂಲವಾಗುತ್ತದೆ. ಈ ನಿಟ್ಟಿನಲ್ಲಿ ಸರ್ವೆ ಅಧಿಕಾರಿಗಳು ಕಂದಾಯ ಅಧಿಕಾರಿಗಳು ಮಾರ್ಗದರ್ಶನ ನೀಡಬೇಕಿದೆ.

## ೬.ಭೂಹಿಡುವಳಿ ಮತ್ತು ಆರ್ಥಿಕತೆ

ಕಾಲೋನಿಯ ಸುತ್ತಲ ಭೂಮಿ ವ್ಯವಸಾಯ ಯೋಗ್ಯ ಭೂಮಿಯಲ್ಲ. ಈ ಭೂಮಿಯು ಖುಷ್ಕಿ ಭೂಮಿಯಾಗಿ ಮಾತ್ರ ಕಾಣಬರುತ್ತದೆ. ದಟ್ಟವಾದ ಮತ್ತು ಕಡಿದಾದ ಬೆಟ್ಟಗುಡ್ಡಗಳು ಸಾಮಾನ್ಯವಾಗಿವೆ. ಜಮೀನುಗಳಲ್ಲಿ ಸಣ್ಣ ಕಲ್ಲುಗಳ ರಾಶಿಯು ಸಹ ಕಂಡು ಬರುತ್ತದೆ. ಇದರಿಂದ ಭೂಮಿಯಲ್ಲಿ ಉಳುಮೆ ಮಾಡಲು ಸಹ ತೊಂದರೆ ಕಾಣಬಹುದು. ಕೈಗಾರಿಕರಣದ ಪ್ರಭಾವ ಹೆಚ್ಚಾಗುತ್ತಾ ಇರುವ ಸಂದರ್ಭದಲ್ಲಿ ಸುತ್ತಲಿನ ಭೂಮಿಯನ್ನು ಅನೇಕ ಪ್ಲಾಂಟರುಗಳು ಪಡೆದು ಫಾರ್ಮ್‌ಹೌಸ್‌ಗಳನ್ನು ನಿರ್ಮಿಸಿರುವುದು ಕಂಡುಬರುತ್ತದೆ. ಹಾಗೆಯೇ ಹಕ್ಕಿಪಿಕ್ಕಿಯರ ಜಮೀನುಗಳನ್ನು ಅನೇಕ ಭೂಮಾಲಿಕರು ಒತ್ತುವರಿ ಮಾಡಿಕೊಳ್ಳುತ್ತಲೇ ಇದ್ದಾರೆ. ಇಲ್ಲಿನ ಬೆಟ್ಟಗಳಲ್ಲಿ ಗ್ರಾನೇಟ್ ಸಿಕ್ಕುವುದರಿಂದ ಅನೇಕ ಶ್ರೀಮಂತರು ಮತ್ತು ಸರಕಾರಿ ಅಧಿಕಾರಿಗಳ ನೇರ ನೋಟ ಈ ಪ್ರದೇಶದ ಮೇಲೆ ಕೇಂದ್ರೀಕೃತವಾಗಿದೆ. ಇದರಿಂದ ಹಕ್ಕಿಪಿಕ್ಕಿಯರ ಭೂಮಿಯನ್ನು ಕಬಳಿಸಲು ಅನೇಕ ಹುನ್ನಾರಗಳು ನಡೆಯುತ್ತಲಿವೆ.

ಭೂಮಿಯನ್ನೇ ಮುಖ್ಯ ಜೀವನಾಧರವೆಂದು ನಂಬಿದ್ದರೂ ಸಹ, ಇವರ ದಿನ ನಿತ್ಯದ ಪಡಿಪಾಟಲುಗಳನ್ನು ನಿವಾರಿಸಿಲ್ಲ. ಕೃಷಿಯಿಂದ ಸಿಗುವ ವರಮಾನದಿಂದ ಕನಿಷ್ಟ ಅವಶ್ಯಕತೆಗಳನ್ನೂ ಇವರಿಗೆ ಪೂರೈಸಿಕೊಳ್ಳಲಾಗುತ್ತಿಲ್ಲ. 'ಆರ್ಥಿಕತೆಯಲ್ಲಿ ಭೂಹಿಡುವಳಿ ಕೆಲವು ಅಂಶಗಳನ್ನು ಸಹ ನಿರ್ಣಯಿಸುವುದು. ಮಣ್ಣಿನ ಸ್ವಭಾವ, ಗುಣಮಟ್ಟ, ವ್ಯವಸಾಯ ಕ್ರಮ, ಬೆಳೆಗಳ ಸ್ವರೂಪ, ಭೌತಿಕ ಲಕ್ಷಣಗಳು, ಹವಾಮಾನ ಪರಿಸ್ಥಿತಿ, ನೀರಾವರಿ ಸೌಲಭ್ಯ, ಕುಟುಂಬ ಗಾತ್ರ'[೫] ಈ ಇಲ್ಲವುಗಳಿಂದ ಆರ್ಥಿಕ ಸ್ಥಿತಿಗತಿ ಇನ್ನೂ ಉತ್ತಮಗೊಂಡಿಲ್ಲವೆಂದೇ ಹೇಳಬೇಕಾಗುತ್ತದೆ.

ಕೆಲವರು ತಮ್ಮ ಜಮೀನುಗಳನ್ನು ಆಗಲೇ ಮಾರಾಟ ಮಾಡಿಕೊಂಡಿದ್ದಾರೆ. ಕಾಲೋನಿಯ ಸುತ್ತಲೂ ಅಲ್ಪಸ್ವಲ್ಪ ಭೂಮಿಯಲ್ಲಿ ವ್ಯವಸಾಯಗಾರರು ವ್ಯವಸಾಯ ಮಾಡುತ್ತಲಿದ್ದಾರೆ. ಕಾಲೋನಿಯ ಜನರು ೧೯೬೨ ರಿಂದ ೧೯೮೪ ರವರೆಗೆ ವ್ಯವಸಾಯ ಮಾಡಿಕೊಂಡು ಹಳ್ಳಿಯ ರೈತರಂತೆ ತಮ್ಮ ಜೀವನ ವಿಧಾನ ರೂಢಿಸಿಕೊಂಡಿದ್ದರು. ಜೊತೆಗೆ ತನ್ನ ಆರ್ಥಿಕ ಸ್ಥಿತಿಯನ್ನು ಸಹ ಉತ್ತಮ ಮಟ್ಟದಲ್ಲಿ ನಡೆಸುತ್ತಿದ್ದರು. ಸುತ್ತಲಿನ ಪರಿಸರದಂತೆ ಬೆಳೆಯುತ್ತಿದ್ದ ಆಹಾರ ಧಾನ್ಯಗಳು ಇವರುಗಳನ್ನು ಶ್ರೀಮಂತ ಜೀವನ ಸಾಗಿಸುವಂತೆ ಮಾಡಿತ್ತು. ಕಾಲೋನಿ ಪ್ರಾರಂಭವಾದ ಹಂತದಲ್ಲಿ ಭೂಮಿಯನ್ನು ಸಾಗುವಳಿ ಮಾಡುವಲ್ಲಿ ಬಹಳ ಶ್ರಮದಾಯಕ ಕೆಲಸ ಮಾಡಿದವರೆಂದರೆ ವಿದೇಶಿ ಮಹಿಳಾ ಸ್ಕೀಂನವರು. ಐದು ವರ್ಷಗಳ ಕಾಲ ಕಾಲೋನಿಯನ್ನು ಗುತ್ತಿಗೆ ಪಡೆದು ಉತ್ತಮ ರೀತಿಯ ಉತ್ಪಾದನಾ ವಿಧಾನವನ್ನು ರೂಪಿಸಿಕೊಳ್ಳುವಂತೆ ಮಾಡಿದರು. ವ್ಯವಸಾಯದಲ್ಲಿ ಹಕ್ಕಿಪಿಕ್ಕಿಯರು ಪಾಲ್ಗೊಂಡು ಅದನ್ನು ರೂಢಿಸಿಕೊಳ್ಳುವಂತೆ ಮಾಡಿದ್ದರು. ಜೊತೆಗೆ ಹಲವಾರು ಸೌಲಭ್ಯಗಳನ್ನು ಕಾಲೋನಿಗೆ ಒದಗಿಸಿಕೊಟ್ಟರು. ಮಹಿಳಾ ಸ್ಕೀಂ ವತಿಯಿಂದ ಕಾಲೋನಿಯಲ್ಲಿ ೧೨ ಬೋರ್‌ವೆಲ್ (ನಲ್ಲಿ)ಗಳನ್ನು ಹಾಕಿಸಿದರು. ಯಾವುದರಲ್ಲೂ ನೀರು ಸಿಗಲಿಲ್ಲ. ನಂತರದ ದಿನಗಳಲ್ಲಿ ದೊಡ್ಡಯ್ಯನ ಕೆರೆಯನ್ನು ನಿರ್ಮಿಸಿದರು. ಬೆಟ್ಟದಿಂದ ಇಳಿದು ಬರುವ ನೀರನ್ನು

ಶೇಖರಿಸಿ ವ್ಯವಸಾಯಕ್ಕೆ ಯೋಗ್ಯವಾಗುವಂತೆ ಮಾಡಿದರು. ಈ ಕರೆಯಿಂದ ೧೦ ಹೆಚ್ .ಪಿ. ಮೋಟಾರು ತಂದು ವ್ಯವಸಾಯಕ್ಕೆ ನೀರು ಪೂರೈಕೆಯಾಗುವಂತೆ ಮಾಡಿದರು. ಇದರಿಂದ ಅನೇಕ ಬೆಳೆಗಳನ್ನು ಬೆಳೆಯತೊಡಗಿದರು. ಅವುಗಳಲ್ಲಿ ಪ್ರಮುಖವಾಗಿ ಸೂರ್ಯಕಾಂತಿ, ಮೆಣಸಿನಕಾಯಿ, ಆಲೂಗಡ್ಡೆ, ಕುಂಬಳಕಾಯಿ, ಮುಸಕಿನಜೋಳ, ರಾಗಿ, ಅವರೆ ಇತ್ಯಾದಿಗಳು. ಈ ಬೆಳೆಗಳನ್ನು ಬೆಳೆಯುತ್ತಿದ್ದ ಸಂದರ್ಭದಲ್ಲಿ ಅಂಗಡಿಗಳಿಂದ ಉಪ್ಪು ಮತ್ತು ಈರುಳ್ಳಿ ಮಾತ್ರ ತರುತಿದ್ದದ್ದು ನೆನೆಯುತ್ತಾರೆ. ಐದು ವರ್ಷಗಳ ಕಾಲ ಜೊತೆಯಲ್ಲಿಯೇ ವ್ಯವಸಾಯ ಮಾಡಿದ ಮಹಿಳಾ ಸ್ಕೀಂ ನವರು ಕಾಲೋನಿಯ ಜನರನ್ನು ವ್ಯವಸಾಯದಿಂದ ಜೀವನ ಸರಿದೂಗಿಸುವ ಹಂತಕ್ಕೆ ತಂದರು. ಸ್ವಯಂ ಸೇವಾ ಸಂಘದ ವತಿಯಿಂದ ಮತ್ತು ಸರಕಾರದ ವತಿಯಿಂದ ಹಲವು ಸೌಲಭ್ಯಗಳು ದೊರೆಯುವಂತೆ ಮಾಡಿದರು. ನೇಗಿಲು, ಎತ್ತುಗಳು, ಹಸುಗಳು, ಗೊಬ್ಬರ, ಬೀಜಗಳು ಎಲ್ಲವನ್ನು ಸುಮಾರು ವರ್ಷ ದೊರಕಿಸಿಕೊಟ್ಟರು. ಇದರಿಂದ ಹಕ್ಕಿಪಿಕ್ಕಿಯರು ವಿಶೇಷವಾಗಿ ಭೂಹಿಡುವಳಿಯಿಂದ ಆರ್ಥಿಕ ವ್ಯವಸ್ಥೆಯನ್ನು ಗಟ್ಟಿಗೊಳಿಸಿಕೊಂಡಿದ್ದರು.

ಭೂಮಿಯನ್ನು ನಂಬಿ ಸುಮಾರು ೩೦ ವರ್ಷಗಳ ಕಾಲ ವ್ಯವಸಾಯದಿಂದಾಗಿಯೇ ನೆಲೆ ನಿಲ್ಲುವಂತಾಗಿದೆ ಎನ್ನುತ್ತಾರೆ. ಇವರಿಗೆ ದೊರೆತ ಭೂಮಿ ಗಾತ್ರದಲ್ಲಿ ಅಲ್ಪ. ಆದ್ದರಿಂದ ಇವರುಗಳ ವ್ಯವಸಾಯ ಕ್ರಮಗಳು ಮತ್ತು ಪ್ರಮಾಣ ತೀರಾ ಕೆಳಮಟ್ಟದಲ್ಲಿವೆ. ಫಲವತ್ತಲ್ಲದ ಭೂಮಿಯಾದ್ದರಿಂದ ಉತ್ಪನ್ನವು ಕಡಿಮೆ ಇದೆ. ಡಾ. ಮನ್ ರ ಪ್ರಕಾರ ' ಸಾಮಾನ್ಯ ಕುಟುಂಬವೊಂದಕ್ಕೆ ಸಾದಾರಣ ತೃಪ್ತಿಕರವಾದ ಕನಿಷ್ಟ ಜೀವನ ಮಟ್ಟವನ್ನು ಒದಗಿಸುವುದೇ ಆರ್ಥಿಕ ಹಿಡುವಳಿಯಾಗಿದೆ.'[೬] ವ್ಯವಸಾಯ ಕೇವಲ ಹೊಟ್ಟೆ ಹೊರೆಯುವುದಕ್ಕಾಗಿ ನಡೆಸಲ್ಪಡುತ್ತದೆ. ಆದ್ದರಿಂದ ಇಲ್ಲಿ ಭೂಮಿ ಇವರ ಬದುಕಿನ ಏಕೈಕ ಆಸರೆ.

'ಹಿಡುವಳಿಯ ಗಾತ್ರದ ಮೇಲೆ ಯಜಮಾನಿಕೆಯು ಬೆಳೆಯುತ್ತದೆ. ಉತ್ಪಾದನೆಯ ತಂತ್ರ, ಸಲಕರಣೆ, ನೀರಾವರಿ ಸೌಲಭ್ಯ, ಮಣ್ಣಿನ ಗುಣ, ಭೂಮಿಯ ಮೌಲ್ಯ ಎಲ್ಲವೂ ಉತ್ತಮವಾಗಿರುವಾಗ ಭೂಹಿಡುವಳಿಯು ಆರ್ಥಿಕ ಹಿಡುವಳಿ ಎಂದೇ ಗುರುತಿಸಲಾಗುತ್ತದೆ.'[೭] ಕೃಷಿಯ ವಾಣಿಜ್ಯೀಕರಣದಿಂದ ಇವರ ಸಣ್ಣ ಪ್ರಮಾಣದ ಬೇಸಾಯ ಪದ್ಧತಿಯಿಂದ ಜೀವನ ನಿರ್ವಹಣೆ ಕಷ್ಟಕರವಾಗಿದೆ. ಹೇರಳವಾದ ಖರ್ಚುಗಳು ರೈತರನ್ನು ಬರಿದು ಮಾಡುತ್ತವೆ. ಇದರಿಂದ ದೊರೆಯುವ ಲಾಭಾಂಶವೂ ಸಹ ಅಷ್ಟೇ ಸೀಮಿತವಾಗಿರುತ್ತದೆ. ಈ ಕಾರಣಕ್ಕೆ ಹಕ್ಕಿಪಿಕ್ಕಿಯರು ಬದಲಾದ ಈ ಸಂದರ್ಭದಲ್ಲಿ ಬೇಸಾಯದ ಮೇಲೂ ಆಸಕ್ತಿ ಕಳೆದುಕೊಳ್ಳುವಂತೆ ಮಾಡಿದೆ.

## ೭. ಭೂಸುಧಾರಣೆಗಳು ಮತ್ತು ಹಕ್ಕಿಪಿಕ್ಕಿಯರು

ಹೀಗಾಗಿ ಭೂಮಿಯ ಹಂಚಿಕೆಯಲ್ಲಿನ ವಿಷಮತೆಯನ್ನು ಸರಿಯಾಗಿಸಲು ಕರ್ನಾಟಕ ರಾಜ್ಯದಲ್ಲಿ ಭೂಸುಧಾರಣಾ ಕಾಯ್ದೆಗಳು ರಚನೆಯಾಗಿವೆ. ಭೂಮಿಯ ಒಡೆತನದ ಹತೋಟಿ ಹಾಗು ಉಪಯೋಗದ ವಿಚಾರವಾಗಿ ಬಳಕೆಯಲ್ಲಿರುವ ಪದ್ಧತಿಯಲ್ಲಿ ಒಡೆತನದ ಪುನರ್‌ಹಂಚಿಕೆ ಮತ್ತು ಮಾನವನ ಸಂಬಂಧಗಳಲ್ಲಿ

ಮಾರ್ಪಾಟು ತರುವುದು ಭೂಸುಧಾರಣೆಯ ಉದ್ದೇಶವಾಗಿತ್ತು. ೧೯೭೨ ರಲ್ಲಿ ಅನುಷ್ಠಾನಗೊಂಡ ಭೂ ಸುಧಾರಣೆಯು ಕೆಳವರ್ಗದ ಭೂಹೀನ ಸಮುದಾಯವಾದ ಹಕ್ಕಿಪಿಕ್ಕಿಯರಿಗೆ ಭೂಮಿಯನ್ನು ಕಲ್ಪಿಸಲಾಗಿತ್ತು. ಸಮಾಜದಲ್ಲಿ ಕಾನೂನು ರೀತಿ ಮಿತಿಗೆ ಸೇರಿದ ಹೆಚ್ಚಳ ಜಮೀನನ್ನು ವಶಪಡಿಸಿಕೊಳ್ಳುತ್ತಿತ್ತು. ೧೯೬೧ರ ಕಾಯಿದೆಯಂತಹ ಹಂಚಿಕೆ ವಿಧಿವಿಧಾನಗಳನ್ನು ನಿರೂಪಿಸುವ ಉಪಬಂಧನಗಳನ್ನು ಒಳಗೊಂಡಿತ್ತು. ಇಂಥಾ ಫಲಾನುಭವಿಗಳಲ್ಲಿ ಬಡಜನರೆಂದು ಭೂಹೀನರಾದ ಸಮುದಾಯಗಳ ಜನವರ್ಗದವರನ್ನು ಗುರುತಿಸಲಾಯಿತು. ಈ ಕಾಯಿದೆ ಸದುಪಯೋಗ ಪಡೆದವರಲ್ಲಿ ಹಕ್ಕಿಪಿಕ್ಕಿ ಸಮುದಾಯವು ಒಂದಾಗಿತ್ತು.' ಈ ಕಾಯಿದೆ ೧೯೫೨ ರ ಶಾಸನ ಸಭೆಯಲ್ಲಿ ಮಂಡಿಸಲ್ಪಟ್ಟು ೧೯೫೪ ರಲ್ಲಿ ಜಾರಿಗೆ ಬಂದ ಮೈಸೂರು ಟೆನೆನ್ಸಿ ಕಾಯಿದೆ ಆಗಿತ್ತು. ಗೇಣಿದಾರರನ್ನು ದೃಷ್ಟಿಯಲ್ಲಿಟ್ಟುಕೊಂಡು ರಚನೆಯಾದ ಸುಧಾರಣೆಯಾಗಿತ್ತು.’[೮]

ಸಮುದಾಯಗಳು ಭೂಮಿಯನ್ನು ಕಾನೂನುಬದ್ದ ಹಕ್ಕಾಗಿ ಪರಿಗಣಿಸಿರಲಿಲ್ಲ. ಆದರೆ ಹಕ್ಕಿಪಿಕ್ಕಿಯರು ಎಂದೂ ಬೇಸಾಯದಲ್ಲಿ ತೊಡಗಿಕೊಂಡವರಲ್ಲ. ಭೂಸುಧಾರಣಾ ಕಾಯ್ದೆಯಿಂದಾಗಿ ಇವರು ಭೂಮಿಯಲ್ಲಿ ದುಡಿಯುವಂತೆ ಮಾಡಿತ್ತು. ಇದರಿಂದ ಸಮುದಾಯದ ಉತ್ಪಾದನಾ ವಿಧಾನ ಬಹುತೇಕ ಬದಲಾಗತೊಡಗಿತು. ಭೂಸುಧಾರಣೆಯ ಮೂಲಕ ದರಖಾಸ್ತು ಭೂಮಿಯನ್ನು ಹಂಚಿಕೆ ಮಾಡಿದ ನಂತರದ ದಿನಗಳಲ್ಲಿ ಇವರು ವ್ಯವಸಾಯಗಾರರಾಗಿ ಗುರುತಿಸಕೊಳ್ಳತೊಡಗಿದರು. ಇಲ್ಲಿ ಭೂಸಧಾರಣೆಗಳೆಂದರೆ ಗುರುತಿಸಬೇಕಾಗಬಹುದು.‘ ಭೂಹಿಡುವಳಿ ಸ್ವರೂಪದಲ್ಲಿ ಮಾರ್ಪಾಡು ಮಾಡಿ ಒಕ್ಕಲುತನ ಸಮಸ್ಯೆಯನ್ನು ನಿವಾರಿಸಿ ಗೇಣಿದಾರನಿಗೆ ಮತ್ತು ಭೂರಹಿತ ದುಡಿಯುವ ವರ್ಗಗಳಿಗೆ ಭೂಮಿಯನ್ನು ಒದಗಿಸುವುದಾಗಿತ್ತು. ಈ ಸುಧಾರಣೆಯ ಮೂಲ ಆಶಯವೇ ಭೂಸಧಾರಣಾ ಕ್ರಮದಲ್ಲಿ ಮಧ್ಯವರ್ತಿಗಳನ್ನು ತೆಗೆದು ಹಾಕಿ ಕಂದಾಯ ಪರಿಷ್ಕರಣೆ, ಭೂಮಿತಿಯ ನಿರ್ಧಾರ, ಭೂರಹಿತರಿಗೆ ಪುರ್ನವಸತಿ, ಭೂಹಿಡುವಳಿಗಳ ಒಕ್ಕೂಟ ಮುಂತಾದ ಕ್ರಮಗಳಿಂದಲೇ ಕೂಡಿದ್ದಿತು.’[೯]. ೧೯೫೬ ರಲ್ಲಿ ಪ್ರಾರಂಭಗೊಂಡ ಭೂಸುಧಾರಣೆಯು ೧೯೭೨ ರಲ್ಲಿ ಜಾರಿಗೆ ಬಂದಿತ್ತು. ಈ ಕಾಯಿದೆಯು ಮುಖ್ಯವಾಗಿ ೪ ಅಂಶಗಳಿಂದ ಪ್ರಾರಂಭಗೊಂಡಿತ್ತು. ಭೂಹಿಡುವಳಿ, ಗೇಣಿಗೆ ಸಂಬಂಧಿಸಿದಂತೆ ಹಿಡುವಳಿ ವಿಸ್ತೀರ್ಣ ಪುನರೂಪಣೆಯ ಸಮಸ್ಯೆಗಳಿಂದ ಆರಂಭಗೊಂಡಿತ್ತು. ಭೂದಾನ ಚಳುವಳಿ ಪ್ರಮುಖವಾದ ಪಾತ್ರ ವಹಿಸಿತ್ತು. ಇದರಿಂದ ಹಕ್ಕಿಪಿಕ್ಕಿಯರು ಪುರ್ನವಸತಿ ಯೋಜನೆಯಡಿಯಲ್ಲಿ ಭೂಮಿಯನ್ನು ಹೊಂದಿದ್ದವರಾಗಿದ್ದರು. ೧೯೬೨ ರ ಈ ಕಾಯಿದೆ ಪ್ರಾರಂಭವಾಗಲು ಸಹಾಯಕವಾಗಿತ್ತು. ಆದ್ದರಿಂದಲೇ ೧೯೭೪ ರಲ್ಲಿ ಹೊಸ ಕಾಯಿದೆ ಜಾರಿಗೆ ಬಂದಿತ್ತು.

### ೧೯೭೪ರ ಭೂಸುಧಾರಣಾ ಕಾಯಿದೆ ಸ್ವರೂಪ

ಈ ಕಾಯಿದೆ ಮೂಲ ಉದ್ದೇಶವೇ ಹಿಂದುಳಿದ ವರ್ಗಗಳು ಮತ್ತು ಆದಿವಾಸಿಗಳು ಗ್ರಾಮೀಣ ಸಮಾಜದಲ್ಲಿ ಭೂಮಿಯನ್ನು ಹೊಂದುವಂತೆ ಮಾಡುವುದಾಗಿತ್ತು. ದೇವರಾಜ ಅರಸುರವರು ಹೆಚ್ಚು ಆದ್ಯತೆ ಕೊಟ್ಟು ಜಾರಿಗೆ ತಂದ ಸುಧಾರಣೆಯಾಗಿತ್ತು. ಗ್ರಾಮೀಣ ಪರಿಸರದಲ್ಲಿ ವಾಸಿಸುವ ಜನರ ಮುಖ್ಯ

ಕಸಬು ವ್ಯವಸಾಯವಾಗಿದ್ದರಿಂದ ಇದಕ್ಕೆ ಹೆಚ್ಚಿನ ಬೆಲೆಯು ಬಂದಿತ್ತು. ೧೯೭೪ ರ ಭೂಸುಧಾರಣೆಯು ಹಕ್ಕಿಪಿಕ್ಕಿಯರ ಜೀವನ ವಿಧಾನದಲ್ಲಿ ಹೊಸತನವೇನೂ ಮೂಡಿಸಲಿಲ್ಲ. ಆದರೆ ಇನ್ನು ಸಮಸ್ಯೆಗಳ ತವರುಮನೆಯನ್ನು ಮಾಡಿದೆ. ಮೊಟ್ಟಮೊದಲ ಜಾರಿಗೆ ಈ ಕಾಯಿದೆ ಬೇಸಾಯಗಾರನು ಅಥವಾ ಕೃಷಿ ಕಾರ್ಮಿಕನು ಮಾಡುವುದರ ಜೊತೆಗೆ ಜಮೀನು ಪಡೆದುಕೊಳ್ಳುವಂತೆ ಮಾಡಿತ್ತು.

ಈ ಕಾಯ್ದೆಯಿಂದ ಭೂಹೀನರಿಗೆ ಸಿಕ್ಕ ಭೂಮಿ ಫಲವತ್ತತೆ ಅಷ್ಟೇನು ಉತ್ಕೃಷ್ಟವಾದದ್ದೇನಲ್ಲ. ದೊರೆತ ಭೂಮಿಯು ಸಹ ಅಲ್ಪ. ಆ ಭೂಮಿಯು ಗುಣಮಟ್ಟವನ್ನು ಪ್ರಶ್ನೆಮಾಡುವಂತೆಯೇ ಇಲ್ಲ. ಇದಕ್ಕೆ ಮುಖ್ಯಕಾರಣವೇ ಆಳುವ ಸರಕಾರದಲ್ಲಿನ ಕಾಂಗ್ರೆಸ್ ಭೂಮಾಲಿಕರು ಭೂಸುಧಾರಣಾ ಕ್ರಮದಲ್ಲಿನ ಎಲ್ಲಾ ಹೊರ ಒಳನೋಟಗಳನ್ನು ಬಲ್ಲವರಾಗಿದ್ದರು. ಇದರಿಂದ ಹಕ್ಕಿಪಿಕ್ಕಿಯರಿಗೆ ದೊರೆತ ಭೂಮಿಯು ಕಡಿಮೆಯಾಗಿತ್ತು.

ಭೂಮಿಯು ದೊರೆತ್ತಿದ್ದರಿಂದ ಎಲ್ಲವೂ ದೊರೆತಂತೆ ಆಗಲಿಲ್ಲ. ಈ ಭೂಮಿಯಲ್ಲಿನ ಏರು ಪೇರುಗಳು ಅನೇಕ ಸಮಸ್ಯೆಗಳನ್ನು ಸೃಷ್ಟಿಸಿತ್ತು. ವರ್ಗರಹಿತ ಸಮಾಜದ ಕಲ್ಪನೆಯು ಸಹ ಬೆಳೆದು ಬರಲಿಲ್ಲ. ಇದರಿಂದಾಗಿ ಗ್ರಾಮೀಣ ಪ್ರದೇಶದ ಭೂಮಾಲಿಕರು ಬಡ ಗೇಣಿದಾರರ ಮೇಲೆ ಇಟ್ಟುಕೊಂಡಿದ್ದ ಹಿಡಿತ ಸಡಿಲವಾಗಲಿಲ್ಲ.

ಸರಕಾರದಿಂದ ದೊರೆತ ಭೂಮಿಯು ಗುಣಮಟ್ಟ ಉತ್ಕೃಷ್ಟವಾಗಿಲ್ಲದೆ ಇರುವುದು, ದೊರೆತ ಭೂಮಿಯು ೩ ರಿಂದ ೪ ಎಕರೆ ಮಾತ್ರ ಇರುವುದು ವಾಸ್ತವ ಅಂಶವಾಗಿವೆ. ದೊರೆತ ಭೂಮಿಯಲ್ಲಿ ಕಲ್ಲು, ಗಿಡ, ಗಂಟಿಗಳಿಂದ ಕೂಡಿದ ನೀರಾವರಿ ಸೌಲಭ್ಯಗಳು ದೊರೆಯದಂತಹ ಭೂಮಿಯೇ ಹೆಚ್ಚು. ಮಳೆಯನ್ನವಲಂಬಿಸಿಯೇ ಇವರು ವ್ಯವಸಾಯ ಮಾಡಬೇಕು. ಮುಖ್ಯವಾಗಿ ಈ ಭೂಸುಧಾರಣೆಯಿಂದಾಗಿ ಇಂತಹ ಸಮುದಾಯಕ್ಕೆ ಭೂಮಿ ಸಿಕ್ಕರೂ ಆರ್ಥಿಕ ಸಬಲೀಕರಣ ಸಾಧ್ಯವಾಗಲಿಲ್ಲ. ಭೂಪರಿಮಿತಿ ವರ್ಗಿಕರಣ ಭೂನ್ಯಾಯ ಮಂಡಳಿಗಳು ಸ್ಥಾಪನೆಯಾದರೂ ಹೆಚ್ಚಿನ ಸೌಲಭ್ಯಗಳು ಹಕ್ಕಿಪಿಕ್ಕಿಯರಿಗೆ ದೊರೆಯಲಿಲ್ಲ.

**ಹಕ್ಕಿಪಿಕ್ಕಿ ಕಾಲೋನಿಯ ಗ್ರಾಮ ಲೆಕ್ಕಗಿನ ಅಂಕಿ-ಅಂಶಗಳು**

ಈ ವಿಷಮ ಸಾಮಾಜಿಕವ್ಯವಸ್ಥೆಯಲ್ಲಿ ಹಕ್ಕಿಪಿಕ್ಕಿಯರು ಅತ್ಯಂತ ಹೀನ ಸ್ಥಿತಿಗೆ ತುಳಿಯಲ್ಪಟ್ಟ ಸಮುದಾಯದವರಾಗಿದ್ದಾರೆ. ಸರಕಾರ ಭೂಸುಧಾರಣಾ ನೀತಿಯಲ್ಲಿ ಊಳುವವನೇ ಭೂಮಿಯ ಒಡೆಯ ಎಂದು ಹೇಳಿಕೊಂಡಿದ್ದರೂ ಕ್ರಿಯಾ ರೂಪಕ್ಕೆ ಬಂದಾಗ ನಿಜವಾಗಿ ಊಳುಮೆ ಮಾಡುವವ ಕಾನೂನಿನ ಅನುಕೂಲ ಪಡೆಯದೇ ವಂಚಿತನಾಗಿದ್ದಾನೆ. ಅದೇ ರೀತಿ ಒಂದು ಕಡೆ ಭೂಸುಧಾರಣೆಯು ಇವರುಗಳ ಸಮಸ್ಯೆಗಳ ಕಡೆಗೆ ಗಮನ ಹರಿಸದೇ ಇರುವುದು ಕಾಣಬರುತ್ತದೆ. ಇವರುಗಳಿಗೆ ದೊರೆತ ಭೂಮಿಯು ಸಹ ಬೆಟ್ಟಗುಡ್ಡಗಳ ಸಾಲಿನಲ್ಲಿರುವ ಭೂಮಿಯಾಗಿದೆ. ಆದರೆ ಭೂಮಿಯ ಕಳಕಳಿಯು ತಾತ್ಕಾಲಿಕವಾದರೂ ಸಹ ಭೂಮಿಯ ಮೇಲಿನ ಸಂಪೂರ್ಣ ಅಧಿಕಾರ ಇನ್ನು ದೂರವೇ ಇದೆ.

ಹಕ್ಕಿಪಿಕ್ಕಿಯರಿಗೆ ಮಂಜುರಾದ ಭೂಮಿ ೩೫೦ ಎಕರೆ . ಕಾಲೋನಿಯ ಪ್ರತಿಕುಟುಂಬಕ್ಕೆ ಹಂಚಿಕೆ ೪ ಎಕರೆಯ ವಿಸ್ತೀರ್ಣವಾಗಿದೆ. ಕಾಲೋನಿಯ ಆರಂಭದ ಕುಟುಂಬಗಳ ಸಂಖ್ಯೆ ೫೫. ಹೀಗಾಗಿ ಭೂಮಿಯ ಹಂಚಿಕೆಯ ವಿಷಯದಲ್ಲಿ ಸಮುದಾಯದಲ್ಲಿ ವಿಷಮತೆಯನ್ನು ಕಾಣಬಹುದು.

**ಕಂದಾಯ ಅಧಿಕಾರಿಗಳ ವಿವರ**

ಮೈಸೂರು ರಾಜ್ಯದ ಅರಣ್ಯ ಕಾಯಿದೆ ಹೊರಡಿಸಿರುವ ಅಧಿಸೂಚನೆ ನಂ. 4841 -15ft, 208-06-4 dated third february 1908 shali cease to be a partatoin of the state forest with effect from the date of this notification (Mysore act XI of 1900)

**ಹಕ್ಕಿಪಿಕ್ಕಿಯರಿಗೆ ನೀಡಲಾದ ಭೂಮಿಯ ವಿವರಗಳು**

| ಕ್ರ.ಸ | ವಿವರಗಳು | ಭೂಮಿ ಎಕರೆಗಳಲ್ಲಿ |
|---|---|---|
| ೧ | ಕಾಲೋನಿಯ ಒಟ್ಟುಆರಂಭಿಕ ಕುಟುಂಗಳು | ೫೫ |
| ೨ | ಪ್ರತಿಕುಂಟುಬ ಪಡೆದ ಭೂಹಿಡುವಳಿ | ೦೪ |
| ೩ | ಹೆಚ್ಚುವರಿ ಭೂಪ್ರದೇಶ ನಿರ್ಧರಿತವಾದದ್ದು | ೧೫೦ |
| ೪ | ಹಕ್ಕಿಪಿಕ್ಕಿಯರಿಗೆ ನೀಡಿದ್ದ ಒಟ್ಟು ಭೂಮಿ | ೩೫೦ |
| ೫ | ಉಪಯೋಗವಾಗದ ಭೂಮಿ | ೧೩೦ |

ಅಂದಿನ ಮೈಸೂರು ರಾಜ್ಯದಿಂದ ಹಕ್ಕಿಪಿಕ್ಕಿಯರು ದರಖಾಸ್ತು ಭೂಮಿಯನ್ನು ಪಡೆದ ನಂತರ ಕೃಷಿಕರಾಗಿದ್ದಾರೆ. ಹಲವಾರು ವರ್ಷಗಳ ಕಾಲ ಉತ್ತಮ ಮಾರ್ಗದರ್ಶನದೊಂದಿಗೆ ವ್ಯವಸಾಯಗಾರರಾಗಿದ್ದರು. ಭೂಮಿಯ ವಿವಾದಗಳು ಇವರ ಬಿಟ್ಟು ಹೋಗಲೇ ಇಲ್ಲ. ಭೂಪ್ರದೇಶದ ಸರಿಯಾದ ಸರ್ವೆ ಅಥವಾ ಅಳತೆಯನ್ನು ಮಾಡದಿರುವುದರಿಂದ ಶ್ರೀಮಂತ ಜಮೀನುದಾರರಿಂದ ಕಿರುಕುಳ ದಿನನಿತ್ಯ ನಡೆದು ಬರುವಂತಾಯಿತು. ಇದರಿಂದ ಬೇಸತ್ತ ಹಲವು ಕುಟುಂಬಗಳು ವ್ಯವಸಾಯದ ಕಡೆಗೆ ಮುಖ ಸಹ ಮಾಡಿಲ್ಲ.

ಕಾಲೋನಿಯ ಕಂದಾಯದ ಪರಿಷ್ಕರಣೆಯಾಗಲಿ, ವಿಸ್ತೀರ್ಣದ ಬಗ್ಗೆ ಅಥವಾ ಭೂಹಿಡುವಳಿಯ ಬಗ್ಗೆ ಅಧಿಕಾರಿಗಳೂ ಯಾರು ಯೋಚಿಸದೇ ಇರುವುದು ಇವರುಗಳನ್ನು ನಿರ್ಲಕ್ಷ್ಯತನಕ್ಕೆ ಮತ್ತೊಂದು ಕಾರಣವಾಗಿದೆ. ಭೂಮಿಯ ಹಂಚಿಕೆಯಿಂದ ಉಳಿದ ಭೂಮಿಯು ಇಂದು ಹಲವರ ಸ್ವತ್ತಾಗಿದೆ.

**ಕ್ಷೇತ್ರಕಾರ್ಯದ ದತ್ತಾಂಶಗಳು**

ಭೂಸುಧಾರಣಾ ಕಾಯ್ದೆ ಜಾರಿಗೊಳಿಸುವ ಹಂತದಲ್ಲಿ ಅನೇಕ ರೀತಿಯ ಮೋಸಗಳು ನಡೆದಿವೆ. ಭೂಮಿಯನ್ನು ಪಡೆದುಕೊಂಡರೂ ಅದನ್ನು ಉಳಿಸಿಕೊಳ್ಳಲಾರದ ವ್ಯವಸ್ಥೆಯಿಂದ ಮತ್ತೆ ಭೂರಹಿತರಾಗಿದ್ದಾರೆ.

ಇಂದು ತಮ್ಮ ಬದುಕಿಗಾಗಿ ಬೇರೆಯವರ ಹೊಲ, ತೋಟ, ಗದ್ದೆಗಳಲ್ಲಿ ದುಡಿಯುವ ಆಳಾಗಿದ್ದಾರೆ. ಭೂಮಿಗೆ ಸಂಬಂಧ ಪಟ್ಟ ಸಮಸ್ಯೆಗಳಲ್ಲಿ ಅತ್ಯಂತ ಹೆಚ್ಚಿನ ಮೋಸಕ್ಕೆ ಒಳಗಾದ ಜನರಾಗಿದ್ದಾರೆ.

ಪ್ರಸ್ತುತ ಕಂಡು ಬರುವ ಕುಟುಂಬಗಳು ೧೦೨ ಆದರೂ ಅವರುಗಳಲ್ಲಿ ಸಾಮಾಜಿಕ ವ್ಯವಸ್ಥೆ, ನ್ಯಾಯಪದ್ಧತಿ ಮೆಚ್ಚಲೇಬೇಕು. ಕುಟುಂಬಗಳು ಹೆಚ್ಚಿದಂತೆ ಹೊಂದಿರುವ ಭೂಮಿಯಲ್ಲಿ ಮಾರ್ಪಾಡು ಮಾಡಿಕೊಂಡಿದ್ದಾರೆ. ಇದರಿಂದ ಪ್ರತಿ ಕುಟುಂಬ ೩ ಎಕರೆ ಭೂಪ್ರದೇಶವನ್ನು ಪ್ರಸ್ತುತ ಹೊಂದಿರುವವರಾಗಿದ್ದಾರೆ.

ಈ ಪರಿಸರದ ಜನರ ಬದುಕು ಬರ್ಬರವೆನಿಸಿದೆ. ಇಲ್ಲಿಯ ಪ್ರದೇಶದಲ್ಲಿ ಸರಕಾರ ಯಾವುದೇ ನಾಗರಿಕ ಸೌಲಭ್ಯ ಒದಗಿಸಲಾಗುತ್ತಿಲ್ಲ. ರಾಷ್ಟ್ರೀಯ ಉದ್ಯಾನವನಕ್ಕೆ ಸೇರಿದ ಜಾಗ ಎಷ್ಟು ಎಂಬುದು ಯಾರಿಗೂ ಗೊತ್ತಿಲ್ಲ. ಇದರಿಂದ ಸಾಗುವಳಿ ಭೂಮಿಗಾಗಿ ನೀಡಿದ ಹಳೆಯ ಕಡತಗಳು ಕೊಳೆಯುತ್ತಿವೆ. ಹಕ್ಕಿಪಿಕ್ಕಿಯರಿಗೆ ಮಂಜೂರಾದ ಭೂಪ್ರದೇಶವು ರಾಷ್ಟ್ರೀಯ ಉದ್ಯಾನವನಕ್ಕೆ ಬರುತ್ತದೆ ಎಂದು ಕಂದಾಯ ಇಲಾಖೆ, ಅರಣ್ಯ ಇಲಾಖೆಯ ಶಿಫಾರಸ್ಸು ಇದೆ. ಸರ್ವೆ ಮಾಡಿ ಹಕ್ಕಿಪಿಕ್ಕಿಯರ ಮತ್ತು ರಾಷ್ಟ್ರೀಯ ಉದ್ಯಾನವನದ ಗಡಿಯನ್ನು ಗುರುತಿಸಿ ಎಂಬುದು ಹಕ್ಕಿಪಿಕ್ಕಿಯರ ಬೇಡಿಕೆಯು ಅರಣ್ಯರೋಧನವಾಗಿದೆ. ಕಾಲೋನಿಯ ಜನರು ಇಲ್ಲಿ ಅರಣ್ಯ ಇಲಾಖೆಯ ಹೆಸರು ಹೇಳಿದರೆ ಸಿಟ್ಟನಿಂದ ಕುದಿಯುತ್ತಾರೆ.

ಹಕ್ಕಿಪಿಕ್ಕಿಯರು ವಾಸಿಸುವ ಪ್ರದೇಶದಲ್ಲಿನ ಭೂಮಿಯ ಸರ್ವೆ ನಂಬರುಗಳಲ್ಲಿ ನೂರಾರು ಎಕರೆ ಕಂದಾಯ ಭೂಮಿಯು ಇದ್ದು, ಇವುಗಳಲ್ಲಿ ಕೆಲಭಾಗ ರಾಷ್ಟ್ರೀಯ ಉದ್ಯಾನವನ ಹೊರಗೆ ಇದ್ದರೂ ಅರಣ್ಯ ಇಲಾಖೆ ಸರ್ವೆ ಮಾಡಿ ಹಂಚಿಕೆ ಮಾಡಿಕೊಳ್ಳುವ ವಿಷಯದಲ್ಲಿ ಇನ್ನು ಮಂಜೂರಾತಿ ಬಾಕಿ ಉಳಿಸಿಕೊಂಡು ಬರುತ್ತಿದ್ದಾರೆ.

ಬಹುತೇಕ ಭೂಮಿಯನ್ನು ಒತ್ತುವರಿ ರೂಪದಲ್ಲಿ ಆಕ್ರಮಿಸಿಕೊಂಡ ಶ್ರೀಮಂತ ಭೂಮಾಲಿಕರು ತಮ್ಮ ಸ್ವಂತ ಭೂಮಿಯಂತೆ ವ್ಯವಸಾಯ ಮಾಡಿಕೊಂಡಿದ್ದಾರೆ. ಇತ್ತೀಚಿನ ದಿನಗಳಲ್ಲಿ ಪ್ಲಾಂಟೇಶನ್‌ಗಳು ಮತ್ತು ಫಾರ್ಮ್‌ಹೌಸ್ ಗಳ ಸೃಷ್ಟಿಕರ್ತರು ಇವರು ಭೂಮಿಯ ಮೇಲೆ ಹತೋಟಿ ಹೊಂದಲು ಹವಣಿಸುತ್ತಿದ್ದಾರೆ. ಇದರ ಸಲುವಾಗಿ ಅರಣ್ಯ ಅಧಿಕಾರಿಗಳೊಂದಿಗೆ ಶ್ರೀಮಂತ ಭೂಮಾಲಿಕರ ಜೊತೆಗೂಡಿ ಶೋಷಣೆ ಮಾಡುತ್ತಿರುವುದು ಕಾಣಬಹುದಾಗಿದೆ. ಕಷ್ಟಪಟ್ಟು ದುಡಿಯುವ ಹಕ್ಕಿಪಿಕ್ಕಿ ರೈತನಿಗೆ ತನ್ನ ಶ್ರಮದ ಪ್ರತಿಫಲ ದೊರೆಯುವಂತೆ ಮಾಡಬೇಕಾದ ಅನಿವಾರ್ಯತೆ ಇದೆ.

ಇವರಿಗೆ ದೊರೆತ ಭೂಮಿಯಲ್ಲಿ ಆದಾಯ ಮತ್ತು ಲಾಭಾಂಶ ಕಡಿಮೆ ಇರುವುದರಿಂದ ಅನಿವಾರ್ಯ ಪರಿಸ್ಥಿತಿಯಲ್ಲಿ ಬೇರೆ ಮೂಲಗಳಿಂದ ಸಾಲ ಪಡೆಯಲೇ ಬೇಕಾಗಿದೆ.ಕೃಷಿ ಇಂದು ಲಾಭದಾಯಕ ಉದ್ಯಮವಾಗಿ ಉಳಿದಿಲ್ಲ. ವಾಣಿಜ್ಯೀಕರಣಗೊಂಡ ಕೃಷಿ ವ್ಯವಸ್ಥೆ ಸಣ್ಣ ಹಿಡುವಳಿದಾರರಿಗೆ ಒಂದು ಸವಾಲೇ ಆಗಿದೆ. ಹೀಗಾಗಿ ಇಂತಹ ಸಮುದಾಯಗಳಿಗೆ ಭೂಸುಧಾರಣಾ ಕಾಯ್ದೆ ಮೂಗಿಗೆ ಹಚ್ಚಿದ ತುಪ್ಪವೇ ಆಗಿದೆ.

ಸರಕಾರದ ಹಲವು ಯೋಜನೆಗಳು ಇವರ ಪರಿಸ್ಥಿತಿಯಲ್ಲಿ ಅಮುಲಾಗ್ರ ಪರಿವರ್ತನೆ ಮಾಡಲು ಶಕ್ಯವಾಗಿಲ್ಲ. ಸಣ್ಣ ಹಿಡುವಳಿದಾರರಾದ ಹಕ್ಕಿಪಿಕ್ಕಿಯರು ಸಾಲ ಮಾಡಲೇಬೇಕಾದ ಪರಿಸ್ಥಿತಿ ಇದೆ. ಇದರಿಂದ ತಮ್ಮ ಭೂಮಿಯನ್ನು ಬಡ್ಡಿ ವ್ಯಾಪಾರ ಮಾಡುವ ಶ್ರೀಮಂತ ಭೂಮಾಲಿಕರಿಗೆ ಗೇಣಿಗೆ ನೀಡುವುದು ರೂಢಿಯಾಗಿದೆ. ಹೀಗೆ ಇವರುಗಳ ಈ ಕಲ್ಪನೆಯಿಂದ ಬಡತನ, ಸಾಲ, ಶೋಷಣೆಗಳು ತೀವ್ರಗೊಂಡಿವೆ. ಭೂಮಿಯ ಹಕ್ಕು, ಆರ್ಥಿಕ, ಸಾಮಾಜಿಕ, ಸ್ಥಾನಮಾನ, ರಾಜಕೀಯ ದನಿ ಎಲ್ಲಾದಕ್ಕೂ ಕಾರಣವಾಗಿದೆ. ಹೀಗಾಗಿ ಇವರುಗಳು ದೊಡ್ಡ ಆಸ್ತಿ ಭೂಮಿಯೇ ಆಗಿದೆ. ಎಷ್ಟೇ ಸುಧಾರಣೆಗಳು ಬಂದರೂ ಹಕ್ಕಿಪಿಕ್ಕಿಯರ ಭೂಮಿಯ ಮೇಲಿನ ಹಕ್ಕು, ಯಜಮಾನಿಕೆ, ನಿಯಂತ್ರಣ ಕಷ್ಟದ ಹಾದಿಯಲ್ಲಿಯೇ ಇದೆ. ಮುಖ್ಯವಾಗಿ ಭೂಮಿಯ ಸಾಗುವಳಿ ಹಕ್ಕು ದೊರೆಯಬೇಕಾಗಿದೆ. ಇದರಿಂದ ಅಭ್ಯುದಯ ಸಾಮರ್ಥ್ಯ, ಸಮಾನತೆ ಹಾಗು ಸಶಕ್ತತೆಯು ಸಾಗುವಳಿ ದೊರೆಯುವುದರಿಂದ ಬೆಳಕಿಗೆ ಬರುತ್ತದೆ. ಸಾಗುವಳಿಯಿಂದಲೇ ಹೆಚ್ಚು ಬದಲಾಣೆಗಳು ನಿರೀಕ್ಷಿಸಬಹುದು. ಈ ಸಮಯದಲ್ಲಿ ಭೂ ಒಡೆತನದ ಹಕ್ಕು ಹಲವು ಅನುಕೂಲ ಆಗಿರುವುದರಿಂದ ಜೊತೆಗೆ ಕಷ್ಟದ ಸಮಯದಲ್ಲಿ ಸಹಾಯಕ್ಕೆ ಬರುತ್ತದೆ.

ಕೊನೆಯಲ್ಲಿ ಹೇಳಬಹುದಾದುದು ಏನೆಂದರೆ ಭೂಮಿಯೇ ಸಂಪೂರ್ಣ ಜೀವನೋಪಾಯ ನೀಡುತ್ತದೆಯೆಂದು ಅರ್ಥವಲ್ಲ. ಬಹಳಷ್ಟು ಕುಟುಂಬಗಳು ಭೂಮಿಯನ್ನು ನಂಬಿ ಜೀವಿಸುತ್ತಿಲ್ಲ. ಅದು ಸಾಧ್ಯವಾಗದ ಮಾತು ಸಹ. ಆದರೆ ಜೀನವದ ವ್ಯವಸ್ಥೆಯಲ್ಲಿ ತುಂಡು ಭೂಮಿಗೆ ಬಾರಿ ಬೆಲೆ ಇರುವುದು ಸತ್ಯದ ವಿಚಾರ. ಹೀಗೆ ಭೂಸುಧಾರಣೆಗಳು ಸಂಪೂರ್ಣ ಹಕ್ಕಿಪಿಕ್ಕಿಯರ ಜೀವನ ವಿಧಾನವನ್ನು ಬದಲಾಯಿಸುವಲ್ಲಿ ಯಶಸ್ವಿಯಾಗಿಲ್ಲ. ಭೂಸುಧಾರಣಾ ಕ್ರಮಗಳು ಕಾಗದದ ಹಾಳೆಯಲ್ಲಿಯೇ ನಿಂತಿರುವುದು ಈ ಜನರ ಶೋಷಣೆಗೆ ಮೂಲ ಕಾರಣವು. ಆದ್ದರಿಂದಲೇ ಭೂಮಿಯ ಒಡೆತನವನ್ನು ಕಾನೂನು ಬದ್ಧ ಹಕ್ಕಾಗಿಸಿದರೆ, ಅವರ ಅಭಿವೃದ್ಧಿಗೆ ಸಾರ್ಥಕ ಯೋಜನೆಗಳನ್ನು ರೂಪಿಸಿದಲ್ಲಿ ಇವರ ಉದ್ಧಾರ ಸಾಧ್ಯ.

❖❖❖❖❖

### ಅಡಿಟಿಪ್ಪಣಿಗಳು

೧. ಭಾರತದ ಅರ್ಥವ್ಯವಸ್ಥೆಯ ಸಮಸ್ಯೆಗಳು. ಪ್ರಭಾಕರ ಶಿಶಿಲ. ಪುಟ: ೧೫
೨. ಭಾರತೀಯ ಸಮಾಜ. ಡಾ. ಎಂ.ಕೆ.ಇಂದಿರಾ. ಪುಟ: ೪೦೪
೩. ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು. ಎ.ಎಸ್.ಪ್ರಭಾಕರ. ಪುಟ: ೯೬
೪. ಹಕ್ಕಿಪಿಕ್ಕಿಯರು ರಾಜಪ್ಪ ದಳವಾಯಿ. ಪುಟ: ೯
೫. ಭಾರತದ ಅರ್ಥವ್ಯವಸ್ಥೆಯ ಸಮಸ್ಯೆಗಳು. ಪ್ರಭಾಕರ ಶಿಶಿಲ. ಪುಟ: ೧೪೫
೬. Hakkipikki Unesco. Co. Action-Larance desoza
೭. ಭಾರತದ ಅರ್ಥವ್ಯವಸ್ಥೆಯ ಸಮಸ್ಯೆಗಳು. ಪ್ರಭಾಕರ ಶಿಶಿಲ. ಪುಟ: ೧೩೫
೮. ಭಾರತದ ಅರ್ಥವ್ಯವಸ್ಥೆಯ ಸಮಸ್ಯೆಗಳು. ಪ್ರಭಾಕರ ಶಿಶಿಲ. ಪುಟ: ೧೪೦
೯. ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು. ಎ.ಎಸ್.ಪ್ರಭಾಕರ. ಪುಟ: ೧೨೫

ಅಧ್ಯಾಯ ೫

# ವರ್ತಮಾನದಲ್ಲಿ ಹಕ್ಕಿಪಿಕ್ಕಿಯರ ಆರ್ಥಿಕ ಚಟುವಟಿಕೆಗಳು

೧. ಗುಡಿ ಕೈಗಾರಿಕೆಗಳು

೨. ವ್ಯಾಪಾರ

೩. ಕೂಲಿ

೪. ವ್ಯವಸಾಯ

೫. ಸರಕಾರದ ಕೆಲಸ

೬. ಬಂಡವಾಳದ ಮೂಲ

೭. ಆದಾಯ ಮತ್ತು ಅನುಭೋಗ

# ವರ್ತಮಾನದಲ್ಲಿ ಹಕ್ಕಿಪಿಕ್ಕಿಯರ ಆರ್ಥಿಕ ಚಟುವಟಿಕೆಗಳು

ದುಡಿಮೆಯೇ ಸಕಲ ಸಂಪತ್ತಿನ ಮೂಲವೆಂದು ಅರ್ಥಶಾಸ್ತ್ರಜ್ಞರು ನುಡಿಯುತ್ತಾರೆ. ಪ್ರಕೃತಿಯನ್ನು ಬಿಟ್ಟರೆಪ್ರಕೃತಿಯು ಒದಗಿಸುವ ಸಾಮಾಗ್ರಿಗಳನ್ನು ಸಂಪತ್ತನ್ನಾಗಿ ಮಾರ್ಪಡಿಸುವ ಸಾಧನವೆಂದರೆ ದುಡಿಮೆಯೇ ಸರಿ. ಆದರೆ ದುಡಿಮೆಯೆಂದರೆ ಪ್ರಕೃತಿ ಸಾಮಗ್ರಿಗಳನ್ನು ಸಂಪತ್ತನ್ನಾಗಿ ಮಾರ್ಪಡಿಸುವ ಸಾಧನ ಮಾತ್ರವಲ್ಲ, ಅದಕ್ಕೂ ಇನ್ನು ಹೆಚ್ಚಿನ ಪ್ರಾಮುಖ್ಯತೆ ಇದೆ. ಹೀಗೆ ಮಾನವನ ಎಲ್ಲಾ ಇರುವಿಕೆಗೆ ದುಡಿಮೆ ಮೊಟ್ಟ ಮೊದಲ ಮೂಲಾಧಾರ. ಇದು ಎಷ್ಟರ ಮಟ್ಟಿಗೆ ನಿಜವೆಂದರೆ ಒಂದರ್ಥದಲ್ಲಿ ದುಡಿಮೆಯೇ ಮನುಷ್ಯನನ್ನು ರೂಪಿಸಿತೆಂದು ಕೂಡಾ ಹೇಳಬಹುದು. ಹೀಗಾಗಿ ಸೃಷ್ಟಿಯಲ್ಲಿ ಮಾನವ ನಿನ್ನೆ ಮೊನ್ನೆಯವನಲ್ಲ. ಕೆಲವು ಲಕ್ಷ ವರ್ಷಗಳಷ್ಟು ಹಳಬ ಎನ್ನಬಹುದು. ಆದಿಕಾಲದಿಂದ ಇಂದಿನವರೆಗೂ ಮಾನವ ಒಂದೇ ತೆರನಾಗಿಲ್ಲ. ಒಂದೇ ವಿಧವಾದ ಬದುಕಿನ ಪದ್ದತಿಯಲ್ಲಿ ಹಲವು ಬದಲಾವಣೆಗಳು ಸಾಮಾನ್ಯವಾಗಿವೆ. ಮಾನವನ ಭಾವನೆಗಳು ಸಮಾಜ ಬದಲಾದ ಹಾಗೆಯೇ ಬದಲಾಗುತ್ತಾ ಬಂದಿವೆ.

ಆರ್ಥಿಕ ವ್ಯವಸ್ಥೆಯು ಸಾಮಾಜಿಕ ವ್ಯವಸ್ಥೆನ್ನು ರೂಪಿಸುತ್ತದೆ. ಉತ್ತಮ ಸ್ಥಿತಿಯ ಅನುಕೂಲಗಳಿರುವ ಸಮುದಾಯ ನಾಗರಿಕತೆಯ ಜೊತೆಗೆ ಬೆಳೆದು ಬರುತ್ತಿರುತ್ತದೆ. ಈ ಹಂತದಲ್ಲಿ ಮಾನವನ ಶಕ್ತಿ ಸಂವರ್ಧನೆಯೂ ಸಹ ಬದಲಾಗುತ್ತಾ ಬರುತ್ತದೆ. ಮನುಷ್ಯನು ಕೈಗೊಳ್ಳುವ ಪ್ರತಿಯೊಂದು ವೃತ್ತಿಗೂ ಅನೇಕ ಸಂಬಂಧಗಳಿಂದ ಕೂಡಿರುವ ಹಂತಗಳು ಇರುವುದು. ಹಣಗಳಿಕೆಯ ಮೂಲ ಉದ್ದೇಶ ಜೀವನ ವಿಧಾನಕ್ಕೆ ಅಗತ್ಯವಾದ ಅರ್ಥ ಸಂಪಾದನೆಯ ಗುರಿ ಹೊಂದಿರುವುದಾಗಿದೆ. ಇದರಿಂದ ಜೀವಿಸುವ ಎಲ್ಲಾ ಮಾನವ ಸಮೂಹಗಳು ಹೊರತಾಗಿಲ್ಲ. ಹೀಗಾಗಿ ಬುಡಕಟ್ಟು ಸಮುದಾಯದ ಜನರು ತಮ್ಮ ಜೀವನ ವಿಧಾನವನ್ನು ಸುಧಾರಿಸಿಕೊಂಡು ವ್ಯವಸ್ಥೆಯೊಂದಿಗೆ ನೇರ ಮುಖಾಮುಖಿ ಬೆಳವಣಿಗೆಯಲ್ಲಿ ಪಾತ್ರ

ವಹಿಸಬೇಕಾದ ಅಗತ್ಯವಿದೆ. ಸಾಂಪ್ರದಾಯಿಕ ಉದ್ಯೋಗಳನ್ನು, ಉತ್ಪಾದನಾ ವಿಧಾನವನ್ನು ತ್ಯಜಿಸಿದ ನಂತರ ಜೀವನೋಪಾಯಕ್ಕಾಗಿ ಬೇರೆ ಬೇರೆ ವೃತ್ತಿಗಳಲ್ಲಿ ತೊಡಗಿಕೊಳ್ಳುವಂತೆ ಮಾಡಿದೆ. ಇಂತಹ ವೃತ್ತಿಗಳು ಹೆಚ್ಚಿನ ಆದಾಯ ತರುವ, ಲಾಭದಾಯಕವಾದವುಗಳನ್ನೇ ಅವಲಂಬಿಸಿರುವುದು ಮುಖ್ಯವಾಗಿದೆ. ಅವಲಂಬಿತ ಲಾಭದಾಯಕ ವೃತ್ತಿಗಳು ಇಂದು ಪಾರಂಪರಿಕತೆಯನ್ನು ತ್ಯಜಿಸಿದರೂ ಸಹ ಜನವರ್ಗದವರು ಜೀವಿಸಲು ಯಾವುದೇ ಒಂದು ನಿರ್ಧಿಷ್ಟ ವೃತ್ತಿಯಾದರೂ ಸರಿಯೇ ತೊಡಗಿಸಿ ಕೊಳ್ಳುವವರಾಗಿದ್ದಾರೆ. ಹೀಗೆ ತೊಡಗಿಸಿಕೊಳ್ಳುವ ವೃತ್ತಿಯನ್ನು ಇಷ್ಟವಾದ ಮತ್ತು ಆದಾಯಗಳಿಸುವ ಉದ್ದೇಶದಿಂದಲೇ ಬಹುಪಾಲು ಜನರು ಆಯ್ಕೆ ಮಾಡಿಕೊಂಡಿದ್ದಾರೆ.

ದುಡಿವ ಜನ ಸಮುದಾಯಕ್ಕೆ ಕೂಲಿ ಮಹತ್ವವಾದದ್ದು. ಒಂದು ಕಡೆ ಏರುತ್ತಿರುವ ಜನಸಂಖ್ಯೆ ಪ್ರಮಾಣದಲ್ಲಿ ಬದಲಾವಣೆಯಾದಂತೆ, ಬಂಡವಾಳ ಸಂಚಯನ ಹಾಗು ಉತ್ಪಾದನೆಯಲ್ಲಿಯೂ ಬದಲಾಗುವುದು ಸಹಜ. ಉತ್ಪಾದನೆಯ ಪ್ರಮಾಣದಲ್ಲಿ ಬದಲಾವಣೆಯು ಅಸ್ತಿತ್ವದಲ್ಲಿರುವ ಸಮುದಾಯಗಳಲ್ಲಿ ಸಮುದಾಯದ ಸ್ಥಿತಿಗತಿಗಳನ್ನೇ ಬದಲಾಯಿಸಿರುತ್ತದೆ. ಮಾನವನ ಶ್ರಮ ಸಂಪತ್ತಿನ ಗಳಿಕೆಯಲ್ಲಿ ಬುಡಕಟ್ಟು ಸಮುದಾಯ ಹೇರಳವಾದ ಸಾಮರ್ಥ್ಯ ಹೊಂದಿದ್ದು, ಸೀಮಿತ ವಲಯಗಳಲ್ಲಿ ಬಳಸಿಕೊಳ್ಳುತ್ತಿರುವ ಸಮುದಾಯದ ಜೀವನದ ರೀತಿ ನೀತಿಗಳು ಪ್ರಮುಖವಾಗಿ ಬದಲಾವಣೆಯ ಕಡೆಗೆ ಮುಖ ಮಾಡಿರುತ್ತವೆ. ಈ ಎಲ್ಲಾ ಬದಲಾವಣೆಗಳು ಆರ್ಥಿಕ ಸ್ಥಿತಿಗತಿಯ ಆಧಾರವಾದವುಗಳೇ ಆಗಿರುವುದು ಮುಖ್ಯವಾಗಿ ಗಮನಿಸಬಹುದು. ಈ ಪರಿಸ್ಥಿತಿಯಲ್ಲಿ ಶ್ರಮಕ್ಕೆ ದೊರೆಯುವ ಕೂಲಿಯು ಸಹ ಬಹಳ ಮುಖ್ಯವಾದ ಪಾತ್ರವಹಿಸುತ್ತದೆ. ಕೂಲಿ ಮತ್ತು ಕೂಲಿಯ ದರಗಳು ಬರೀ ಆರ್ಥಿಕ ಸ್ಥಿತಿಗತಿಯನ್ನು ತೋರಿಸುವುದಿಲ್ಲ. ಒಟ್ಟಾರೆ ಸಾಮಾಜಿಕ ಜೀವನವಿಧಾನವನ್ನು ತೋರಿಸುತ್ತದೆ. ಅನುಸರಿಸುವ ಹೊಸ ಹೊಸ ಮಾರ್ಗಗಳು ಸಮುದಾಯವನ್ನು ಜಾಗತೀಕರಣದತ್ತ ಸಾಗಿಸುತ್ತಿರುವುದು ವ್ಯವಸ್ಥೆಯಲ್ಲಿನ ಉತ್ಪಾದಕತೆಯ ಮೂಲಗಳಿಂದ ಗಳಿಸುವ ಆದಾಯದಿಂದ ಕೂಡಿದೆ.

ಭಾರತದ ಜನಸಂಖ್ಯೆಯಲ್ಲಿ ಶೇಕಡಾ ೭.೫ ಇರುವ ಬುಡಕಟ್ಟು ಸಮುದಾಯದ ಜನರು ಸಮಾಜದಲ್ಲಿ ಸುಲಭವಾಗಿ ನಿರ್ಧರಿಸಲಾದಂತಹ ಹಲವು ಸಮಸ್ಯೆಗಳಾದ ಬಡತನ, ದಾರಿದ್ರ್ಯ, ನಿರುದ್ಯೋಗ, ಅಜ್ಞಾನ, ಶಿಕ್ಷಣದ ಕೊರತೆ, ಆರ್ಥಿಕತೆಯ ಕೊರತೆ ಆರ್ಥಿಕ ಪ್ರಮಾಣದಲ್ಲಿದೆ. ಹೀಗಾಗಿ ಇವರುಗಳ ಉತ್ಪಾದನೆಯ ಮಾರ್ಗವು ವಿಶಿಷ್ಟತೆಯಿಂದ ಕೂಡಿದೆ.

ಹೀಗಾಗಿ ಹಕ್ಕಿಪಿಕ್ಕಿ ಸಮುದಾಯ ಶೋಷಿತ ವರ್ಗದ ನೆರಳಲ್ಲಿ ನಿಂತಿರುವುದು. ಶೋಷಣೆಯ ಕೂಪದಲ್ಲಿ, ಬದುಕಲು ಬೇಕಾದ ಉದ್ಯೋಗವನ್ನು ಅವಲಂಬಿಸಿರುವುದು ಅವರುಗಳ ವರ್ತಮಾದ ಜೀವನ ವಿಧಾನಕ್ಕೆ ಕನ್ನಡಿಯಾಗಿದೆ. ಹೀಗಾಗಿ ಹಕ್ಕಿಪಿಕ್ಕಿಯರ ಉದ್ಯೋಗಗಳು ಇಂದು ವೈವಿಧ್ಯಪೂರ್ಣವಾದವುಗಳು. ಕೃಷಿ ಪ್ರಧಾನವಾದ ಭಾರತದಲ್ಲಿ ಎಲ್ಲಾ ಜಾತಿ ಜನಾಂಗಗಳು ಒಂದಿಲ್ಲೊಂದು ರೀತಿಯಿಂದಲೇ ವ್ಯವಸಾಯಕ್ಕೆ ಸಂಬಂಧ ಪಡುತ್ತವೆ. ಜೊತೆಗೆ ವ್ಯವಸಾಯವಲ್ಲದೆ ಇನ್ನು ಹಲವು

ಉದ್ಯೋಗಗಳನ್ನು ಅವರು ಪರಂಪರೆಯಿಂದ ಮಾಡುತ್ತಾ ಬಂದಿದ್ದಾರೆ. ಹೀಗೆ ಜೀವನಕ್ಕೆ ಉಪಯುಕ್ತವಾದ ಉದ್ಯೋಗಗಳು ಹಲವು ರೀತಿಯಲ್ಲಿ ವಿಂಗಡಿಸಿಕೊಂಡಿದ್ದಾರೆ.

೧. ಉಪಜೀವನದ ಸಾಮಾನ್ಯ ವೃತ್ತಿಗಳು

೨. ಸಾಂಪ್ರದಾಯಿಕ ವೃತ್ತಿಗಳು

೩. ಹವ್ಯಾಸಿ ವೃತ್ತಿಗಳು

ಇತ್ತೀಚಿನ ಬೆಳವಣಿಗೆಯಲ್ಲಿ ಈ ಮೂರು ಹಂತದ ವೃತ್ತಿಗಳು ಸಾಕಷ್ಟು ಪ್ರಮುಖ ಸ್ಥಾನಗಳನ್ನು ಗಳಿಸಿವೆ. ಪ್ರತಿಯೊಂದು ಕುಟುಂಬ, ಕುಟುಂಬದ ಸದಸ್ಯರು ವಿಶಿಷ್ಟವಾದ ಉತ್ಪಾದನಾ ವಿಧಾನವನ್ನೇ ರೂಢಿಸಿಕೊಂಡು ದುಡಿಯುವವರಾಗಿದ್ದಾರೆ. ಆದರೂ ಸಹ ಜೀವನ ಪಾರತಂತ್ರದಲ್ಲಿಯೇ ಇದೆ. ಇತರರಲ್ಲಿ ಕೂಲಿ ಮಾಡದೇ ಹೊಟ್ಟೆ ತುಂಬುವುದಿಲ್ಲ. ಸಾಂಪ್ರದಾಯಿಕ ವೃತ್ತಿಗಳು ಬಹುತೇಕ ಮಾಯವಾಗಿ ಉಪಜೀವನದ ಸಾಮಾನ್ಯ ವೃತ್ತಿಗಳಲ್ಲಿ ದುಡಿದು ಜೀವಿಸುವವರೇ ಹೆಚ್ಚು.

ಈವತ್ತು ಹಕ್ಕಿಪಿಕ್ಕಿಯರು ಹೆಚ್ಚಾಗಿ ನಾನಾ ರೀತಿಯ ವೃತ್ತಿಗಳಲ್ಲಿ ತೊಡಗಿಕೊಂಡಿರುವುದುನ್ನು ಇಲ್ಲಿ ಗಮನಿಸಬಹುದು. ಇದಕ್ಕೆ ಮುಖ್ಯ ಕಾರಣ ಸಂದರ್ಭಗಳು ಸಹ ಆಗಿವೆ. ಹಕ್ಕಿಪಿಕ್ಕಿಯರನ್ನು ಗುರುತಿಸುವಾಗ ಅವರು ವಾಸಿಸುವ ಪರಿಸರ, ನಗರಪ್ರದೇಶ, ಸುತ್ತಲ ಹಳ್ಳಿಗಳ ಪ್ರಭಾವ ಬೀರುವುದರಿಂದ ಅವುಗಳ ಜೊತೆಗಿನ ಸಂಬಂಧಂದಿಲೇ ಗುರುತಿಸಬೇಕಾದ ಅವಶ್ಯಕತೆ ಇದೆ. ಹೀಗಾಗಿ ಹಕ್ಕಿಪಿಕ್ಕಿಯರ ವೃತ್ತಿಗಳು ಹೆಚ್ಚು ಬದಲಾವಣೆಗಳು ಕಾಣಿಸಿಕೊಂಡಿವೆಯಾದರೂ ಈ ಎಲ್ಲಾ ಬದಲಾವಣೆಗಳು ಇಂದು ಅಗತ್ಯವೂ ಕೂಡಾ. ಬೆಳೆಯುತ್ತಿರುವ ನಗರೀಕರಣ ಮತ್ತು ಔದ್ಯೋಗೀಕರಣ ಸ್ವರೂಪದ ಲಕ್ಷಣಗಳು ಇವರನ್ನು ಹೆಚ್ಚು ಕ್ರಿಯಾಶೀಲರಾಗುವಂತೆ ಮಾಡಿವೆ. ಆದ್ದರಿಂದ ತೊಡಗಿಸಿಕೊಂಡಿರುವ ವೃತ್ತಿಗಳ ಕ್ಷೇತ್ರದಲ್ಲಿ ಸಾಕಷ್ಟು ಬದಲಾವಣೆ ಹೊಂದಿದ್ದಾರೆ. ಭೂಮಿಯಿಂದಲೇ ತಮ್ಮ ಅಭಿವೃದ್ಧಿಯಾಗುವುದೆಂಬ ನಂಬಿಕೆ ಕಾಲೋನಿಯ ಹಲವು ಜನರಲ್ಲಿದೆ. ಈ ಭಾವನೆಯಲ್ಲಿಯೂ ಸಹ ಬದಲಾವಣೆಬೇಕು. ಬದುಕಲು ಬೇಕಾದ ಭೂಮಿ, ಅರಣ್ಯ ಸಂಪತ್ತು, ಪಶುಸಂಪತ್ತು, ಗುಡಿಕೈಗಾರಿಕೆಗಳಂತಹ ಕ್ಷೇತ್ರಗಳ ಸಮಗ್ರ ಅಭಿವೃದ್ಧಿಯಿಂದ ಮಾತ್ರ ಸರ್ವತೋಮುಖ ಆರ್ಥಿಕ ಸುಧಾರಣೆ ಸಾಧ್ಯ ಎನ್ನುವುದುನ್ನು ಸಮುದಾಯದ ಜನರಲ್ಲಿ ಮನವರಿಕೆ ಮಾಡಿಕೊಡಬೇಕಿದೆ.

ಕಾಲೋನಿಯ ಜನರು ಆರ್ಥಿಕವಾಗಿ ಹಿಂದುಳಿದಿದ್ದರೂ ಮೊದಲಿನಂತಹ ಕಂಡುಬರುವುದಿಲ್ಲ. ವ್ಯಾಪಾರದ ಸಾಮಾಗ್ರಿಗಳು ಸಾಕಷ್ಟು ಹೊಸತನವನ್ನು ಮೂಡಿಸಿವೆ. ತಮ್ಮತಮ್ಮ ವೃತ್ತಿಗಳೀಂದಲೇ ದುಡಿದು ಹೊಟ್ಟೆ ಹೊರೆಯುವುದು ರೂಢಿಯಾಗಿದೆ. ಸರಕಾರದ ಭೂಮಿಯನ್ನು ಪಡೆದ ಕುಟುಂಬಗಳು ಕೆಲವು ವ್ಯವಸಾಯದಲ್ಲಿ ತೊಡಗಿರುವರು. ಇನ್ನು ಕೆಲವು ಕುಟುಂಬಗಳು ಕೂಲಿ, ವ್ಯಾಪಾರ, ಸ್ವಯಂ ಉದ್ಯೋಗಗಳಲ್ಲಿ ಪುರುಷರು, ಮಹಿಳೆಯರು ಎನ್ನದೆ ಎಲ್ಲರೂ ತೊಡಗಿಸಿಕೊಂಡಿದ್ದಾರೆ. ಗಂಡಸರು ಹೊಲ ಗದ್ದೆಗಳಲ್ಲಿ ಮಣ್ಣು ಹೋರುವುದು, ಕೂಲಿ ಮಾಡುವುದು, ಸಣ್ಣ ಸಣ್ಣ ವ್ಯಾಪಾರದಲ್ಲಿ

ತೊಡಗಿರುವವರೇ ಮುಖ್ಯವಾಗಿ ಕಾಣಬರುತ್ತಾರೆ. ಪಶುಪಾಲನೆಯಲ್ಲಿ ಸಾಕಷ್ಟು ಹಿಂದುಳಿದ ಸಮುದಾಯದವರಾಗಿದ್ದಾರೆ. ಕಾಲೋನಿಯಲ್ಲಿ ಬೆರಳಣಿಕೆಯ ಸಂಖ್ಯೆಯಲ್ಲಿ ಮಾತ್ರ ಕಂಡುಬರುತ್ತಾರೆ. ವಯಸ್ಸಾದ ಮುದುಕರು ಭಿಕ್ಷೆಬೇಡಿಕೊಂಡು ಜೀವಿಸುತ್ತಿದ್ದಾರೆ. ಮಹಿಳೆಯು ಕಷ್ಟಪಟ್ಟು ದುಡಿದು ಬದುಕನ್ನು ಸಾಗಿಸುವ ಜನರು, ಕಾಲೊನಿಯ ಬಹುತೇಕ ಮಹಿಳೆಯರು ವ್ಯಾಪಾರದ ಮೊರೆ ಹೋಗಿದ್ದಾರೆ. ದುಡಿದು ತರುವ ಹಣದಲ್ಲಿ ಅರ್ಧದಷ್ಟು ಕುಡಿತಕ್ಕೆ ವ್ಯಯಿಸುತ್ತಿದ್ದಾರೆ. ಕಾಲೋನಿಯ ಬಹುಪಾಲು ಜನರು ನಿರಕ್ಷರಿಗಳು . ಶಿಕ್ಷಣದ ಪ್ರಗತಿಯಲ್ಲಿ ಬೆರಳೆಣಿಕೆಯಷ್ಟು ಮಾತ್ರ. ಬದಲಾದ ಸಮಾಜದಲ್ಲಿ ಹಲವಾರು ಹೊಸತನ ಕಂಡುಬರಲು ಕಾರಣವಾಗಿದೆ. ಆದಿಕಾಲದಿಂದಲೂ ಮಾನವನ ಬಯಕೆಗಳು, ಉತ್ಪಾದನಾ ವಿಧಾನ, ರೀತಿ, ನೀತಿ, ಪರಿಕರಗಳು, ತಂತ್ರಜ್ಞಾನ ಇವುಗಳು ನಿಂತ ನೀರಲ್ಲ, ಬದಲಾಗುತ್ತಾ ಬಂದಂತೆ ಮಾನವ ಸುಖ ಹಾಗು ಸಂತೋಷದಿಂದ ಬಾಳಲು ಪ್ರಯತ್ನಗಳು ಸಾಗುತ್ತಲಿವೆ. ಸುಖದ ಬಾಳಿವೆಗಾಗಿ ಅವನಿಗೆ ಬೇಕಾದ ಸಲಕರಣೆ, ಅನುಕೂಲಗಳೂ ಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ಮಾನವ ಮಾನವನಾಗಿಯೇ ಬಾಳಬೇಕು. ಈತ ಸಂಘಜೀವಿ. ಎಲ್ಲಾರೊಡನೆ ಸಹಕರಿಸಿ ಸಹಬಾಳ್ವೆ ಮಾಡಲು ಬಯಸುವುದು ಸಹಜ. ಹೀಗಾಗಿ ಜೀವನಕ್ಕಾಗಿ ಉದ್ಯೋಗದಲ್ಲಿ ತೊಡಗುವನು. ದುಡಿಯುವ ಮನುಷ್ಯ ಬಹಳಷ್ಟು ಬದಲಾವಣೆಗಳು ಕಾಣುವುದು ಸಹಜ. ಹೀಗೆ ವರ್ತಮಾನದಲ್ಲಿ ಬುಡಕಟ್ಟು ಸಮುದಾಯವಾದ ಹಕ್ಕಿಪಿಕ್ಕಿಯರು ರೂಪಿಸಿಕೊಂಡಿರುವ ವೃತ್ತಿಗಳು ಹಲವಾರು. ಇವೆಲ್ಲಾವುಗಳು ಅವರ ಜೀವನದ ಸ್ಥಿತಿಗತಿಯನ್ನು ತೋರಿಸುತ್ತದೆ. ವರ್ತಮಾನದಲ್ಲಿ ಬದುಕುವ ಪ್ರತಿಯೊಬ್ಬ ಮನುಷ್ಯನಿಗೆ ಆರ್ಥಿಕತೆಯ ಬಿಸಿಯಾದ ಅನುಭವವಾಗುತೊಡಗುವುದು ಸರ್ವೆ ಸಾಮಾನ್ಯ. ಶ್ರೇಷ್ಟ ಅರ್ಥಶಾಸ್ತ್ರಜ್ಞ ಶುಂಪಿಟರ್ ಹೇಳುವಂತೆ ಅರ್ಥವ್ಯವಸ್ಥೆಯು ಪ್ರತಿಯೊಂದು ಮನುಷ್ಯ ನಿರ್ಮಿತ. ಅಲ್ಲಿ ಯಾವಾಗಲೂ ಒಬ್ಬ ಸಾಹಸಿ ದುಡಿಯುವವನು ಇರುವುದು ನಿಜ. ಮತ್ತು ಅವನು ಆರ್ಥಿಕ ರಚನೆಯ ಮಾದರಿಯಲ್ಲಿ ಬಹಳ ಪ್ರಭಾವ ಬೀರುವವನು. ತನ್ನ ದುಡಿಮೆಯ ಶಕ್ತಿಯಿಂದ ಆರ್ಥಿಕ ಸ್ಥಿತಿಯನ್ನು ಬದಲಾಯಿಸಿಕೊಂಡು ಜೀವಿಸುವವನಾಗಿರುತ್ತಾನೆ. ಹೀಗಾಗಿ ವಿವಿಧ ಪ್ರಕಾರದ ಆರ್ಥಿಕ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿದ್ದಾನೆ.

ಸ್ವಾತಂತ್ರ್ಯ ಬಂದು ಅರ್ಧಶತಮಾನಕ್ಕಿಂತಲೂ ಹೆಚ್ಚು ಅವಧಿ ಸಂದುತ್ತಾ ಬಂದಿದೆಯಾದರೂ, ಭೂತಾನಹಳ್ಳಿಯ ಹಕ್ಕಿಪಿಕ್ಕಿಯರಿಗೆ ದೊರೆಯಬೇಕಾದ ನಾಗರಿಕ ಸಮಾಜಕ್ಕೆ ದೊರೆಯುವ ಸ್ಥಾನಮಾನಗಳು ಇನ್ನು ದೊರೆಯದಿರುವುದು ಕಾಣಬಹುದಾಗಿದೆ. ಪ್ರಯತ್ನಗಳು ನಿರೀಕ್ಷಿತ ಫಲ ಸಹ ನೀಡಿಲ್ಲ. ನಿರೀಕ್ಷೆಗೆ ಹತ್ತಿರವೂ ಇಲ್ಲ. ಒಟ್ಟಾರೆ ಸಾಮಾಜಿಕ ಸ್ಥರದಲ್ಲಿ ಜೀವಿಸಲು ಹೆಚ್ಚಿನ ಪ್ರಮಾಣದಲ್ಲಿ ಹಲವು ವೃತ್ತಿಗಳಿಗೆ ಗಂಟು ಬಿದ್ದು ಜೀವಿಸುತ್ತಿದ್ದಾರೆ. ಹೀಗೆ ಹಕ್ಕಿಪಿಕ್ಕಿಯರ ಆರ್ಥಿಕ ಸ್ವಾವಲಂಬನೆಯೂ ಕೈಗೆಟುಕದ ಸ್ಥಿತಿಯಲ್ಲಿದೆ. ವರ್ತಮಾನದಲ್ಲಿ ಬದುಕಲು ಉದ್ಯೋಗದ ಆಸರೆಯಾಗಿ ಹಲವು ರಂಗಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಬದುಕನ್ನು ಸರಿದೂಗಿಸುವ ಆರ್ಥಿಕ ವ್ಯವಸ್ಥೆಯು ದುರ್ಬರವಾಗಿದೆ. ಜೀವಿಸಲು ಉದ್ಯೋಗ ಕೈಗೊಳ್ಳಲೇಬೇಕಾದ ಪರಿಸ್ಥಿತಿಯಿಂದಲೇ ಕಾಲೋನಿಯ ಪ್ರತಿಯೊಂದು ಕುಟುಂಬ ತಮ್ಮ

ಉದ್ಯೋಗಗಳ ಆಯ್ಕೆಯಲ್ಲಿ ಬೌದ್ಧಿಕ ಮತ್ತು ದೈಹಿಕ ಶ್ರಮ ಸಾಮರ್ಥ್ಯವನ್ನು ಅವಲಂಬಿಸಿಯೇ ದುಡಿಯುತ್ತಿದ್ದಾರೆ. ಈ ರೀತಿಯ ಅವಲಂಬನೆಯಿಂದಲೇ ಬದಲಾಗುತ್ತಿರುವ ಸಮಾಜದಲ್ಲಿ ಕಾಲೋನಿಯ ಜನರು ಶಿಕ್ಷಣ ಪಡೆದವರಾಗಲಿ, ಪಡೆಯದವರಾಗಲಿ, ಹಂತ ಹಂತದ ಬೆಳವಣಿಗೆಗೆ ಮುನ್ನಡೆಯುತ್ತಿರುವ ರೀತಿಯು ಹಲವು ತೊಡಕುಗಳಿಂದ ಕೂಡಿವೆ. ಅವಲಂಬಿತ ಉದ್ಯೋಗಗಳು ವಿಶಿಷ್ಟತೆಯನ್ನು ಹೊಂದಿರುವುದರಿಂದ ಪ್ರಸ್ತುತದಲ್ಲಿ ವಿಶೇಷವಾದ ಜೀವನ ವಿಧಾನ ರೂಢಿಸಿಕೊಂಡ ಜನರು ಅನಿವಾರ್ಯ ಪರಿಸ್ಥಿತಿಗಳಲ್ಲಿ ಇದು ಅವಶ್ಯಕವಾಗಿದೆ.

### ೧. ಗುಡಿ ಕೈಗಾರಿಕೆ

ಕರಕೌಶಲ್ಯದಿಂದ ಅಕರ್ಷಕವೂ ಉಪಯುಕ್ತವೂ ಆದ ವಸ್ತುಗಳನ್ನು ತಯಾರಿಸುವ ಕಲೆ ಅತಿ ಪ್ರಾಚೀನಕಾಲದಿಂದಲೂ ನಡೆದು ಬಂದಿರುವ ಪ್ರಮುಖ ಕಸಬು ಎನ್ನಬಹುದು. ದೈಹಿಕ ದುಡಿಮೆಯ ಪ್ರಧಾನವಾದ ಗುಡಿ ಕೈಗಾರಿಕೆ ಸ್ವಾತಂತ್ರ್ಯ ಪೂರ್ವದಿಂದಲೂ ಬಹುಜನಪ್ರಿಯತೆಯನ್ನು ಹೊಂದಿದೆ. ಇಂತಹ ಕ್ಷೇತ್ರದಲ್ಲಿ ಹಕ್ಕಿಪಿಕ್ಕಿಯರು ತಮ್ಮ ಚಾಕಚಾಕ್ಯತೆಯನ್ನು ಮತ್ತು ಬುದ್ದಿ ಸಾಮರ್ಥ್ಯವನ್ನು ತೊಡಗಿಸಿಕೊಂಡ ರೀತಿಯೇ ಬೇರೆಯಾಗಿದೆ. ತಮ್ಮ ಕುಟುಂಬದ ಆರ್ಥಿಕ ವಿಕಾಸದ ಮೂಲವಾಗಿ ಇಂದು ಗುಡಿ ಕೈಗಾರಿಕೆಯನ್ನು ಗುರುತಿಸಿಕೊಂಡಿದ್ದಾರೆ. ಅಲೆಮಾರಿಯಾಗಿ ಬೇಟೆಗೆ ಶರಣಾಗಿದ್ದ ಜೀವನದ ಪ್ರತಿಹಂತದಲ್ಲಿ ಹಸಿವನ್ನು ತಣಿಸಿಕೊಳ್ಳಲು ಪಶುಪಾಲನೆ, ಪ್ರಾಣಿ ಪಕ್ಷಿ, ಸಸ್ಯರಾಶಿ, ಜಲಚರಗಳಂತಹ ಮೊದಲಾದುವುಗಳನ್ನು ಕೊಂದು ಉಪಯೊಗಿಸುತ್ತಿದ್ದ ಹಕ್ಕಿಪಿಕ್ಕಿಯರು, ಪ್ರಾಣಿಗಳ ಚರ್ಮದಿಂದಲೇ ಬದಲಿ ವಸ್ತುಗಳ ತಯಾರಿಕೆಯನ್ನು ಕಲಿತವರು. ತನ್ನ ಜ್ಞಾನ ಶಕ್ತಿಯನ್ನು ಉಪಯೊಗಿಸಿ ತಯಾರಿಸುತ್ತಿದ್ದ ವಸ್ತುಗಳು ಮುಂದೆ ಕುಟುಂಬದ ಆರ್ಥಿಕತೆಯಲ್ಲಿ ಹೊಸ ವಿಧವಾದ ಹೊಸ ವೃತ್ತಿಗಳ ಬೆಳವಣಿಗೆಗೆ ದಾರಿ ಮಾಡಿಕೊಟ್ಟಿವೆ. ಈ ರೀತಿಯಿಂದಲೇ ಉದ್ಭವಗೊಂಡವುಗಳು ಗುಡಿಕೈಗಾರಿಕೆಯಾಗಿ ಇಂದು ಹೆಚ್ಚು ಅವಲಂಬಿತವಾಗುವಂತೆ ಮಾಡಿವೆ.

ದೈಹಿಕ ಶ್ರಮವನ್ನು ಅವಲಂಬಿಸಿ ದುಡಿಯುವ ಹಾಗು ವಿವಿಧ ನಮೂನೆಯ ವಸ್ತುಗಳನ್ನು ತಮ್ಮ ಜಾಣ್ಮೆಯಿಂದ ತಯಾರಿಸುವ ವಸ್ತುಗಳಲ್ಲಿ ಸಹಜವಾಗಿ ಸುಂದರ ವಿನ್ಯಾಸದೊಂದಿಗೆ ಅಭಿವ್ಯಕ್ತಗೊಂಡಂತವುಳೇ ಹೆಚ್ಚು. ಇಂತಹ ಗುಡಿ ಕೈಗಾರಿಕೆಗಳು ಭಾರತದಲ್ಲಿ ಸುಮಾರು ಪಾಲು ಆದಾಯವನ್ನ ದೊರಕಿಸಿ ಕೊಡುವಂತವುಗಳು. ಹಾಗು ಉದ್ಯೋಗ ಮತ್ತು ಬಡತನ ನಿವಾರಣೆಯಲ್ಲಿಯೂ ಸಹ ನಿರ್ಣಾಯಕ ಪಾತ್ರ ವಹಿಸುತ್ತಿರುವುದು ಕಾಣಬಹುದು. ಬಹು ಉಜ್ವಲವಾದ ಪರಂಪರೆಯನ್ನು ಗುಡಿ ಕೈಗಾರಿಕೆ ಆಧುನಿಕ ಕಾಲದಲ್ಲೂ ತನ್ನ ಕಲಾವಂತಿಕೆಯನ್ನು ಗುರುತಿಸಿಕೊಳ್ಳುವಂತಾಗಿದೆ. ಹೀಗಾಗಿ ಇಂತಹ ವಿಧವಾದ ವೃತ್ತಿಯ ಜೊತೆಗಿನ ಭಾಂದವ್ಯ ಹಕ್ಕಿಪಿಕ್ಕಿಯರು ರೂಢಿಸಿಕೊಂಡು ಬಂದಿದ್ದಾರೆ. ಸ್ವತಂತ್ರವಾಗಿ ಕೆಲಸಮಾಡುವ, ಶ್ರಮ ಸಂಪತ್ತನ್ನು ಬಳಸಿಕೊಳ್ಳುವ, ನಿರುದ್ಯೋಗ ನಿವಾರಿಸುವ, ಜ್ಞಾನ ಶಕ್ತಿಯನ್ನು ವೃದ್ಧಿಸುವುದರ ಜೊತೆಗೆ ಅಪಾರವಾದ ಮಾರಾಟದ ತಂತ್ರಗಳನ್ನು ರೂಢಿಸಿಕೊಳ್ಳುವಂತೆ ಮಾಡಿದೆ.

ಹಕ್ಕಿಪಿಕ್ಕಿಯರು ಬದಲಾದ ಪರಿಸ್ಥಿತಿಯಲ್ಲಿ ತನ್ನ ಜೀವನ ವಿಧಾನವನ್ನು ರೂಪಿಸಿಕೊಳ್ಳಲೇಬೇಕಾದ ಪರಿಸ್ಥಿತಿಯಿಂದ ಇಂತಹ ಪರ್ಯಾಯ ಹಲವು ಉದ್ಯೋಗಗಳಲ್ಲಿ ತೊಡಗಿಕೊಳ್ಳುವಂತೆ ಮಾಡಿದೆ. ಗುಡಿಕೈಗಾರಿಕೆ ಇಂದು ಹಕ್ಕಿಪಿಕ್ಕಿಯರ ದೈನಂದಿನ ಬದುಕನ್ನು ಮುನ್ನಡೆಸಿಕೊಂಡು ಹೋಗುವ ಏಕೈಕ ಮಾರ್ಗವಾಗಿದೆ. ಗುಡಿ ಕೈಗಾರಿಕೆಗಳಿಂದಲೇ ಜೀವನ ರೂಪಿಸಿಕೊಂಡಿರುವ ಕುಟುಂಬಗಳು ಈ ಸಂದರ್ಭದಲ್ಲಿ ತೀರಾ ಸಂಘರ್ಷವನ್ನೆದುರಿಸುತ್ತಿವೆ. ಕಾಲೋನಿಯಲ್ಲಿ ಸಾಕಷ್ಟು ಜನರು ದುಡಿಯುವ ದುಡಿಮೆಯಾಗಿ ಗುಡಿಕೈಗಾರಿಕೆಯಲ್ಲಿ ತೊಡಗಿಸಿಕೊಂಡರೇ ಹೆಚ್ಚು. ಇತ್ತೀಚಿನ ದಿನಗಳಲ್ಲಿ ಗುಡಿಕೈಗಾರಿಕೆಯು ಪ್ರಮುಖ ಉದ್ಯೋಗ ಎಂಬಂತೆ ನಂಬಿ ಜೀವಿಸುತ್ತಿರುವ ಕುಟುಂಬಗಳು ಸಹ ಹೆಚ್ಚಾಗಿವೆ.

**ಗುಡಿ ಕೈಗಾರಿಕೆಗಳಲ್ಲಿ ತೊಡಗಿಸಿಕೊಂಡ ಜನಸಂಖ್ಯೆ**

**ಕೋಷ್ಟಕ : ೧**

| ಕ್ರ.ಸಂ | ಲಿಂಗ | ಜನಸಂಖ್ಯೆ | ಕುಟುಂಬ |
|---|---|---|---|
| ೧ | ಪುರುಷರು | ೨೫ | |
| ೨ | ಮಹಿಳೆಯರು | ೨೧ | ೨೮ |

ಹಕ್ಕಿಪಿಕ್ಕಿಯರು ತಯಾರಿಸುವ ವಸ್ತುಗಳು ಸಾಕಷ್ಟು ಅಲ್ಪಸಮಯದಲ್ಲಿಯೇ ತಯಾರಿಸುವಂತವುಗಳು. ಕಾಲೋನಿಯ ಜನರೇ ಹೇಳುವಂತೆ ಗುಡಿಕೈಗಾರಿಕೆ ವಂಶ ಪಾರಂಪರ್ಯವಾಗಿ ಬಂದರೂ ಇತ್ತೀಚಿನ ಉತ್ಪಾದನೆಯಲ್ಲಿನ ಈ ಬದಲಾವಣೆ ಹೊಸತನದಿಂದ ಕೂಡಿದೆ ಎನ್ನುತ್ತಾರೆ. ಕಡಿಮೆ ಬಂಡವಾಳ ತೊಡಗಿಸಿ ಅಲ್ಪಾವಧಿಯಲ್ಲಿ ತಯಾರಿಸುವ ಸಾಮಗ್ರಿಗಳಿಂದ ಹಲವು ಕುಟುಂಬಗಳು ಮುಖ್ಯ ಜೀವನಾಧಾರ ವೃತ್ತಿಯಾಗಿ ಪರಿಗಣಿಸಿಕೊಂಡಿದ್ದಾರೆ. ಕಾಲೋನಿಯ ಬಹುತೇಕ ಗಂಡಸರು ತಮ್ಮನ್ನು ಈ ಗುಡಿಕೈಗಾರಿಕೆಯಲ್ಲಿಯೇ ತೊಡಗಿಸಿಕೊಂಡಿರುವುದನ್ನು ಕಾಣಬಹುದಾಗಿದೆ. ಮಹಿಳೆಯರು ಮನೆಕೆಲಸದ ನಂತರ ಕೂಲಿಯಂತಹ ಹಲವು ಪರ್ಯಾಯ ವೃತ್ತಿಗಳಲ್ಲಿ ತೊಡಗಿಕೊಂಡಿದ್ದಾರೆ, ಕೂಲಿ ಇಲ್ಲದಿರುವಾಗ ಗುಡಿಕೈಗಾರಿಕೆಯಲ್ಲಿ ಪುರುಷರಿಗೆ ಸಹಾಯಕವಾಗಿ ನಿಲ್ಲುತ್ತಾರೆ. ಇನ್ನು ಕೆಲವು ಕುಟುಂಬಗಳು ವ್ಯವಸಾಯದ ಜೊತೆ ಗುಡಿಕೈಗಾರಿಕೆಯಲ್ಲೂ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

ಅರಣ್ಯದ ಸಮೀಪ ಮತ್ತು ನಗರದ ಹತ್ತಿರದ ಪ್ರದೇಶಗಳಲ್ಲಿಯೇ ವಾಸಿಸುವ ಹಕ್ಕಿಪಿಕ್ಕಿಯರು ಇಂತಹ ನಗರಗಳಿಂದ ವಿವಿಧ ಬಗೆಯ ಹಲವು ವೃತ್ತಿಗಳಲ್ಲಿ ದುಡಿಯುವಂತಾಗಿದೆ. ಬೇಟೆಯ ನಂತರ ರೂಪಿಸಿಕೊಂಡ ಗುಡಿಕೈಗಾರಿಕೆ ಇಂದು ಪ್ರಮುಖ ವೃತ್ತಿಯೂ ಹೌದು. ಗುಡಿಕೈಗಾರಿಕೆಯಲ್ಲಿ ಬಳಸುವ ಕುಶಲತೆ, ಉತ್ಪಾದನಾ ವಿಧಾನಾ, ಮಾನವಶ್ರಮ, ಜ್ಞಾನಸಂಪತ್ತು ಹೇರಳವಾಗಿದೆ. ಇಂದು ಕಾಲೊನಿಯ ಜನರು ಕುಟುಂಬ ನಿರ್ವಹಣೆಗಾಗಿ ಭೂಮಿಯನ್ನು ನಂಬಿ ಕುಳಿತವರಲ್ಲ. ಹೀಗೆ ಗುಡಿಕೈಗಾರಿಕೆ ಹೆಚ್ಚು ಪ್ರಾಶಸ್ತ್ಯ ಪಡೆದಿದೆ. ಹಕ್ಕಿಪಿಕ್ಕಿಯರ ವಿಷಮ ಆರ್ಥಿಕ ಬದುಕನ್ನು ಮೆಲ್ಲಗೆ ಪೊರೆಯುತ್ತಿದೆ. ಇದಕ್ಕೆ ತೊಡಗಿಸುವ ಬಂಡವಾಳವು ಸೀಮಿತವಾಗಿರುವುದರಿಂದ ಎಲ್ಲರೂ ಗುಡಿಕೈಗಾರಿಕೆಯನ್ನು

ಅವಲಂಬಿಸುವಂತಾಗಿದೆ. ಇಂತಹ ಗುಡಿಕೈಗಾರಿಕೆಯಲ್ಲಿ ತೊಡಗಿಸಿಕೊಳ್ಳುವವರು ಪ್ರಮುಖವಾಗಿ ಕುಟುಂಬದ ಸದಸ್ಯರು ಹೆಚ್ಚು ಇರುವ ಮನೆಗಳಲ್ಲಿಯೇ . ಇದರಿಂದ ಮಾನವ ಶ್ರಮವಹಿಸಿ ದುಡಿಯಲು ಸಹಾಯಕವಾಗಿದೆ. ಕುಟುಂಬದ ಸದಸ್ಯರೆಲ್ಲರೂ ಉತ್ಪಾದನಾ ನೈಪುಣ್ಯತೆಯನ್ನು ಹೆಚ್ಚಿಸಿಕೊಂಡು ಉತ್ಪಾದನಾ ಮಟ್ಟದಲ್ಲಿ ಸಮಪಾಲು ಶ್ರಮವನ್ನು ವ್ಯಯಿಸುವವರಾಗಿದ್ದಾರೆ. ಈ ಉದ್ಯೋಗವು ಆರ್ಥಿಕ, ರಾಜಕೀಯ ಮತ್ತು ವಾಣಿಜ್ಯ ಶಕ್ತಿಗಳ ಕೇಂದ್ರಬಿಂದುವಾಗಿ ಹಕ್ಕಿಪಿಕ್ಕಿಯರ ವರ್ತಮಾನದ ಆರ್ಥಿಕ ಪರಿಸ್ಥಿತಿಯನ್ನು ಮತ್ತು ಆದಾಯವನ್ನು ಹೆಚ್ಚಿಸುವಲ್ಲಿ ಪಾತ್ರ ವಹಿಸುತ್ತಿರುವುದು ಕಾಣಬಹುದು.

ಹಕ್ಕಿಪಿಕ್ಕಿಯರು ಗುಡಿ ಕೈಗಾರಿಕೆಯಲ್ಲಿ ತಯಾರಿಸುವ ವಸ್ತುಗಳು ಸಹ ಬಣ್ಣ ಬಣ್ಣದ ಕಲಾತ್ಮಕ ಸುಂದರವಾದ ಪ್ರಮುಖ ವಸ್ತುಗಳು ಹೀಗಿವೆ.

೧. ರೋಸ್ (ಗುಲಾಬಿ) ಹೂವು
೨. ಹಸಿರುಗಿಣಿ
೩. ಷೋಕೇಸ್ ಹೂವು
೪. ಪೋಟೋ ಹಾರಗಳು

### ೧. ರೋಸ್ (ಗುಲಾಬಿ) ಹೂವು

ಮಾರುಕಟ್ಟೆಯಿಂದಲೇ ಪ್ಲಾಸ್ಟಿಕ್ ಬಟ್ಟೆಯ ಬಣ್ಣ ಬಣ್ಣದ ಹೂಗಳನ್ನು ತಂದು ಮಾರಾಟ ಮಾಡುವುದು. ಗುಡಿಕೈಗಾರಿಕೆಯಲ್ಲಿ ಪ್ರಥಮವಾಗಿದೆ. ಈ ಹೂವುಗಳೂ ಸುಮಾರು ಒಂದಕ್ಕೆ ಮಾರುಕಟ್ಟೆಯಲ್ಲಿ ೩.೫೦ ರೂಪಾಯಿಗಳಾದರೆ, ಹಕ್ಕಿಪಿಕ್ಕಿಯರು ಮಾರಾಟ ಮಾಡುವುದು ೫ ರೂಪಾಯಿಗೆ. ಒಂದು ಹೂ ಮಾರಾಟದಿಂದ ೧.೫೦ ರೂ ದೊರೆಯುವುದು. ದಿನವೊಂದಕ್ಕೆ ಸುಮಾರು ೧೫ ರಿಂದ ೨೫ ಹೂಗಳನ್ನು ಮಾರಾಟ ಮಾಡುವರು. ಈ ಹೂಗಳ ಮಾರಾಟದಿಂದ ಹೆಚ್ಚಿನ ಲಾಭ ಇಲ್ಲದಿದ್ದರೂ ಸಹ ಮಾರಾಟ ಮಾಡುವುದು ರೂಢಿಯಲ್ಲಿದೆ. ಇಂತಹ ಹೂಗಳ ಮಾರಾಟದ ಸಮಯದಲ್ಲಿ ಬೇರೆ ಬೇರೆ ರೀತಿಯ ವಸ್ತುಗಳು ಮತ್ತು ಪೋಟೋಹಾರಗಳನ್ನು ಮಹಿಳೆಯರು ಜೊತೆಯಲ್ಲಿಯೇ ಮಾರಾಟ ಮಾಡುವರು.

### ೨. ಹಸಿರು ಗಿಣಿ

ಹಸಿರು ಬಟ್ಟೆಯ ಮಾದರಿಯಲ್ಲಿಯೇ ಇರುವ ಪ್ಲಾಸ್ಟಿಕ್ ಬಟ್ಟೆಯನ್ನು ಮೈಸೂರಿನಿಂದ ತಂದು ವಿಶೇಷ ರೀತಿಯಲ್ಲಿ ಕೈಯಿಂದಲೇ ಹೊಲಿದು ಗಿಣಿಗಳನ್ನು ತಯಾರಿಸುವುದು ಹಕ್ಕಿಪಿಕ್ಕಿಯರ ವಿಶೇಷತೆ. ಬಟ್ಟೆಯನ್ನು ಕತ್ತರಿಸಿದ ನಂತರ ಅದಕ್ಕೆ ವಿಶೇಷವಾದ ಶೃಂಗಾರ ಬಣ್ಣಗಳ ಲೇಪನ ಮಾಡುವುದರಿಂದ ಗಿಣಿಗಳು ಹೆಚ್ಚು ನೈಜ, ಸುಂದರವಾಗಿ ಕಾಣುವಂತೆ ಮಾಡುತ್ತಾರೆ. ಹೀಗೆ ತಯಾರಿಸಿದ ಅಂದವಾದ ಮುದ್ದಿನ ಗಿಣಿಗಳ ಜೋಡಿಯನ್ನು ಪ್ಲಾಸ್ಟಿಕ್ ಕಪ್ಪಿನ ಜೊತೆಗೆ ಕಂಬಿಯನ್ನು ಬಳಸಿ ವಿಶೇಷರೀತಿಯಲ್ಲಿ ಗಿಣಿಗಳು ಕುಳಿತಿರುವಂತೆ ಜೋಡಿಸಲಾಗುತ್ತದೆ. ಈ ರೀತಿ ತಯಾರಿಸಿದ ಜೋಡಿಗಿಣಿಗಳು ಮನೆಗಳಲ್ಲಿ ಚೆಂದದ ಸೊಬಗಿನ ಅಂದವನ್ನು ನೀಡುತ್ತದೆ ಎನ್ನುತ್ತಾರೆ ಹಕ್ಕಿಪಿಕ್ಕಿಯರು. ಒಂದು ಗಿಣಿಗಳ ಜೊಡಿಯ

ಬೆಲೆ ಸುಮಾರು ೪೦ ರಿಂದ ೫೦ ರೂಪಾಯಿಗಳ ವರೆಗೆ ಮಾರಾಟ ಮಾಡುತ್ತಾರೆ. ಕೆಲವು ಬಾರಿ ೨೫ ರೂಪಾಯಿಗೂ ಮಾರಾಟ ಮಾಡುವುದುಂಟು. ಈ ಜೋಡಿ ಗಿಣಿಗಳ ತಯಾರಿಕೆಯಲ್ಲಿ ಕನಿಷ್ಟ ಒಂದು ಜೊತೆ ತಯಾರಿಸಲು ೧೫ ರಿಂದ ೨೦ ರೂಪಾಯಿಗಳ ಖರ್ಚು ಮಾಡಬೇಕಾಗುತ್ತದೆ. ಹೀಗಾಗಿ ಇವರುಗಳ ಆದಾಯವು ಸಹ ಕಡಿಮೆ ಎನ್ನಬಹುದು. ಹಕ್ಕಿಪಿಕ್ಕಿಯರ ಕಾಲೋನಿಯಲ್ಲಿ ಕೇವಲ ೭ ಕುಟುಂಬಗಳು ಗಿಣಿತಯಾರಿಸುವ, ಮಾರಾಟ ಮಾಡುವ ವೃತ್ತಿಯನ್ನು ಕಲಿತವರಾಗಿದ್ದಾರೆ. ಈ ಕುಟುಂಬಗಳು ವ್ಯವಸಾಯದ ನಂತರ ಬಿಡುವಿನ ಸಮಯದಲ್ಲಿ ಈ ತಯರಿಕೆಯಲ್ಲಿ ತೊಡಗಿಕೊಳ್ಳುತ್ತಾರೆ.

### ೩. ಷೋಕೇಸ್ ಹೂವು

ಹಕ್ಕಿಪಿಕ್ಕಿಯರು ತಯಾರಿಸುವ ಗುಡಿಕೈಗಾರಿಕೆಯಲ್ಲಿ ಷೋಕೇಸ್ ಹೂವು ಸಹ ಪ್ರಮುಖವಾದದ್ದು. ಈ ರೀತಿಯ ಹೂವುಗಳನ್ನು ತಯಾರಿಸುವ ವಿಶೇಷ ಕಲೆಯನ್ನು ಸಹ ಹಕ್ಕಿಪಿಕ್ಕಿಯರು ಹೊಂದಿದ್ದಾರೆ. ಈ ರೀತಿಯ ಕಲೆಯನ್ನು ನೋಡಿ ಕಲಿತಿದ್ದು ಎನ್ನುತ್ತಾರೆ. ಯಾವುದೇ ವಿಧವಾದ ತರಬೇತಿ ಇಲ್ಲ. ಮನೆಯಲ್ಲಿ ಸುಂದರವಾಗಿ ಕಾಣಲು ಬೇಕಾಗಿರುವ ಷೋಕೇಸ್ ಹೂವು ವಿಶೇಷವಾದ ಗಿಡಗಳ ರೀತಿಯಲ್ಲಿ ಹೂ ಕುಂಡಗಳು ಹೂವುಗಳು ತಯಾರಿಸಿ ಮಾರಾಟ ಮಾಡುತ್ತಾರೆ. ಈ ಎಲ್ಲಾ ವಸ್ತುಗಳನ್ನು ಪ್ರಮುಖವಾಗಿ ನಗರ ಪ್ರದೇಶಗಳಲ್ಲಿಯೇ ಮಾರಾಟ ಮಾಡುತ್ತಾರೆ. ಷೋಕೇಸ್ ಹೂವು ತಯಾರಿಕೆಯಲ್ಲಿ ಹಲವಾರು ಸಾಮಾಗ್ರಿಗಳು ಬಳಸುತ್ತಾರೆ. ಅವುಗಳೆಂದರೆ

**ಷೋಕೇಸ್ ಹೂವು ತಯಾರಿಕೆಯಲ್ಲಿ ಬಳಸುವ ಸಾಮಗ್ರಿಗಳು ಮತ್ತು ಮಾರಾಟದ ಬೆಲೆ**

**ಕೋಷ್ಟಕ : ೨**

| ಕ್ರ.ಸಂ | ವಸ್ತುಗಳು | ಪ್ರಮಾಣ | ಮಾರುಕಟ್ಟೆಯ ಬೆಲೆ |
|---|---|---|---|
| ೧ | ಕಪ್ಪು | ೧೦೦ ಗ್ರಾಂ | ೫೦.೦೦ |
| ೨ | ಪೌಡರ್ | ೧ ಕೆ.ಜಿ | ೪೦.೦೦ |
| ೩ | ತಾಪು | ೧ ಕೆ.ಜಿ | ೧೫೦.೦೦ |
| ೪ | ಕಂಬಿ | ೧ ಕೆ.ಜಿ. | ೬೫.೦೦ |
| ೫ | ಬಿದಿರು ಕಡ್ಡಿ | | ೪೦.೦೦ |
| ೬ | ಟೇಪು | ೧ | ೧೫.೦೦ |
| ೭ | ಡೇರಾ ಬಟ್ಟೆ | | ೬೦೦.೦೦ |
| | | ಒಟ್ಟು | ೯೦೦.೦೦ |

ಸುಮಾರು ೧೦೦೦ ರೂಪಾಯಿ ಬಂಡವಾಳದಿಂದ ೪ ಅಥವಾ ೫ ಜನ ಸೇರಿ ೨೦ ದಿನಗಳ ಕಾಲ ನಿರಂತರವಾಗಿ ಕೆಲಸದಲ್ಲಿ ತೊಡಗಿಸಿಕೊಂಡು ತಯಾರಿಸಬೇಕಾಗುತ್ತದೆ. ತಯಾರಿಸಿದ ವಸ್ತುವನ್ನು ನಗರದಲ್ಲಿ ಒಂದು ವಾರದಿಂದ ಹಿಡಿದು ೧೫ ದಿನಗಳವರೆಗೆ ಮಾರಾಟ ಮಾಡಬೇಕಾಗುತ್ತದೆ. ಮಾರಾಟದ ಸ್ಥಳಗಳು ಮುಖ್ಯವಾಗಿ ನಗರಗಳೇ ಆಗಿವೆ. ಪ್ರತಿಯೊಂದು ಕುಟುಂಬದಿಂದ ಮಾರಾಟಕ್ಕೆ ಒಬ್ಬರು ಅಥವಾ

ಇಬ್ಬರು ಹೋಗುವುದು ವಾಡಿಕೆಯಾಗಿದೆ. ಒಂದು ಜೋಡಿ ಪೋಕೇಸ್ ಹೂವು ೧೦ ರೂಪಾಯಿ ಮಾತ್ರ. ಹೀಗಾಗಿ ದೊರೆಯುವ ಈ ಹಣದಿಂದಲೇ ತಿಂಡಿ, ಊಟ, ಚಾರ್ಜು ಎಲ್ಲವೂ ನಡೆಯಬೇಕಾಗುತ್ತದೆ. ದೊರೆಯುವ ಲಾಭವೂ ಅಲ್ಪವಾಗಿರುವುದರಿಂದ ಮನೆಗೆ ವಾಪಾಸ್ಸು ಬರುವ ವೇಳೆಗೆ ಗಳಿಸಿದ ಅಲ್ಪ ಹಣದಲ್ಲಿ ಅರ್ಧದಷ್ಟು ಖಾಲಿಯಾಗಿರುತ್ತದೆ.

೪. ಪೋಟೊ ಹಾರಗಳು

ವರ್ತಮಾನದಲ್ಲಿ ಹಕ್ಕಿಪಿಕ್ಕಿಯರ ಕುಟುಂಬದ ನಿರ್ವಹಣೆಯಲ್ಲಿ ಪಾತ್ರ ವಹಿಸುತ್ತಿರುವ ಹಲವು ಮೂಲಗಳಲ್ಲಿ ಗುಡಿಕೈಗಾರಿಕೆಗಳ ಈ ಪೋಟೋ ಹಾರಗಳು ಪ್ರಮುಖ ಪಾತ್ರ ವಹಿಸುತ್ತವೆ. ಇದರಿಂದ ಪಡೆಯುವ ಆದಾಯವು ಸಹ ಆರ್ಥಿಕ ವ್ಯವಸ್ಥೆಯ ಮೇಲೆ ಪ್ರಭಾವ ಬೀರಿದೆ. ಈ ಪೋಟೊ ಹಾರಗಳ ತಯಾರಿಕೆ ಇಂದು ಹಕ್ಕಿಪಿಕ್ಕಿಯರನ್ನು ವ್ಯಾಪಾರಗಾರರನ್ನಾಗಿ ಮಾಡಿದೆ. ಹಾರಗಳ ತಯಾರಿಕೆಯಲ್ಲಿ ಮನೆಯಲ್ಲಿನ ಎಲ್ಲಾ ಸದಸ್ಯರು ಭಾಗವಹಿಸಿ ನೆರವು ನೀಡುತ್ತಾರೆ. ಸುಮಾರು ೨ ತಿಂಗಳು ಕಾಲ ತಯಾರಿಕೆಯಲ್ಲಿ ತೊಡಗಿಸಿಕೊಳ್ಳುತ್ತಾರೆ. ಈ ಉದ್ಯೋಗವು ವಿಶಿಷ್ಟವಾಗಿದೆ.

ಪ್ರತಿಯೊಂದು ಕುಟುಂಬವು ವಿಶೇಷವಾದ ಕೈಕಸಬಿನ ಪರಿಣಿತಿಯನ್ನು ಹೊಂದಿರುವುದು ಹಕ್ಕಿಪಿಕ್ಕಿಯರ ವಿಶೇಷತೆ. ಇವರುಗಳು ತಯಾರಿಸುವ ವಸ್ತುಗಳು ಸಹ ನೋಡಲು ಸಹ ಆಕರ್ಷಕವಾಗಿರುತ್ತವೆ. ಕಾಲೋನಿಯ ಜನರು ಹಿಂದುಳಿದವರಂತೆ ಕಂಡು ಬಂದರೂ, ಮಾನವನ ಶ್ರಮ ಸಂಪತ್ತಿನಲ್ಲಿ ಹೇರಳವಾದ ಶಕ್ತಿಯನ್ನು ಹೊಂದಿರುವುದು ಕಂಡುಬರುತ್ತದೆ. ಹಾರಗಳ ತಯಾರಿಕೆಯಲ್ಲಿ ಲಿಂಗ ತಾರತಮ್ಯವಿಲ್ಲದೆ ದುಡಿಯುವ ಕುಟುಂಬದ ಹಿರಿಯ ಕಿರಿಯರು ಹಾರಗಳನ್ನು ತಯಾರಿಸುವ ರೀತಿಯನ್ನು ನೋಡಿಯೇ ಅವರ ಮಕ್ಕಳು ಕಲಿಯುತ್ತಿದ್ದಾರೆ. ಶಿಕ್ಷಣವೇ ಇಲ್ಲದ ಇವರ ತಯಾರಿಕೆಯ ಶೈಲಿ ಗುಣ ಮತ್ತು ನಿಪುಣತೆ ನಿಜಕ್ಕೂ ಬೆರಗುಗೊಳಿಸುತ್ತದೆ.

ಕಾಲೋನಿಯ ಜನರು ಪ್ರಮುಖವಾಗಿ ಹಾರಗಳನ್ನು ತಯಾರಿಸುವ ಮತ್ತು ಮಾರಾಟ ಮಾಡುವುದರಿಂದಲೇ ಸುಮಾರು ೨೮ ಕುಟುಂಬಗಳಿಗೆ ಗುಡಿಕೈಗಾರಿಕೆಯೇ ಆರ್ಥಿಕ ಜೀವನದ ಆಧಾರ ಸ್ತಂಭವಾಗಿದೆ. ಕೆಲವೇ ತಿಂಗಳುಗಳ ಕಾಲ ತೊಡಗಿಸಿಕೊಳ್ಳುವ ಗುಡಿಕೈಗಾರಿಕೆ ಪ್ರಸಕ್ತದಲ್ಲಿ ಬಹಳ ಮಹತ್ವದಾಗಿದೆ. ಇದು ಉದ್ಯೋಗವನ್ನು ಕಲ್ಪಿಸುತ್ತಿರುವುದು ಕಾಣಬಹುದು. ಹೀಗೆ ಹಾರಗಳನ್ನು ತಯಾರಿಸುವ ಮುನ್ನ ದೈಹಿಕ ಶ್ರಮಶಕ್ತಿಯನ್ನು ಮುಖ್ಯವಾಗಿ ಪರಿಗಣಿಸಿಕೊಳ್ಳುತ್ತರೆ. ಎರಡು ತಿಂಗಳ ಕಾಲ ಮನೆಯಲ್ಲಿಯೇ ಕುಳಿತು ಅಂಗಡಿಯಿಂದ ಕೊಂಡು ತಂದ ವಿವಿಧ ಬಗೆಯ ಸಾಮಾಗ್ರಿಗಳನ್ನು ಜೊಡಣೆಯಲ್ಲಿ ತೊಡಗಿ ಅಂತಿಮ ರೂಪ ನೀಡಿ ಹಾರಗಳನ್ನು ತಯಾರಿಸುತ್ತಾರೆ. ಇಂತಹ ಹಾರಗಳು ಹಕ್ಕಿಪಿಕ್ಕಿಯರ ಕೈಚಳಕವನ್ನು ತೋರಿಸುತ್ತವೆ. ಇದರಿಂದ ವ್ಯಾಪಾರದ ಮೂಲವಾಗಿ ಈ ಹಾರಗಳನ್ನು ಮಾರಾಟ ಮಾಡಲು ಪ್ರಾರಂಭಿಸುತ್ತಾರೆ.

## ಫೋಟೊ ಹಾರಗಳ ತಯಾರಿಕೆಗೆ ಬಳಸುವ ವಸ್ತುಗಳು ಮತ್ತು ಬೆಲೆ

| ಕ್ರ.ಸಂ | ವಸ್ತುಗಳು | ಪ್ರಮಾಣ | ಬೆಲೆ |
|---|---|---|---|
| ೧ | ವೈರ್ | ೩೦೦ ಗ್ರಾಂ | ೪೦.೦೦ |
| ೨ | ಬಟ್ಟೆಹೂ | ೩೦೦ ಹೂ | ೧೦೦.೦೦ |
| ೩ | ಚಂಪೇರಿ | ೧ ಕೆ.ಜಿ | ೧೫೦.೦೦ |
| ೪ | ಮಣಿ | ೧ ಕೆ.ಜಿ | ೧೦೦.೦೦ |
| ೫ | ಗೋಲ್ಡ್‌ಮಣಿ | ೧ ಕೆ.ಜಿ | ೩೦೦.೦೦ |
| ೬ | ರುದ್ರಾಕ್ಷಿ | ೧ ಹಾರ | ೨೫.೦೦ |
| ೭ | ಪ್ಲಾಸ್ಟಿಕ್ ಗುಂಡು | ೧ ಕೆ.ಜಿ | ೧೦೦.೦೦ |
| ೮ | ಪ್ಲಾಸ್ಟಿಕ್ ವೈರ್ | ೧೦೦ ಗ್ರಾಂ | ೨೦.೦೦ |
| ೯ | ಉಲ್ಲನ್ | ೧ ಕೆ.ಜಿ | ೨೦೦.೦೦ |
| ೧೦ | ಸುಗಂದ ಮಣಿ | ೧ ಕೆ.ಜಿ | ೧೦೦.೦೦ |
| ೧೧ | ಸ್ಟಾರ್ ಮಣಿ | ೧ ಕೆ.ಜಿ | ೧೦೦.೦೦ |
| ೧೨ | ಫಿಶ್ ವೈರ್ | ೧ ರೋಲ್ | ೫.೦೦ |
| ೧೩ | ಫೀಕ್ | ೧ ಕೆ.ಜಿ | ೧೦೦.೦೦ |

ಈ ಮೇಲಿನ ಕೋಷ್ಟಕದಲ್ಲಿರುವ ಪ್ರಮುಖ ವಸ್ತುಗಳನ್ನು ಬಳಸಿ ಹಾರಗಳನ್ನು ತಯಾರಿಸುಲು ಕನಿಷ್ಟ ೨ ತಿಂಗಳ ಕಾಲ ೬ ಜನ ಶ್ರಮವನ್ನು ವ್ಯಯಿಸಬೇಕಾಗುವುದು. ಹೀಗೆ ೬ ಜನ ಸೇರಿ ತಯಾರಿಸುವ ಹಾರಗಳ ಸಂಖ್ಯೆ ೧೦೦೦ ದಿಂದ ೨೦೦೦ವರೆಗೆ ಮಾಡಲಾಗುತ್ತದೆ. ಹಾರಗಳನ್ನು ತಯಾರಿಸಿದ ನಂತರ ವ್ಯಾಪಾರದ ಪೂರ್ವ ಸಿದ್ದತೆ ನಡೆಸುವುದು. ತಯಾರಿಕಾ ಹಂತದ ಮಧ್ಯದಲ್ಲಿಯೇ ವ್ಯಾಪಾರಕ್ಕೆ ಹೋಗುವದಿಲ್ಲ. ಒಮ್ಮೆ ವ್ಯಾಪಾರಕ್ಕೆ ಹೊರಟರೆ ಮುಗಿಯಿತು ಮತ್ತೆ ವಾಪಾಸ್ಸು ಬರುವುದು ಪೂರ್ತಿ ಮಾರಾಟದ ನಂತರವೇ.

## ವ್ಯಾಪಾರದ ತಿಂಗಳು ಮತ್ತು ತಯಾರಿಕೆಯ ತಿಂಗಳು ರೇಖಾನಕ್ಷೆ

| ಕ್ರ.ಸಂ | ಬಗೆಗಳು | ಜ | ಫೆ | ಮಾ | ಏ | ಮೇ | ಜೂ | ಜು | ಆ | ಸೆ | ಅ | ನ | ಡಿ |
|---|---|---|---|---|---|---|---|---|---|---|---|---|---|
| ೧ | ತಯಾರಿಕೆ | | | | | | | | | | | | |
| ೨ | ಮಾರಾಟ | | | | | | | | | | | | |

ಸಾಮಾನ್ಯವಾಗಿ ಹಕ್ಕಿಪಿಕ್ಕಿಯರು ಮಾರಾಟದ ತಿಂಗಳುಗಳು ಹಿಂದು ಹಬ್ಬಗಳ ತಿಂಗಳುಗಳೇ ಹೆಚ್ಚು. ಈ ಹಬ್ಬಗಳು ವ್ಯಾಪಾರಕ್ಕೆ ಪೂರಕವಾದವುಗಳು ಎನ್ನುತ್ತಾರೆ. ಮೇಲಿನ ಕೋಷ್ಟಕದಲ್ಲಿರುವಂತೆ ಅವರುಗಳು ತಯಾರಿಕ ತಿಂಗಳು ಮತ್ತು ಮಾರಾಟದ ತಿಂಗಳು ಹಬ್ಬದ ವಾತಾವರಣದ ಸನ್ನಿವೇಶಗಳೇ ಹೆಚ್ಚು ಎನ್ನುವುದು ತೋರಿಸುತ್ತದೆ. ಈ ತಿಂಗಳುಗಳಲ್ಲಿ ಮಾರಾಟದ ಸಾಮಾಗ್ರಿಗಳನ್ನು ಹೊತ್ತುಕೊಂಡು ವ್ಯಾಪಾರಕ್ಕೆ ಅಲೆಯುವುದು ಸಾಮಾನ್ಯವಾಗಿದೆ.

ವ್ಯಾಪಾರಕ್ಕಾಗಿಯೇ ಕಾಲೋನಿಯನ್ನು ೩ ತಿಂಗಳು ಕಾಲ ತ್ಯಜಿಸುವುದು ವಾಸ್ತವವಾಗಿದೆ. ೩ ತಿಂಗಳು ಕಾಲ ಅಲೆಮಾರಿಯಾಗಿ ಜೀವಿಸುವುದನ್ನು ಹಕ್ಕಿಪಿಕ್ಕಿಯರು ಇನ್ನು ಬಿಡದೆ ಇರುವುದನ್ನು ಕಾಣಬಹುದು. ಮಾರಾಟದ ಸಲುವಾಗಿ ದೂರದ ಹೊರ ರಾಜ್ಯಗಳಿಗೆ ವಲಸೆ ಹೋಗುವುದು ರೂಢಿಯಲ್ಲಿದೆ ಅಂತಹ ಪ್ರಮುಖ ರಾಜ್ಯಗಳೆಂದರೆ ಕೇರಳ, ಗೋವಾ, ತಮಿಳುನಾಡು, ಆಂಧ್ರಪ್ರದೇಶ, ದೆಹಲಿ, ಮಹಾರಾಷ್ಟ್ರ ಮುಂತಾದವುಗಳು ಇನ್ನು ವಿಶೇಷವಾಗಿ ಧಾರ್ಮಿಕ ಸ್ಥಳಗಳಲ್ಲಿ ತಿರುಪತಿ, ಧರ್ಮಸ್ಥಳ, ಮಂತ್ರಾಲಯ, ಹೊರನಾಡು ಶೃಂಗೇರಿ ಇಂತಹ ಪ್ರದೇಶಗಳಲ್ಲಿನ ಜಾತ್ರೆಯ ಸಮಯದಲ್ಲಿಯೂ ಮಾರಾಟ ಮಾಡುವವರಾಗಿದ್ದಾರೆ. ಈ ಎಲ್ಲಾ ಸ್ಥಳಗಳಲ್ಲಿ ವ್ಯಾಪಾರವು ಚೆನ್ನಾಗಿ ನಡೆಯುತ್ತದೆ ಎನ್ನುತ್ತಾರೆ.

ದಿನವೊಂದಕ್ಕೆ ೫೦ ರಿಂವ ೧೦೦ ಹಾರಗಳನ್ನು ಮಾರಾಟ ಮಾಡುತ್ತಾರೆ. ಒಂದು ಜೊತೆ ಹಾರದ ಬೆಲೆ ೧೫ ರಿಂದ ೨೫ ರೂಪಾಯಿ ಗಳ ವರೆಗೆ ಮಾರಾಟ ಮಾಡುತ್ತಾರೆ. ಮಾರಾಟದ ಸಮಯದಲ್ಲಿ ಗಂಡು ಮತ್ತು ಹೆಣ್ಣು ಜೊತೆಗೂಡಿ ಮಾರಾಟ ಮಾಡುವರು. ಹಾರಗಳ ಮಾರಾಟದಿಂದ ಆರ್ಥಿಕ ವ್ಯವಸ್ಥೆಗೆ ಸ್ವಲ್ಪಮಟ್ಟಿಗೆ ಭದ್ರತೆಯ ದಾರಿಯನ್ನು ಕಂಡುಕೊಂಡಿದ್ದಾರೆ.

### ೨. ವ್ಯಾಪಾರ

ಪ್ರಸ್ತುತ ಜೀವಿಸುವ ಪ್ರತಿಯೊಂದು ಬುಡಕಟ್ಟು ಸಮುದಾಯಕ್ಕೆ ಔದ್ಯೋಗಿಕರಣದ ಪ್ರಭಾವದ ಬಿಸಿ ಮುಟ್ಟಿರುವುದು ನಿಜ. ಇದರಿಂದ ಬದಲಾದ ಸಂಪ್ರದಾಯಗಳ ನೆರಳಿನಲ್ಲಿ ಬುಡಕಟ್ಟು ಸಮುದಾಯವಾದ ಹಕ್ಕಿಪಿಕ್ಕಿಯರ ಆರ್ಥಿಕ, ಸಾಮಾಜಿಕ ಜೀವನದ ಋತುಚಕ್ರವು ಪರಿಸರದಂತೆಯೇ ಬದಲಾಗತೊಡಗಿದೆ. ಭೌಗೋಳಿಕ ಲಕ್ಷಣಗಳು ಸ್ಥಿರವಾದ ಸ್ಥಾನೀಕರಣದ ಪ್ರಭಾವದಿಂದ ಪ್ರಾಥಮಿಕ ಹಂತವಾಗಿ ಹಲವು ವಿಧವಾದ ಉತ್ಪಾದನಾ ವಿಧಾನವನ್ನು ಗುರುತಿಸಿಕೊಳ್ಳಬೇಕಾಯಿತು. ಹಕ್ಕಿಪಿಕ್ಕಿಯರು ವ್ಯಾಪಾರವನ್ನು ಸುಮಾರು ವರ್ಷಗಳಿಂದ ಮಾಡಿಕೊಂಡು ಬಂದವರು. ಆದರೆ ಮಾರಾಟದ ಸಾಮಗ್ರಿಗಳು ಇಂದು ಬದಲಾಗಿವೆ. ಮಾರಾಟದ ಬಗ್ಗೆ ವಿಶೇಷವಾದ ಜ್ಞಾನವನ್ನು ಹೊಂದಿರುವವರೇ ಆಗಿದ್ದಾರೆ. ಆದ್ದರಿಂದ ವ್ಯಾಪಾರ ವಂಶ ಪಾರಂಪರ್ಯವಾಗಿ ಬಂದಿದೆ. ಇಂದು ವ್ಯಾಪಾರದಲ್ಲಿ ತೊಡಗಿಸಿಕೊಂಡವರಲ್ಲಿ ಮಹಿಳೆಯರೇ ಹೆಚ್ಚು. ಮಹಿಳೆಯರೇ ತಮ್ಮ ಕುಟುಂಬದ ಆರ್ಥಿಕ ಶಕ್ತಿಯ ಕೇಂದ್ರವಾಗಿದ್ದಾಳೆ. ಕಾಲೋನಿಯ ಪುರುಷರು ಮತ್ತು ಮಹಿಳೆಯರು ಸರಿಸಮಾನರಾಗಿ ದುಡಿಯುವ ಹಂತದಲ್ಲಿದ್ದಾರೆ. ಆದರೂ ಸಹ ಲಿಂಗ ತಾರತಮ್ಯ ಇದೆ. ಕಾಲೋನಿಯಲ್ಲಿ ವರ್ತಮಾನದ ಆರ್ಥಿಕ ವ್ಯವಸ್ಥೆಯ ಶಕ್ತಿ ಕೇಂದ್ರ ಬಿಂದು ವ್ಯಾಪಾರ ಮತ್ತು ಮಹಿಳೆಯರು. ಅಲೆಮಾರಿಯಾಗಿ ಅಲೆಯುತ್ತಾ ವ್ಯಾಪಾರ ಮಾಡುವ ಮಹಿಳೆಯರು ಮತ್ತು ಮಾರಾಟ ಸಾಮಾಗ್ರಿಗಳೇ ಬೇರೆ ಪುರುಷರು ಮಾರಾಟದ ಸಾಮಗ್ರಿಗಳೇ ಬೇರೆಯಾಗಿವೆ. ಹಕ್ಕಿಪಿಕ್ಕಿಯರ ವ್ಯಾಪಾರವನ್ನು ೨ ಭಾಗಗಳಾಗಿ ವಿಂಗಡಿಸಬಹುದು.

#### ಅ. ಮಹಿಳೆಯರ ವ್ಯಾಪಾರ

ಕಾಲೋನಿಯ ಎಲ್ಲಾ ಮಹಿಳೆಯರಲ್ಲೂ ಸಮನಾದ ಚಾಕಚಕ್ಯತೆಗಳು ಒಂದೇ ಸಮನಾಗಿಲ್ಲ. ಹೀಗಾಗಿ ವ್ಯಾಪಾರದಲ್ಲಿ ವಿಶಿಷ್ಟತೆಯನ್ನು ಪಡೆದಿರುವ ಮಹಿಳೆಯರು ವ್ಯಾಪಾರದಲ್ಲಿಯೇ ಅಧಿಕ ಪ್ರಮಾಣದ ಶ್ರಮ

ಶಕ್ತಿಯನ್ನು ಬಳಸುವವರಾಗಿದ್ದಾರೆ. ಇನ್ನು ಉಳಿದ ಮಹಿಳೆಯರು ಕೂಲಿಯಂತಹ ಪರ್ಯಾಯ ವಿಧಾನದ ಉತ್ಪಾದನೆಯಲ್ಲಿ ತೊಡಗಿಸಿಕೊಂಡಿದ್ದಾರೆ. ವ್ಯಾಪಾರಕ್ಕಾಗಿ ಅಲೆಯುತ್ತಾ ಊರೂರು ಸುತ್ತುವುದು ಹಕ್ಕಿಪಿಕ್ಕಿಯರ ಹುಟ್ಟುಗುಣವೇ ಸರಿ. ಮಹಿಳೆಯರ ಮಾರಾಟವು ಸಹ ಚಿಕ್ಕಪುಟ್ಟ ಪಟ್ಟಣಗಳಿಂದ ಹಿಡಿದು ದೊಡ್ಡ ನಗರಗಳವರೆಗೂ ಹಬ್ಬಿದೆ. ಕೆಲವೊಂದು ವೇಳೆಯಲ್ಲಿ ವಾರದ ಸಂತೆಗಳಲ್ಲಿ, ವ್ಯಾಪಾರ ಮಾಡುವುದುಂಟು. ಮಾರಾಟದ ವಸ್ತುಗಳು ಪ್ರಮುಖವಾಗಿ ಪೇಟೆಯಿಂದಲೇ ಕೊಂಡು ತಂದು ಮಾರಾಟಮಾಡುವುದು ಮಹಿಳೆಯರ ಹವ್ಯಾಸವಾಗಿದೆ.

ಹಕ್ಕಿಪಿಕ್ಕಿ ಮಹಿಳೆಯರು ಬೀದಿ ಬೀದಿ ಅಲೆಯುತ್ತಾ ಕ್ಯಾಟೇ ಕಿರೋನಾ ಎಂದು ಕೂಗುತ್ತಾ ಕೊಳ್ಳುವವರನ್ನು ಆಕರ್ಷಿಸುತ್ತಾರೆ. ಮಾರಾಟದ ಸಾಮಾಗ್ರಿಗಳು ಸಹ ಮಹಿಳೆಯರಿಗೆ ಪ್ರಿಯವಾದವುಗಳೇ ಆಗಿವೆ. ಮಹಿಳೆಯರನ್ನು ಆಕರ್ಷಿಸುವಂತೆ ಮಾಡಿ ಅವರುಗಳ ಮನವೊಲಿಸುವಂತೆ ಮಾಡಿ ಒಂದಾದರೂ ವಸ್ತುವನ್ನು ಕೊಳ್ಳುವಂತೆ ಮಾಡುತ್ತಾರೆ. ಇದು ಇವರುಗಳ ವಿಶಿಷ್ಟ ಗುಣವಾಗಿದೆ.

ವ್ಯಾಪಾರಕ್ಕೆ ಆಯ್ಕೆ ಮಾಡಿಕೊಳ್ಳುವ ಪ್ರದೇಶಗಳು ಸಹ ಗ್ರಾಮೀಣ ಪರಿಸರಕ್ಕೆ ಸೇರಿದವುಗಳೇ ಹೆಚ್ಚು. ಗ್ರಾಮೀಣ ಭಾಗದ ಮಹಿಳೆಯರಿಗೆ ಹೆಚ್ಚು ಪ್ರಿಯವಾದ ಮತ್ತು ಅಗತ್ಯ ವಸ್ತುಗಳನ್ನು ಮಾರಾಟ ಮಾಡುತ್ತಾರೆ. ಕಾಲೋನಿಯ ಮಹಿಳಾ ವ್ಯಾಪಾರಗಾರರಲ್ಲಿ ಗುರುತಿಸಬಹುದಾದ ಅಂಶವೆಂದರೆ ಅವರುಗಳಲ್ಲಿಯೇ ವ್ಯಾಪಾರ ಮಾಡುವ ಬೀದಿಯ ಗುರುತಿಸುವಿಕೆ ಮುಖ್ಯವಾದದ್ದು. ಒಬ್ಬ ಮಹಿಳೆ ಒಂದು ಒಂದು ಬೀದಿಯನ್ನು ತಿರುಗುವಂತೆ ಅವರೇ ನಿರ್ಧರಿಸಿಕೊಳ್ಳುತ್ತಾರೆ. ಕಾಲೋನಿಯಿಂದ ವ್ಯಾಪಾರದ ಸಲುವಾಗಿ ಹೊರಡುವ ಸುಮಾರು ೩೦ ರಿಂದ ೪೦ ಮಹಿಳೆಯರು ಬೆಳಗ್ಗೆ ೮ ಗಂಟೆಗೆ ಕಾಲೋನಿಯನ್ನು ಗುಂಪಾಗಿ ತ್ಯಜಿಸುವರು. ವ್ಯಾಪಾರ ಮಾಡಿದ ನಂತರ ಸಂಜೆ ೫ ಗಂಟೆಗೆ ಎಲ್ಲಾ ಮಹಿಳೆಯರು ಬಸ್ ನಿಲ್ದಾಣದಲ್ಲಿ ಸೇರಿ ಕಾಲೋನಿಗೆ ತಂಡ ತಂಡವಾಗಿ ಮರಳುತ್ತಾರೆ. ಇದಕ್ಕೆ ಮುಖ್ಯ ಕಾರಣ ಕಾಲೋನಿಗೆ ಬರುವ ಬಸ್ ಸೌಕರ್ಯವು ಸಹ ಹೆಚ್ಚಿಗೆ ಇಲ್ಲದೆ ಇರುವುದರಿಂದ ಸಂಜೆಯ ಬಸ್ ಗೆ ಎಲ್ಲರೂ ವಾಪಸ್ಸು ಬರುವರು. ಹೀಗೆ ದಿನವೊಂದಕ್ಕೆ ಸುಮಾರು ೧೦೦ ರಿಂದ ೧೫೦ ರೂ ಮಾರಾಟ ಮಾಡುವರು. ಮಾರಾಟವಾದ ದಿನದಲ್ಲಿ ಗಳಿಸಿದ ಆದಾಯದಲ್ಲಿ ಊಟ, ತಿಂಡಿ, ಎಲ್ಲವೂ ನಡೆಯುತ್ತದೆ. ದಿನದಲ್ಲಿ ಗಳಿಸಿದ ಆದಾಯದಲ್ಲಿ ೮೦ ರಿಂದ ೧೦೦ ರೂ ಮನೆಗೆ ವಾಪಸ್ಸು ತಂದರೆ, ಬಂಡವಾಳ ಮೂಲವಾಗಿ ಬಡ್ಡಿಯನ್ನು ನೀಡಿ ಮನೆಖರ್ಚು, ಆಹಾರ ಸಾಮಗ್ರಿಗಳಿಗೆ ಬಳಸುವುದು. ಮತ್ತೆ ವ್ಯಾಪಾರದ ಉದ್ದೇಶಕ್ಕೆ ಸ್ವಲ್ಪ ಹಣವನ್ನು ಶೇಖರಿಸುವುದು ಮಹಿಳೆಯರ ದಿನಚರಿಯಾಗಿದೆ.

ಮೂಲತಃ ವ್ಯಾಪಾರ ಮಾಡುವ ಮಹಿಳೆಯರಲ್ಲಿ ಶಿಕ್ಷಣ ಪಡೆದವರು ಕಡಿಮೆ. ಹೀಗಾಗಿ ಇವರ ವ್ಯಾಪಾರಕ್ಕೆ ಅವರ ಜ್ಞಾನಶಕ್ತಿಯೇ ಕಾರಣವಾಗಿದೆ. ವ್ಯಾಪಾರ ಮಾಡುವ ಮಹಿಳೆಯರಲ್ಲಿ ಸಾಮಾನ್ಯವಾಗಿ ಮಧ್ಯಮ ವಯಸ್ಸು ಹಾಗು ಯುವ ಮಹಿಳೆಯರೇ ಹೆಚ್ಚು. ಮಹಿಳೆಯರು ಹೊಂದಿರುವ ಸಾಮಗ್ರಿಗಳು ಸುಮಾರು ೧೦೦೦ರೂಪಾಯಿಗಳ ವರೆಗಿನ ಬೆಲೆ ಬಾಳುವಂತದ್ದು. ಹೆಚ್ಚು ಬೆಲೆ ಬಾಳುವ ವಸ್ತುಗಳಾಗಿರುವುದು

ಇವರ ಮಾರಾಟಕ್ಕೆ ಸಹಾಯ ಮಾಡಿದೆ. ಹೆಚ್ಚೆಂದರೆ ೨೦ ರೂಪಾಯಿ ವಸ್ತುಗಳೇ ಹೆಚ್ಚು ದುಬಾರಿ ವಸ್ತುವಾಗಿದೆ. ಆದ್ದರಿಂದ ಮಾರಾಟವು ಸಹ ಸೀಮಿತವಾಗಿ ನಡೆಯುತ್ತದೆ. ಮಹಿಳೆಯರು ಹೊಂದಿರುವ ವಸ್ತುಗಳು, ಮಾರಾಟದರ, ಮಾರುಕಟ್ಟೆಯಿಂದ ಕೊಂಡು ತರುವ ಕೋಷ್ಟಕ ಈ ರೀತಿ ಇದೆ.

**ಮಹಿಳೆಯರ ವ್ಯಾಪಾರದ ವಸ್ತುಗಳು, ಮಾರುಕಟ್ಟೆಯ ಬೆಲೆ ಮತ್ತು ಮಾರಾಟದ ಬೆಲೆ**

| ಕ್ರ.ಸಂ | ವಸ್ತುಗಳು | ಮಾರುಕಟ್ಟೆಯ ಬೆಲೆ | ಮಾರಾಟದ ಬೆಲೆ |
|---|---|---|---|
| ೧ | ಕರಿಮಣಿ ಸರ | ೩.೦೦ | ೫.೦೦ |
| ೨ | ಸಕ್ಕರೆ ಮಣಿ | ೩.೦೦ | ೫.೦೦ |
| ೩ | ಚೈನು | ೩.೦೦ | ೫.೦೦ |
| ೪ | ಮಣಿ ಸರ | ೨.೦೦ | ೫.೦೦ |
| ೫ | ಶೈನಿಂಗ್ ಸರ | ೨.೦೦ | ೫.೦೦ |
| ೬ | ಓಲೆ | ೩.೦೦ | ೫.೦೦. |
| ೭ | ಕೈಸೆಟ್ಟು | ೩.೦೦ | ೫.೦೦ |
| ೮ | ಬೊಂಬೆ | ೭.೦೦ | ೧೦.೦೦ |
| ೯ | ದಿಬ್ಬಣಿ | ೬.೦೦ | ೧೦.೦೦ |
| ೧೦ | ಪಟ್ಟಿ (ಕತ್ತಿನ) | ೫.೦೦ | ೨೦.೦೦ |
| ೧೧ | ಕತ್ತಿನ ಸಟ್ಟು | ೧೫.೦೦ | ೨೦.೦೦ |
| ೧೨ | ಪಿರ್‌ಪಿನ್ನು | ೪.೦೦ | ೫.೦೦ |
| ೧೩ | ಕ್ಲಿಪ್ | ೨.೦೦ | ೫.೦೦ |
| ೧೪ | ನಶೆ ಕರ್ಪೂರ | ೩.೦೦ | ೫.೦೦ |
| ೧೫ | ಬಾಚಣಿಕೆ | ೨.೦೦ | ೩.೦೦ |
| ೧೬ | ಕನ್ನಡಿ | ೪.೦೦ | ೫.೦೦ |
| ೧೭ | ಗುರುಸು | ೮.೦೦ | ೧೫.೦೦ |
| ೧೮ | ರೋಸ್ ಪೌಡರ್ | ೪.೦೦ | ೭.೦೦ |
| ೧೯ | ರೋಸ್ ಹೂವ | ೩.೫೦ | ೫.೦೦ |
| ೨೦ | ಕಾಡಿಗೆ | ೧.೦೦ | ೨.೦೦ |
| ೨೧ | ಶೃಂಗಾರ್ | ೨.೦೦ | ೫.೦೦ |
| ೨೨ | ಕಾಫಿ ಫಿಲ್ಟರ್ | ೪.೦೦ | ೬.೦೦ |

ಹಕ್ಕಿಪಿಕ್ಕಿ ಕಾಲೋನಿಯ ಮಹಿಳಾ ವ್ಯಾಪಾರಗಾರ್ತಿಯಾದ ಸುಮಾರು ೫೦ ವರ್ಷ ವಯಸ್ಸಿನ ಗೇರ್ ಮಾಳು ಹೇಳುವಂತೆ 'ಸ್ವಾಮಿ, ನಾವು ದಿನಾ ಪ್ಯಾಟೆಯಾಗೆ ಬೀದಿ ಬೀದಿ ಕ್ಯಾಟೆ ಕಿರೋಣಾ ಅಂತ ಕರೆದು ಕರೆದು ವ್ಯಾಪಾರ ಮಾಡಿದರೂ ಸಿಕ್ಕೋದು ಹಣ ಕಮ್ಮಿ. ಮನೆಯಾಗೆ ಎಲ್ಲಾ ಕೆಲಸ ಮಾಡಬೇಕು. ಆಮೇಲೆ ವ್ಯಾಪಾರಕ್ಕೆ ಹೋಗಬೇಕು. ಸಾಯಂಕಾಲ ಬೇಗ ಬರಬೇಕು ಇಲ್ಲದಿದ್ದರೆ ಬಸ್ ಸಿಕ್ಕಲ್ಲ. ೧೫ ವರ್ಷದಿಂದ ನಾನು ವ್ಯಾಪಾರ ಮಾಡುತ್ತಾ ಇದ್ದೀನಿ. ವ್ಯಾಪಾರ ಆದರೆ ಆಯಿತು. ಇಲ್ಲದಿದ್ದರೆ ಇಲ್ಲ.

೧೦೦೦ರೂ. ಬಂಡವಾಳ ಹಾಕಿದರೆ ೨೦೦ ರಿಂದ ೩೦೦ ರೂ. ಸಿಕ್ಕೋದು. ಅದು ಒಂದು ವಾರ ಅಲೆಯಬೇಕು. ನಮಗೆ ಈ ವ್ಯಾಪಾರ ಬೇಜಾರು ಮಾಡಿದೆ. ಹೊಟ್ಟೆ ಪಾಡು ನಡೀಬೇಕು ಅಂತ ಮಾಡುತ್ತಿದ್ದೀನಿ ಎನ್ನುತ್ತಾಳೆ ' ಗೇರ್ ಮಾಳು. ಹೀಗೆ ವ್ಯಾಪಾರವನ್ನು ಮಾಡುವುದು ಗೃಹ ಬಳಕೆಯ ಆಸರೆಯಾಗಿ ಎನ್ನುವಂತಹುದು ತಿಳಿಯಬಹುದು. ಕಾಲೋನಿಯಲ್ಲಿನ ಸುಮಾರು ಮಹಿಳೆಯರ ಆಸೆ ಮನೆಯಲ್ಲಿ ಯಾವುದಾದರೂ ತರಬೇತಿ ನೀಡಿ ತಯಾರಿಸುವ ವಸ್ತುಗಳನ್ನು ಮಾಡುವ ಮತ್ತು ಬಂಡವಾಳ ಒದಗಿಸುವ ಯಾರಾದರೂ ಬಂದರೆ ಸಾಕು ನಾವುಗಳು ಮಾಡಲು ಸಿದ್ದ ಎನ್ನುತ್ತಾರೆ. ವ್ಯಾಪಾರದ ಜೀವನ ಹಲವು ಮಹಿಳೆಯರಲ್ಲಿ ಬೇಸರ ತಂದಿದೆ. ಇದರಿಂದ ಕೂಲಿಯ ಕಡೆಗೆ ನಡೆಯುವುದು ಸಾಮಾನ್ಯವಾಗಿದೆ. ಕೂಲಿಯು ಕೆಲವು ಋತುಗಳಲ್ಲಿ ಮಾತ್ರ ದೊರೆಯುವುದರಿಂದ ಜೀವನಕ್ಕೆ ವ್ಯಾಪಾರದ ಮೊರೆಹೋಗುವುದು ಅನಿವಾರ್ಯವಾಗಿದೆ.

ಆ. ಪುರುಷರ ವ್ಯಾಪಾರ

ವ್ಯಾಪಾರದಲ್ಲಿ ತೊಡಗಿಸಿಕೊಂಡವರಲ್ಲಿ ಪುರುಷರಿಗಿಂತ ಮಹಿಳೆಯರೇ ಹೆಚ್ಚು. ಆದರೆ ಪುರುಷರು ಗುರುತಿಸಿಕೊಂಡ ವ್ಯಾಪಾರವೇ ಬೇರೆ ರೀತಿ ಇದೆ. ಪುರುಷರ ವ್ಯಾಪಾರವು ಜೇನುತುಪ್ಪ ಮಾರಾಟ ಮಾಡುವುದು. ಗುಡಿಕೈಗಾರಿಕೆಯಲ್ಲಿ ತಯಾರಿಸಿದ ಪ್ರಮುಖ ವಸ್ತುಗಳನ್ನು ಮಾರಾಟ ಮಾಡುವುದಾಗಿದೆ. ಜೇನುತುಪ್ಪ ಮಾರಾಟ ಹಿಂದಿನಿಂದ ಬಂದಿದ್ದರೂ, ಇತ್ತೀಚಿನ ದಿನಗಳಲ್ಲಿ ಅರಣ್ಯ ಇಲಾಖೆಯ ಸರ್ಪಗಾವಲು ತೊಡಕಾಗಿದೆ. ಈ ಸಂದರ್ಭದಲ್ಲಿ ಬೇರೆ ಬೇರೆ ಹಳ್ಳಿಗಳ ಮತ್ತು ತೋಟಗಳು, ಬೆಟ್ಟಗುಡ್ಡಗಳಿಂದ ಶೇಖರಿಸಿಕೊಂಡು ತರುವ ಸಣ್ಣ ಜೇನುಗಳಿಂದ ತುಪ್ಪವನ್ನು ಶೇಖರಿಸಿಕೊಂಡು ಜೊತೆಗೆ ಸಕ್ಕರೆ ಪಾಕದ ಮಿಶ್ರಣವನ್ನು ಬೆರಸಿ ಮಾರಾಟ ಮಾಡುತ್ತಿದ್ದಾರೆ. ಇಂದು ಹೆಚ್ಚಿನ ಆದಾಯ ತರುವ ಉದ್ಯೋಗವಲ್ಲದಿದ್ದರೂ ಸಹ ಇದರಲ್ಲಿ ತೊಡಗಿರುವುದು ಒಂದು ವಿಶೇಷವಾದರು, ಮನಸ್ಸಿಗೆ ಸಂತೋಷ ಕೊಡುವ ಕೆಲಸವಾಗಿದೆ ಎನ್ನುತ್ತಾರೆ.

ಜೇನುತುಪ್ಪದ ಮಾರಾಟದಲ್ಲಿ ತೊಡಗಿಸಿಕೊಂಡವರ ಸಂಖ್ಯೆ ೮ ಜನ. ಪ್ರತಿಯೊಬ್ಬರು ಜೇನು ಕಿತ್ತುಕೊಂಡುಬರುವ ವಿಷಯದಲ್ಲಿ ಬಹಳ ಅನುಭವ ಹೊಂದಿರುವವರೇ . ತಿಂಗಳಿಗೆ ಎರಡು ಮೂರು ಬಾರಿ ಜೇನು ಸಂಗ್ರಹಿಸಲು ಹೊರಟು ಹಲವಾರು ಬೆಟ್ಟಗಳನ್ನು ಸುತ್ತುತ್ತಾರೆ. ಜೇನುತುಪ್ಪವನ್ನು ಬಾಟಲಿಯಲ್ಲಿ ೧ ರಿಂದ ೧.೫ ಕೆ.ಜಿ.ವರೆಗೆ ತುಂಬಿಕೊಂಡು ಸರಕಾರಿ ಕಚೇರಿಗಳ ಬಳಿ ಊಟದ ಸಮಯದಲ್ಲಿ ಮಾರಾಟ ಮಾಡುತ್ತಾರೆ. ಹೀಗೆ ಮಾಡುವ ವ್ಯಾಪಾರವು ಅನಿಶ್ಚಿತತೆಯಿಂದ ಕೂಡಿದೆ. ವ್ಯಾಪಾರವಾದರೆ ಆಯಿತು, ಇಲ್ಲದಿದ್ದರೆ ಇಲ್ಲ. ವ್ಯಾಪಾರ ಇಂದು ಅನಿಶ್ಚಿತತೆಯಿಂದ ಕೂಡಿದ್ದರೂ ದುಡಿಯಲೇಬೇಕಾಗಿದೆ. ಪರ್ಯಾಯ ವೃತ್ತಿಗಳ ತಿಳುವಳಿಕೆ ಇಲ್ಲದಿರುವುದು ಇದಕ್ಕೆ ಕಾರಣವಾಗಿದೆ.

ವ್ಯಾಪಾರವು ವಂಶ ಪಾರಂಪರಾಗತವಾಗಿ ಬಂದಿದ್ದರೂ ಬಿಡದೆ ಮುನ್ನಡೆಸುತ್ತಿರುವವರೇ ಹೆಚ್ಚು. ಆದರೆ ವ್ಯಾಪಾರ ಸಾಮಗ್ರಿಗಳಲ್ಲಿ ಬದಲಾದ ಸಮಾಜದಲ್ಲಿನ ಬೇಕು ಬೇಡಗಳಂತೆ ಬದಲಾವಣೆ

ಮಾಡಿಕೊಂಡಿದ್ದಾರೆ. ಹೆಚ್ಚು ಮಹಿಳೆಯರೇ ತೊಡಗಿರುವ ವ್ಯಾಪಾರವು ಇಂದು ಅವರುಗಳ ಕುಟುಂಬಕ್ಕೆ ದುಡಿಯುವುದು ಅತಿ ಮುಖ್ಯವಾಗಿದೆ. ಕುಟುಂಬದ ಸಂಪೂರ್ಣ ಹಿಡಿತವು ಮಹಿಳೆಯರಲ್ಲಿಯೇ ಇರುವುದು. ಮಾತ್ರ ಪ್ರಾಧಾನ್ಯತೆಯನ್ನು ತೋರಿಸುವಂತಹದು. ಹೀಗಾಗಿ ಕಾಲದ ಬದಲಾವಣೆಯಾದರೂ ಜೀವಿಸುವ ವಿವಿಧ ಮಜಲುಗಳ ಆಯಾಮಗಳು ಇನ್ನು ಬದಲಾಗದೇ ಅದೇ ರೀತಿ ಉಳಿದಿವೆ.

ಮೂಲಭೂತ ಅವಶ್ಯಕತೆಗಳನ್ನು ಪಡೆಯದ ಕಾಲೋನಿಯು ವ್ಯಕ್ತಿಯ ಬದುಕಿನ ವಾಸ್ತವ ಜೀವನದ ಹತ್ತಿರಕ್ಕೆ ಸಮೀಪವು ಇಲ್ಲವಾಗದೆ ಇರುವುದು. ಹೀಗೆ ಬದಲಾಗುತ್ತಿರುವ ಸಾಮಾಜಿಕ ವ್ಯವಸ್ಥೆಯೊಂದಿಗೆ ಜೀವಿಸಲು ತೊಡಗಿಸಿಕೊಂಡ ವೃತ್ತಿಗಳು ಹಕ್ಕಿಪಿಕ್ಕಿಯರನ್ನು ಹೆಚ್ಚು ಸಫಲತೆಯೇನೂ ಮಾಡಿಲ್ಲವಾದರೂ, ಜೀವಿಸಲು ಬೇಕಾದ ಉದ್ಯೋಗದ ಆಸರೆ ಹೊಂದಿರುವುದು ಅಗತ್ಯ. ಜೀವನ ಮಟ್ಟ ಏರಿಕೆಗೆ ದುಡಿಯುವುದು ಅನಿವಾರ್ಯ. ದೊರೆಯುವ ಪರಿಸರದ ಸಂಪನ್ಮೂಲಗಳ ಜೊತೆಗೆ ಕರಕುಶಲ ಕಲೆಯ ಉತ್ಪಾದನೆ ಮಾಡುವವರಾಗಿದ್ದಾರೆ. ಕಾಲೋನಿಯಲ್ಲಿ ಶೇಕಡಾ ೪೦ ರಷ್ಟು ಜನರು ವ್ಯಾಪಾರವನ್ನು ನಂಬಿ ಜೀವಿಸುವ ಕುಟುಂಬಗಳಾಗಿವೆ. ದುಡಿಯುವ ಅಥವಾ ಗಳಿಸುವ ಆದಾಯದಲ್ಲಿ ಅರ್ಧದಷ್ಟು ಬಡ್ಡಿಯರೂಪದಲ್ಲಿ ಸಾಲಗಳಿಗೆ ಸೋರಿ ಹೋಗುತ್ತದೆ. ವ್ಯಾಪಾರವು ದಿನಾಲೂ ಹಣದ ಚಲಾವಣೆಯನ್ನು ಮಾಡುವಂತೆ ಮಾಡಿದೆಯಾದರೂ ಹೆಚ್ಚಿನ ಪ್ರಮಾಣದ ಬದಲಾವಣೆ ಅಥವಾ ಪ್ರಗತಿ ಈ ಜನರಲ್ಲಿ ಇನ್ನೂ ಕಾಣಲಾಗುವುದಿಲ್ಲ.

### ೩. ಕೂಲಿ

ಪ್ರಸ್ತುತದಲ್ಲಿ ಹಕ್ಕಿಪಿಕ್ಕಿಯರು ಜೀವಿಸುವ ಜೀವನಕ್ಕೆ ಆಹಾರದ ಅಗತ್ಯತೆ, ಉತ್ಪಾದನೆ ಮುಖ್ಯವಾಗಿರುವುದರಿಂದ ಅವಲಂಬಿಸಿರುವ ಕ್ಷೇತ್ರಗಳು ವಿಭಿನ್ನವಾಗಿವೆ. ಅಲೆಮಾರಿಗಳಾದ ಹಕ್ಕಿಪಿಕ್ಕಿಯರು ನೆಲೆನಿಂತ ನಂತರ ದಿನಗಳಲ್ಲಿ ರೂಪಿಸಿಕೊಂಡ ವಿಭಿನ್ನವಾದ ಉತ್ಪಾದನಾ ಮಾರ್ಗದಲ್ಲಿ ಕೂಲಿಯೂ ಸಹ ಗಣನೀಯ ಪ್ರಭಾವ ಬೀರಿದೆ. ಆರಂಭದ ದಿನಗಳಲ್ಲಿ ಭೂಮಿಯನ್ನು ನಂಬಿ ದುಡಿದ ಹಕ್ಕಿಪಿಕ್ಕಿಯರು ಇಂದು ಬಹುಸಂಖ್ಯಾತ ಜನರು. ಸುತ್ತಲ ಗ್ರಾಮಗಳ ವ್ಯವಸಾಯಗಾರರ ಮನೆಗಳಲ್ಲಿ ಕೂಲಿಯ ಕೆಲಸಗಾರರಾಗಿ ದುಡಿಯುತ್ತಿರುವುದನ್ನು ಕಾಣಬಹುದು. ಬನ್ನೇರುಘಟ್ಟದ ಪರಿಸರದಲ್ಲಿ ಸ್ಥಿರವಾಗಿ ನೆಲೆನಿಂತ ನಂತರ ಸಾಮಾಜಿಕ ಪರಿವರ್ತನೆ ಸಾಧ್ಯವಾಗಿದೆ. ಊರೂರು ಅಲೆಮಾರಿಯಾಗಿ ಅಲೆಯುತ್ತಿದ್ದ ಮತ್ತು ಬೇಟೆಯಲ್ಲಿ ತೊಡಗಿದ್ದ ದಿನಗಳು ಇಂದು ಬಹಳಷ್ಟು ಮಾಯವಾಗಿವೆ. ಆದರೂ ಸಹ ಕೆಲವು ಕುಟುಂಬಗಳು ಅಲೆಮಾರಿತನವನ್ನು ಸಂಪೂರ್ಣ ಬಿಡದೆ ಇರುವುದನ್ನು ಗುರುತಿಸಬಹುದು. ಪ್ರಸ್ತುತ ಪರಿಸ್ಥಿತಿಯಲ್ಲಿ ಕಾಲೋನಿಯ ಜನರು ಸಾಮಾನ್ಯ ಹಳ್ಳಿಗಳ ಜನರು ಜೀವಿಸುವಂತೆ, ಸಂಪ್ರದಾಯಗಳು, ರೂಢಿಗಳು ಬೆಳಸಿಕೊಂಡು ಸುತ್ತಲ ಸಮುದಾಯದ ಜನರಂತೆ ಪರಿವರ್ತನೆಯನ್ನು ಬಯಸಿರುವ ಹಕ್ಕಿಪಿಕ್ಕಿಯರು ಸಾಮಾಜಿಕ ವ್ಯವಸ್ಥೆಯಲ್ಲಿ ಇನ್ನು ಅಸಡ್ಡೆಯಲ್ಲಿಯೇ ಜೀವಿಸುವವರಾಗಿದ್ದಾರೆ. ಕೂಲಿಯಿಂದರೆ ಸಾಮಾನ್ಯವಾಗಿ ದಿನದ ಕೊನೆಯಲ್ಲಿ ಅಥವಾ ವಾರದ ಕೊನೆಯಲ್ಲಿ ಶ್ರಮವನ್ನು ವ್ಯಯಿಸಿದ ಶ್ರಮಿಕನಿಗೆ

ಕೊಡುವ ಸಂಭಾವನೆ ಅಥವಾ ವಸ್ತುಗಳನ್ನು ಉತ್ಪಾದಿಸಲು ಕೊಡುವ ಪ್ರತಿಫಲವೇ ಕೂಲಿ. ಅಂದರೆ ಉತ್ಪಾದನೆಯಲ್ಲಿ ಪರಿಶ್ರಮ ಶಕ್ತಿಗಾಗಿ ಕೂಲಿಯನ್ನು ಕೊಡಲಾಗುತ್ತದೆ. ಕಾರ್ಮಿಕರು ತಮ್ಮ ಶಕ್ತಿ ಸಾಮರ್ಥ್ಯ ಕೌಶಲ್ಯಗಳನ್ನು ಒಡೆಯನ ಅಥವಾ ಮಾಲಿಕನ ವಶಕ್ಕೆ ಒಪ್ಪಿಸಿ ಅದಕ್ಕೆ ಪ್ರತಿಫಲವಾಗಿ ಸಂಭಾವನೆ ಪಡೆಯುವುದೇ ಕೂಲಿ ಎನ್ನಬಹುದಾಗಿದೆ. ಕೂಲಿಯ ನಿರ್ಧಾರದಲ್ಲಿ ಕಾರ್ಮಿಕರ ದುಡಿಮೆಯ ಮತ್ತು ಲಭ್ಯವಾದ ಉತ್ಪನ್ನದ ಮೊತ್ತಕ್ಕೆ ಅನುಗುಣವಾಗಿ ಅವರಿಗೆ ಕೂಲಿಯನ್ನು ನಿರ್ಧರಿಸಲಾಗುತ್ತದೆ.

ಹಕ್ಕಿಪಿಕ್ಕಿ ಕಾಲೋನಿಯ ಬಹಳಷ್ಟು ಮಂದಿ ಉತ್ಪಾದನಾ ಮಾರ್ಗವಾಗಿ ಕುಟುಂಬದ ನಿರ್ವಹಣೆಗೆ ಕಂಡುಕೊಂಡ ಪರ್ಯಾಯ ಮಾರ್ಗಗಳಲ್ಲಿ ಕೂಲಿಯು ಒಂದಾಗಿದೆ. ಇಂದು ಇದು ಮುಖ್ಯವಾಗಿದೆ. ಕಾಲೋನಿಯ ಜನರಲ್ಲಿ ಈ ಕೂಲಿಯು ಹಕ್ಕಿಪಿಕ್ಕಿಯರನ್ನು ಸುತ್ತಲ ಸಮುದಾಯಗಳ ಜೊತೆಗೆ ಬೆರೆಯುವಂತೆ ಸ್ನೇಹ, ಸೌಹಾರ್ದತೆ ಬೆಳೆಯುವಂತೆ ಮಾಡಿದೆ. ಇದರಿಂದ ಇಂದು ಹಕ್ಕಿಪಿಕ್ಕಿಯರ ಜೀವನ ವಿಧಾನ ರೀತಿ, ನೀತಿಗಳಲ್ಲಿ ಸಾಕಷ್ಟು ಬದಲಾವಣೆಗಳು ಕಂಡುಬರುತ್ತವೆ. ಕೂಲಿಯಲ್ಲಿ ಗಂಡಸರು, ಹೆಂಗಸರು ಸಮವಾಗಿ ವಿವಿಧ ಬಗೆಯ ಋತುಗಳಲ್ಲಿ ದುಡಿಯುವವರಾಗಿದ್ದಾರೆ. ಕೂಲಿಯಲ್ಲಿ ತೊಡಗಿಸಿಕೊಂಡ ಕುಟುಂಬವು ಮುಖ್ಯವಾಗಿತನ್ನ ಆರ್ಥಿಕ ಸ್ಥಿತಿಯನ್ನು ಉತ್ತಮ ಪಡಿಸಿಕೊಳ್ಳಲು ಆಹಾರದ ಮೂಲವಾಗಿ ಆಯ್ದುಕೊಂಡು ಜೀವಿಸುತ್ತಿರುವವರೇ ಹೆಚ್ಚು. ಅವಲಂಬಿಸಿರುವ ಕೂಲಿಯ ವೃತ್ತಿಯು ಹಕ್ಕಿಪಿಕ್ಕಿಯರ ಜೀವಿಸುವ ಜೀವನ ವಿಧಾನ, ಮನೋಭಾವನೆ ಎಲ್ಲವೂ ಬದಲಾವಣೆಗೊಂಡು ಜೀವಿಸುತ್ತಿರುವುದು ಕಾಣಬಹುದು.

ಕೂಲಿಯಲ್ಲಿ ತೊಡಗಿಸಿಕೊಂಡ ಪುರುಷರು ಮತ್ತು ಮಹಿಳೆಯರ ಕುಟುಂಬಗಳ ಸಂಖ್ಯೆ

| ಕ್ರ.ಸಂ | ವಿವರಗಳು | ಸಂಖ್ಯೆ |
|---|---|---|
| ೧ | ಪುರುಷರು | ೨೮ |
| ೨ | ವಿವಾಹಿತರು | ೨೩ |
| ೩ | ಮಹಿಳೆಯರು | ೧೯ |
| ೪ | ವಿವಾಹಿತರು | ೧೯ |
| ೫ | ಕೂಲಿಯಲ್ಲಿ ತೊಡಗಿಸಿಕೊಂಡ ಕುಟುಂಬಗಳ ಸಂಖ್ಯೆ | ೩೧ |

ಕೋಷ್ಟಕದಲ್ಲಿ ತೋರಿಸುವಂತೆ ಹಕ್ಕಿಪಿಕ್ಕಿ ಕಾಲೋನಿಯಲ್ಲಿ ಕೂಲಿಯಲ್ಲಿ ತೊಡಗಿಸಿಕೊಂಡ ಕುಟುಂಬಗಳ ಸಂಖ್ಯೆ, ಪುರುಷರು, ಮಹಿಳೆಯರು, ವಯಸ್ಸಿನ ಅಂತರ ಎಲ್ಲವೂ ಕಾಲೋನಿಯ ಜನರಲ್ಲಿನ ಬಹಳ ಗಟ್ಟಿಯಾದ ನೆಲೆಯನ್ನು ಹೊಂದಿದೆ. ಕೂಲಿಯಲ್ಲಿ ತೊಡಗಿರುವ ಕುಟುಂಬಗಳು ಹಲವು ಉಪವೃತ್ತಿಗಳಲ್ಲಿಯೂ ದುಡಿಯುವವರಾಗಿದ್ದಾರೆ. ಕೆಲವು ಕುಟುಂಬಗಳಲ್ಲಿ ಪುರುಷರು ಮಾತ್ರ ಕೂಲಿಯಲ್ಲಿ ತೊಡಗಿಸಿಕೊಂಡಿದ್ದಾರೆ. ಇನ್ನೂ ಕೆಲವು ಕುಟುಂಬಗಳಲ್ಲಿ ಮಹಿಳೆಯರು ಮಾತ್ರ ಕೂಲಿಯಲ್ಲಿ

ತೊಡಗಿಸಿಕೊಂಡಿದ್ದಾರೆ. ಇಂತಹ ಕುಟುಂಬಗಳಲ್ಲಿ ಪುರುಷರು ಗುಡಿಕೈಗಾರಿಕೆಯಲ್ಲಿಯೂ, ಮಹಿಳೆಯರು ವ್ಯಾಪಾರದಲ್ಲಿಯೂ ನಿರತವಾಗಿದ್ದಾರೆ.

ಹಕ್ಕಿಪಿಕ್ಕಿಯರು ಮಾಡುವ ಕೂಲಿಯಲ್ಲಿ ಎರಡು ವಿಧವಾಗಿ ಗುರುತಿಸಬಹುದು.

೧. ದಿನದ ಕೂಲಿ

೨. ವಾರದ ಕೂಲಿ

**ಕೂಲಿಯ ವಿಧಗಳು**

| ಕ್ರ.ಸಂ | ಲಿಂಗ | ವಾರದ ಕೂಲಿ | ದಿನದ ಕೂಲಿ |
|---|---|---|---|
| ೧ | ಪುರುಷರು | ೧೫ | ೧೫ |
| ೨ | ಮಹಿಳೆಯರು | ೬ | ೧೭ |

ಸಾಮಾನ್ಯವಾಗಿ ದಿನದ ಕೂಲಿಯಲ್ಲಿ ಹೆಚ್ಚು ಪುರುಷರು ಮತ್ತು ಮಹಿಳೆಯರು ಕಾರ್ಯನಿರತರಾಗಿವರು. ಕೊಷ್ಟಕದಿಂದ ಕಾಣಬಹುದಾಗಿದೆ. ದಿನದ ಕೂಲಿಯು ಮುಖ್ಯವಾಗಿ ಬೆಳಿಗ್ಗೆ ೯ ಗಂಟೆಯಿಂದ ಸಂಜೆ ೫ ಗಂಟೆಯವರೆಗೆ ನಿಗದಿ ಪಡಿಸಿರುವುದು ಕಾಣಬಹುದು. ದಿನದ ಕೂಲಿ ಮಾಡುವವರಿಗೆ ಪುರುಷರಾಗಿಲಿ,ಮಹಿಳೆಯರಾಗಲಿ ಮಧ್ಯಾನ್ನದ ಊಟದ ವ್ಯವಸ್ಥೆಯನ್ನು ಮಾಡಿರುವರು. ಊಟದ ವ್ಯವಸ್ಥೆಯು ಹಳ್ಳಿಗಳಲ್ಲಿ ಮಾಡುವ ಕೂಲಿಯ ಕೆಲಸದ ಸಮಯದಲ್ಲಿ ಮಾತ್ರ ಇರುತ್ತದೆ.

ವಾರದ ಕೂಲಿಯು ಒಂದು ವಾರದ ಅವಧಿಯ ೬ ದಿನಗಳ ಸೇವೆಯನ್ನು ಪರಿಗಣಿಸಲಾಗುತ್ತದೆ. ವಾರದಲ್ಲಿ ಒಂದು ದಿನ ಮಾತ್ರ ರಜೆ ತೆಗೆದುಕೊಳ್ಳುತ್ತಾರೆ. ಹಕ್ಕಿಪಿಕ್ಕಿಯರು ವಾರವನ್ನು ತಮ್ಮ ಅನುಕೂಲದ ದೃಷ್ಟಿಯಿಂದ ಬುಧವಾರದಿಂದ ಸೋಮವಾರದವರೆಗೆ ನಿಗಧಿ ಮಾಡಿಕೊಂಡಿದ್ದಾರೆ. ಮಂಗಳವಾರ ಬನ್ನೇರುಘಟ್ಟದಲ್ಲಿ ಸಂತೆಯ. ದಿನವಾದ್ದರಿಂದ ಆ ದಿನ ಕೂಲಿ ಮಾಡುವುದಿಲ್ಲ. ಅಂದು ವಾರದ ದುಡಿಮೆಯ ಹಣವನ್ನು ಜೀವನಕ್ಕೆ ಅತ್ಯವಶ್ಯಕ ಹಲವಾರು ಸಾಮಗ್ರಿಗಳನ್ನು ಕೊಳ್ಳಲು ಮತ್ತು ಕೆಲವರು ವ್ಯಾಪಾರ ಮಾಡಲು ಅಂದು ಕೂಲಿಯನ್ನು ಮಾಡುವುದಿಲ್ಲ.

**ಕೂಲಿಯಲ್ಲಿ ತಾರತಮ್ಯ**

ಗ್ರಾಮೀಣ ಪ್ರದೇಶದಿಂದ ಕೂಡಿರುವ ಈ ಪ್ರದೇಶಗಳಲ್ಲಿ ಕೂಲಿಯ ತಾರತಮ್ಯ ಮುಖ್ಯವಾಗಿ ಕಂಡುಬರುವುದು. ಎಲ್ಲಾ ಸ್ಥಳಗಳಲ್ಲಿಯೂ ಪ್ರಚಲಿತದಲ್ಲಿರುವಂತೆ ಪುರಷ ಮತ್ತು ಮಹಿಳೆಯರ ನಡುವಿನ ಕೂಲಿಯ ತಾರತಮ್ಯದ ಜೊತೆಗೆ ಕೂಲಿ ನೀಡುವ ಹಣದಲ್ಲಿಯೂ ತಾರತಮ್ಯವಿದೆ. ಸರಕಾರವು ಕನಿಷ್ಟ ಕೂಲಿಯ ದರವನ್ನು ನಿಗದಿಪಡಿಸಿದ್ದರೂ ಏನೂ ಕೇಳದೆ ದುಡಿಯುತ್ತಿದ್ದಾರೆ. ಅನಕ್ಷರಸ್ಥರು ಹಕ್ಕಿಪಿಕ್ಕಿಯರು ಪುರಷರು ಮತ್ತು ಮಹಿಳೆಯರ ಕೃಷಿ ಕೂಲಿಯು ಋತುಗಳಿಗನುಸಾರವಾಗಿ ಮಾತ್ರವಲ್ಲದೆ, ಪ್ರಾಂತ್ಯದಿಂದ ಪ್ರಾಂತ್ಯಕ್ಕೆ ಹೆಚ್ಚು ಕಡಿಮೆ ಇರುವುದು ಸಹಜ. ಹೀಗಾಗಿ ಒಂದೇ ಪ್ರದೇಶದಲ್ಲಿ ಸಮಾನ ಕೆಲಸಕ್ಕೂ ಗಂಡಾಳುಗಳಿಗೆ ಬೇರೆ ಕೂಲಿ ಮತ್ತು ಹೆಣ್ಣಾಳುಗಳಿಗೆ ಬೇರೆ ಕೂಲಿ ನೀಡುತ್ತಿರುವುದು ಕಂಡುಬರುತ್ತದೆ.

ಹಕ್ಕಿಪಿಕ್ಕಿಯರಿಗೆ ದೊರೆಯುವ ಕೂಲಿಯು ಜೀವನಾವಶ್ಯಕ ಕೂಲಿಯಾಗಿಲ್ಲ. ಕಡಿಮೆ ಮಟ್ಟದಿಂದ ಕೂಡಿದೆ. ಇಂತಹ ಕೂಲಿಯಿಂದ ಕುಟುಂಬ ನಿರ್ವಹಣೆಗೆ ಸಾಕಾಗುವುದಿಲ್ಲ. ಆದ್ದರಿಂದ ಹಕ್ಕಿಪಿಕ್ಕಿಯರು ಹೆಚ್ಚು ಸಾಲಗಾರರಾಗಿಯೇ ಬದುಕುತ್ತಿರುವುದು ಗುರುತಿಸಬಹುದು. ಕೂಲಿಯಲ್ಲಿ ತೊಡಗಿಸಿಕೊಂಡ ಹಲವು ಮಹಿಳೆಯರು ಸಾಲದ ಹಣವನ್ನು ತಂದು ಗುಡಿ ಕೈಗಾರಿಕೆ ಬಂಡವಾಳವನ್ನು ಒದಗಿಸುತ್ತಿದ್ದಾರೆ. **ಹಕ್ಕಿಪಿಕ್ಕಿಯರು ಪಡೆಯುವ ಕೂಲಿಯನ್ನು ರೇಖಾ ಚಿತ್ರದಿಂದ ನೋಡಬಹುದು.**




ಮೇಲಿನ ರೇಖಚಿತ್ರದಲ್ಲಿ ತೋರಿಸಿರುವಂತೆ OX ಅಕ್ಷದ ಮೇಲೆ ದಿನ ಗುರುತಿಸಲಾಗಿದೆ. OY ಅಕ್ಷರದ ಮೇಲೆ ಕೂಲಿಯ ದರವನ್ನು ಗುರುಗಿಸಲಾಗಿದೆ. ರೇಖಾಚಿತ್ರ ೧ ರಲ್ಲಿ ತೊರಿಸುವಂತೆ OX ಅಕ್ಷರ ದಿನದಲ್ಲಿ ಪುರುಷರು A ಮಹಿಳೆಯರು B ಎಂದು ಗುರುತಿಸಲಾಗಿದ್ದು OY ರೇಖೆಯಲ್ಲಿ ದಿನಕ್ಕೆ ಪಡೆಯುವ ಕೂಲಿಯ ಮೊತ್ತವನ್ನು ಗುರುತಿಸಲಾಗಿದೆ. ಅದೇ ರೀತಿ ಚಿತ್ರ ೨ರಲ್ಲಿ ತೋರಿಸುವಂತೆ OX ಅಕ್ಷದ ಮೇಲೆ ಪುರುಷರು A ಮತ್ತು ಮಹಿಳಯರು B ಎಂದು ಗುರುತಿಸಲಾಗಿದೆ. OX ಅಕ್ಷದ ಮೇಲೆ ವಾರದ ಕೂಲಿಯನ್ನು ಗುರುತಿಸಲಾಗಿದೆ. ಚಿತ್ರ ೧ ರಲ್ಲಿ ದಿನದ ಕೂಲಿಯಲ್ಲಿ ಪುರುಷರು ದಿನಕ್ಕೆ ೮೦ರೂ.ಗಳನ್ನು ಪಡೆದರೆ ಮಹಿಳೆಯ ೫೫ ರೂ.ಗಳನ್ನು ಪಡೆಯುತ್ತಿರುವುದು ಕಂಡುಬರುತ್ತದೆ. ಪುರುಷರು ಮಹಿಳೆಯರು ಕೂಲಿಯಲ್ಲಿ ದುಡಿಯುವ ಸಮಯವು ಸಹ ಸಮ ಪ್ರಮಾಣವಾಗಿದ್ದರೂ ಕೂಲಿಯಲ್ಲಿ ತಾರತಮ್ಯವಿದೆ. ಅದೇ ರೀತಿಯಾಗಿ ವಾರದ ಕೂಲಿಯೂ ಸಹ ಪುರುಷರಿಗೆ ವಾರಕ್ಕೆ ೩೫೦ ರೂ. ಗಳಾದರೆ ಮಹಿಳೆಯರಿಗೆ ೨೪೦ ರೂ ಮಾತ್ರ ಈ ರೀತಿಯ ತಾರತಮ್ಯ ಇದೆ. ಕೂಲಿಯ ಪಾವತಿಯ ವಿಧಾನವು ವಿಚಿತ್ರವಾಗಿದೆ. ಹಲವು ಸಂದರ್ಭಗಳಲ್ಲಿ ರೂಢಿಯಲ್ಲಿರುವಂತೆ ಹಣ ರೂಪಿ ಮತ್ತು ಧಾನ್ಯದ ರೂಪದಲ್ಲಿ ನೀಡುವುದು ಕಾಣಬಹುದು. ಕೆಲವು ಬಾರಿ ಎರಡು ರೀತಿಯಿಂದಲೂ ಕೂಲಿಯ ದರವನ್ನು ನೀಡುವ ವಾಡಿಕೆ ಇದೆ. ಆಹಾರ ಧಾನ್ಯಗಳನ್ನು ಪಡೆಯುವುದು ಆಹಾರದ ಸಮಸ್ಯೆಯಿಂದಲೇ ಎನ್ನುತ್ತಾರೆ.

ಸಾಮಾನ್ಯ ಜೀವನ ಮಟ್ಟ ನಡೆಸಲು ಸಹ ಆಗದ ಕೂಲಿದರವಿದ್ದು ಹೆಚ್ಚು ದುಡಿತ ಮಾತ್ರ ಇದೆ. ಮಹಿಳೆಯರಂತೂ ಬೆಳಿಗ್ಗೆಯಿಂದಲೇ ಸಂಜೆಯವರೆಗೂ ಮೈಮುರಿದು ದುಡಿದು ಮನೆಯಲ್ಲಿಯೂ ದುಡಿಯುವ ಯಂತ್ರವಾಗಿದ್ದಾರೆ.

**ಕೂಲಿಯ ವಿಧಗಳು**

ಉದ್ಯೋಗದ ಆಸರೆಯಾಗಿ ಕುಟುಂಬ ನಿರ್ವಹಣೆಗೆ ಅವಲಂಬಿಸಿರುವ ಕೂಲಿಯು ಬದಲಾದ ವ್ಯವಸ್ಥೆಯಲ್ಲಿ ಗಮನಾರ್ಹವಾದ ಬದಲಾವಣೆಯ ವಿಷಯವಾಗಿದೆ. ಇಂತಹ ಪರಿಸ್ಥಿತಿಯಲ್ಲಿ ಬುಡಕಟ್ಟು ಸಮುದಾಯವಾದ ಹಕ್ಕಿಪಿಕ್ಕಿಯರು ರೂಢಿಸಿಕೊಂಡ ಉದ್ಯೋಗಗಳಿಗೂ ಪಾರಂಪರಿಕವಾಗಿ ಬಂದಿದ್ದ ಉದ್ಯೋಗಗಳಿಗೂ ಸಂಬಂಧವೇ ಇಲ್ಲದ ಪರಿಸ್ಥಿತಿಯಲ್ಲಿಯೂ ಆಸರೆಯಾಗಿ ಪಡೆದ ವೃತ್ತಿಗಳು ಇಂದು ಹಕ್ಕಿಪಿಕ್ಕಿಯರುನ್ನು ಹೆಚ್ಚು ವ್ಯಾಪಿಸಿವೆ. ಹೀಗಾಗಿ ಬದಲಾಗುತ್ತಿರುವ ಸಮಾಜದಲ್ಲಿ ನಾನಾ ಬದಲಾವಣೆ ಹೊಸ ಹೊಸ ಉದ್ಯೋಗಗಳ ಸೃಷ್ಠಿ ಅಭಿವೃದ್ಧಿಯ ಮಾನದಂಡಗಳು, ಬೆಳವಣಿಗೆಗಳು ನಡೆಯುತ್ತಿದ್ದರೂಹಕ್ಕಿಪಿಕ್ಕಿಯರು ಇವೆಲ್ಲವುಗಳನ್ನು ಮರೆತು ವ್ಯವಸ್ಥಿತ ಸಮಾಜದೊಂದಿಗೆ ಹೊಂದಿಕೊಂಡು ಹೋಗುವ ಅನೇಕ ವಿಧವಾದ ಉದ್ಯೋಗಳಲ್ಲಿ ತೊಡಗಿಸಿಕೊಂಡು ಜೀವಿಸುತ್ತಿರುವುದು ಇವರುಗಳ ವಿಶೇಷ ಗುಣವಾಗಿದೆ. ಕೂಲಿಯನ್ನು ಕಲ್ಪನೆಯಲ್ಲೂ ಕಾಣದ ಹಕ್ಕಿಪಿಕ್ಕಿಯರು ಪ್ರಸ್ತುತದಲ್ಲಿನ ಅವಲಂಬನೆ ಮಾಡಿಕೊಂಡ ರೀತಿಯೇ ಬೆರಗು ಗೊಳಿಸುತ್ತದೆ. ವ್ಯವಸಾಯದ ಜೊತೆ ಒಂದೇ ವಿಧವಾದ ವೃತ್ತಿಯನ್ನು ಅಲಲಂಬಿಸದೆ ಆದಾಯ ತರುವ ಅನೇಕ ವಿಧವಾದ ವೃತ್ತಿಗಳಲ್ಲಿ ತೊಡಗಿಕೊಂಡಿದ್ದಾರೆ. ಆದರೂ ಸಹ ಕಾಲೋನಿಯ ಬಹಳಷ್ಟು ಜನರು ಕೃಷಿಕೂಲಿಗಳಾಗಿದ್ದಾರೆ.

೧. ಕೃಷಿ ಕೂಲಿ
೨. ಗಾರೆ ಕೆಲಸ (ಮನೆ ಕಟ್ಟುವುದು)
೩. ಕಂದಕ ಹೊಡೆಯುವುದು
೪. ಪಾಕ್ ೯ನಲ್ಲಿ ಕಲ್ಲುಕಟ್ಟುವುದು

ಮೇಲಿನ ಎಲ್ಲಾ ವಿಧವಾದ ಕೂಲಿಗಳಲ್ಲಿ ಹಕ್ಕಿಪಿಕ್ಕಿಯರು ಇಂದು ಕಾಣಸಿಗುತ್ತಾರೆ. ಈ ವೃತ್ತಿಗಳಲ್ಲಿ ದುಡಿಯುವವರ ಪ್ರಮಾಣ ಈ ರೀತಿ ಇದೆ.

**ವಿವಿಧ ಕೂಲಿಯಲ್ಲಿ ತೊಡಗಿಸಿಕೊಂಡ ಪುರುಷ ಮತ್ತು ಮಹಿಳೆಯರ ಸಂಖ್ಯೆ**

| ಕ್ರ.ಸಂ | ಕೂಲಿ | ಪುರುಷರು | ಮಹಿಳೆಯರು |
|---|---|---|---|
| ೧ | ವ್ಯವಸಾಯ ಕೂಲಿ | ೨೮ | ೧೯ |
| ೨ | ಗಾರೆ ಕೆಲಸ ಕೂಲಿ | ೮ | ೩ |
| ೩ | ಕಂದಂಕ ಹೊಡೆಯುವುದು | ೧೧ | |
| ೪ | ಕಲ್ಲು ಕಟ್ಟುವುದು | ೧೫ | ೬ |

ಕೊಷ್ಟಕದಲ್ಲಿ ತೋರಿಸುವ ಜನಸಂಖ್ಯೆ ಮತ್ತು ಲಿಂಗದ ಆಧಾರದ ಮೇಲೆ ಕೂಲಿಯಲ್ಲಿ ದುಡಿಯುವವರ ಪ್ರಮಾಣ ಕಾಲೋನಿಯಲ್ಲಿದೆ.

ಕೃಷಿ ಕೂಲಿಯು ಋತುಮಾನವನ್ನು ಆಧರಿಸಿದೆ. ಭೂಮಾಲಿಕರು ಮಳೆಗಾಲದಲ್ಲಿ ಮಾತ್ರ ಕೆಲಸಕ್ಕೆ ನೇಮಿಸಿಕೊಳ್ಳುವುದರಿಂದ ಕೃಷಿ ಕೂಲಿಯು ಅರೆ ಉದ್ಯೋಗವಾಗಿದೆ. ಪ್ರಮುಖವಾಗಿ ನಾಟಿ ಸಮಾಯದಿಂದ ಹಿಡಿದು ಕುಯಿಲು ಬರುವವರೆಗೂ ಮಾಡುವ ಸಮಾಯದಲ್ಲಿ ಪುರಷರು ಮತ್ತು ಮಹಿಳೆಯರು ದುಡಿಯುವುದು ನಂತರದ ದಿನಗಳಲ್ಲಿ ಬೇರೆ ಉದ್ಯೋಗ ಹುಡುಕುವುದು ಮಾಡುತ್ತಿದ್ದಾರೆ. ವ್ಯವಸಾಯದ ಕೂಲಿಗಾಗಿ ಹಕ್ಕಿಪಿಕ್ಕಿ ಕಾಲೋನಿಯ ಜನರು ಸುಮಾರು ೫ ರಿಂದ ೮ ಕಿ.ಮೀ ದೂರದ ಹಳ್ಳಿಗಳಿಗೆ ಹೋಗುತ್ತಾರೆ. ಇದು ಇಂದು ಅನಿವಾರ್ಯವೂ ಸಹ. ಅಂತಹ ಹಳ್ಳಿಗಳೆಂದರೆ ಭೂತಾನಹಳ್ಳಿ, ಬನ್ನೇರುಘಟ್ಟ, ಬಾಲ್ಯಮಾರನದೊಡ್ಡಿ, ತರಳು, ತಟ್ಟುಗುಪ್ಪೆ, ವಡ್ಡರಪಾಳ್ಯ ಹಾರಗಡ್ಡೆ ಮುಂತಾದವುಗಳು.

ಗಾರೆಕೆಲಸವನ್ನು ಮಾಡುವ ಹಕ್ಕಿಪಿಕ್ಕಿಯರು ಮನೆಕಟ್ಟುವ ರೀತಿನೀತಿಗಳನ್ನು ಕಲಿತುಕೊಂಡಿದ್ದಾರೆ. ಕಾಲೋನಿಯಲ್ಲಿ ಒಟ್ಟು ೧೧ ಜನರು ಗಾರೆ ಕೆಲಸದಲ್ಲಿ ತೊಡಗಿಸಿಕೊಂಡಿದ್ದಾರೆ. ಗಾರೆ ಕೆಲಸವು ಪಕ್ಕದ ಹಳ್ಳಿಗಳಲ್ಲಿ ಇದ್ದರೆ ಕಡಮೆ ಕೂಲಿ ದೊರೆಯುವುದು. ಪಟ್ಟಣ ಪ್ರದೇಶಕ್ಕೆ ಬಂದರೆ ಪುರುಷರಿಗೆ ದಿನಕ್ಕೆ ೧೦೦ ರೂ. ಮಹಿಳೆಯರಿಗೆ ದಿನ ೭೦ ರೂ. ದೊರೆಯುವುದರಿಂದ ಗಾರೆಕೆಲಸದಲ್ಲಿ ತೊಡಗಿದ್ದಾರೆ. ಗಾರೆಕೆಲಸಕ್ಕೆ ಕುಟುಂಬದಲ್ಲಿನ ಗಂಡ ಹೆಂಡತಿ ಸೇರಿ ಹೋಗುತ್ತಾರೆ. ಜೊತೆಯಲ್ಲಿ ದುಡಿಯುವುದು ಈ ಕೆಲಸದ ವಿಶೇಷವಾಗಿದೆ. ಈ ಕೆಲಸದಲ್ಲಿ ತೊಡಗಿಸಿಕೊಂಡ ಕಾಲೋನಿಯ ಕುಟುಂಬಗಳು ಭಾನುವಾರ ಮಾತ್ರ ಕಾಲೋನಿಯಲ್ಲಿ ಕಾಣಸಿಗುತ್ತಾರೆ. ಇತರದ ದಿನಗಳಲ್ಲಿ ಕಾಣಬರುವುದಿಲ್ಲ. ಹೆಚ್ಚಿನ ಮಂದಿ ವ್ಯವಸಾಯದ ಕೆಲಸ ಇಲ್ಲದಿರುವಾಗ ಈ ಕೆಲಸದಲ್ಲಿ ಭಾಗವಹಿಸುತ್ತಾರೆ.

ಕಂದಕ ಹೊಡೆಯುವುದು ಮತ್ತು ಪಾರ್ಕ ಕೆಲಸ (ಕಲ್ಲುಕಟ್ಟುವುದು) ಹೆಚ್ಚಾಗಿ ಗಂಡಸರ ಕೆಲಸವಾಗಿದೆ. ಆದರೂ ಸಹ ಮಹಿಳೆಯರು ದುಡಿಯುತ್ತಿದ್ದಾರೆ. ದುಡಿಯುವ ಜನರ ಪ್ರಮಾಣ ಕಡಿಮೆ. ಈ ಕೆಲಸವು ಸಿಕ್ಕರೆ ಸಿಕ್ಕಿದಂತೆ ಇಲ್ಲದಿದ್ದರೆ ಇಲ್ಲ ಎಂಬಂತಿರುತ್ತದೆ. ಈ ವೃತ್ತಿಯನ್ನು ನಂಬಿ ಕುಳಿತವರಲ್ಲಿ ಪುರುಷರು ಮಾತ್ರ. ಇದೆ ಕೆಲಸ ಎಂದು ಸುಮ್ಮನೆ ಕಾಲೋನಿಯಲ್ಲಿ ಸಮಯ ವ್ಯರ್ಥಮಾಡುವವರೇ ಹೆಚ್ಚು. ಪಾರ್ಕಕೆಲಸವಿಲ್ಲದಿದ್ದರೆ ಮನೆಯಲ್ಲಿರುವುದು ಮತ್ತೇನು ಮಾಡುವುದು ಎನ್ನುತ್ತಾರೆ.

ಮನೆಯ ಜವಾಬ್ದಾರಿಯನ್ನು ಮಹಿಳೆ ನಿರ್ವಹಿಸಬೇಕಾದ ಪರಿಸ್ಥಿತಿ. ಇಂತಹ ಕುಟುಂಬದಲ್ಲಿ ಮಹಿಳೆಯು ದುಡಿದು ತರುವ ಹಣದಲ್ಲಿ ಪುರಷನಿಗೆ ( ಗಂಡನಿಗೆ) ಕುಡಿಯಲು ಹಣ ನೀಡಬೇಕು. ನಂತರ ಉಳಿದ ಹಣದಿಂದ ಸಂಸಾರ ನಡೆಯಬೇಕು ಎನ್ನುತ್ತಾರೆ.

ಹೀಗೆ ಕೂಲಿಯು ವಿವಿಧ ಬಗೆಯಲ್ಲಿ ಸಾಕಷ್ಟು ಉದ್ಯೋಗಗಳನ್ನು ನೀಡುವ ಅನುಕೂಲವಿದೆಯಾದರೂ ಸಹ ಕೂಲಿಯ ಮಟ್ಟ ತಾರತಮ್ಯ ಕೆಲಸದ ಅವಧಿ ಕೂಲಿಯ ಸಿಗುವಿಕೆಯಿಂದ ಹಕ್ಕಿಪಿಕ್ಕಿಯರು ಬೇಸರದಿಂದಲೇ ನುಡಿಯುತ್ತಾರೆ. ವರ್ಷದಲ್ಲಿ ಪುರುಷರು ೧೨೦ ದಿನಗಳು ಮತ್ತು ಮಹಿಳೆಯರು ೯೫ ರಿಂದ ೧೦೦ ದಿನಗಳು ಮತ್ರ ಕೂಲಿಯಲ್ಲಿ ತೊಡಗುವವರಾಗಿದ್ದಾರೆ.

ಸುಗ್ಗಿಯ ಸಮಯದಲ್ಲಿ ಮತ್ತು ನಾಟಿಯ ಸಮಯದಲ್ಲಿ ಉದ್ಯೋಗಗಳಿದ್ದರೆ ಉಳಿದ ದಿನಗಳಲ್ಲಿ ನಿರುದ್ಯೋಗದಿಂದ ಕೂಡುವವರಾಗಿದ್ದಾರೆ. ಕೃಷಿಕೂಲಿಯು ವರ್ಷಪೂರ್ತಿ ಹೊಂದಿರುವುದಿಲ್ಲ. ಹೀಗಾಗಿ ಅರೆ ಉದ್ಯೋಗದ ಸಮಸ್ಯೆ ಇಂದು ಕಾಲೋನಿಯ ಹಕ್ಕಿಪಿಕ್ಕಿಯರನ್ನು ಕಾಡುತ್ತಿದೆ.

ಸರಕಾರದ ಅಭಿವೃದ್ಧಿಯ ಕಲ್ಪನೆಯ ದೃಷ್ಟಿಯಿಂದ ಕಾಲೋನಿಯು ಮರೆತು ಹೋಗಿದೆ. ವ್ಯಾಪಾರದಲ್ಲಿ ತೊಡಗಿಸಿಕೊಳ್ಳಲು ಬಂಡವಾಳದ ಅವಶ್ಯಕತೆ. ಬಂಡವಾಳ ಒದಗಿಸುವ ಅಥವಾ ಯಾವುದೇ ಸ್ವಯಂಸೇವಾ ಸಂಘ ಸಂಸ್ಥೆಗಳು ಸಹ ಸಹಾಯ ಹಸ್ತ ನೀಡುತ್ತಿಲ್ಲ. ಇದರಿಂದ ಹಕ್ಕಿಪಿಕ್ಕಿಯರು ಪರ್ಯಾಯವಾಗಿ ಕುಟುಂಬದ ನಿರ್ವಹಣೆಗೆ ಸಹಾಯಕವಾಗಲು ಅವಶ್ಯಕವಾದ ಹಣಕಾಸನ್ನು ಪಡೆಯುವ ಉದ್ದೇಶದಿಂದ ಹಲವಾರು ರೀತಿಯ ಸಾಲದಲ್ಲಿ ಸಿಲುಕಿದ್ದಾರೆ.

**ಇತರೆ ವೃತ್ತಿಗಳು**

**ಬಕೀಟ್ ರಿಪೇರಿ**

ಕುಟುಂಬದ ಆರ್ಥಿಕ ಮಟ್ಟವನ್ನು ಸುಧಾರಿಸಿಕೊಂಡು ಜೀವಿಸಲು ಹಲವಾರು ಉದ್ಯೋಗಗಳಲ್ಲಿ ತೊಡಗುವುದು ಅನಿವಾರ್ಯವು ಆಗಿದೆ. ಹೀಗಾಗಿ ಬಕೀಟು ರಿಪೇರಿಯು ಈ ಜನರ ಮೇಲೆ ಪ್ರಭಾವ ಬೀರಿದೆ. ನಾಗರಿಕ ಜಗತ್ತಿನ ಸಂಪರ್ಕ, ನಗರ, ಗ್ರಾಮಗಳಲ್ಲಿ ಕೆಲಸ ಮಾಡಲು ಇಚ್ಛಿಸುವುದು ಇವರುಗಳ ಅಲೆಮಾರಿತನವನ್ನು ತೋರಿಸುತ್ತದೆ. ಭೂಮಿಯಲ್ಲಿನ ಅಸಮತೋಲನ ಮತ್ತು ಉತ್ಪಾದನಾ ವ್ಯವಸ್ಥೆಯಲ್ಲಿನ ಸಮಸ್ಯೆಗಳು ಈ ಜನರನ್ನು ಬೇರೆ ಉದ್ಯೋಗ ಆರಿಸುವಂತೆ ಮಾಡಿದೆ. ಕಾಲೋನಿಯಲ್ಲಿ ಶಿಕ್ಷಣಕ್ಕೆ ಹೆಚ್ಚಿನ ಮಹತ್ವ ನೀಡಿರುವುದಾಗಲಿ, ವಿಶೇಷವಾದ ಉದ್ಯೋಗ ತರಬೇತಿಯಾಗಲಿ ಯಾವುದೇ ಕಾರ್ಯಕ್ರಮಗಳು ನಡೆಯದೆ ಕಡೆಗಣಿಸಿರುವುದು ಇವರನ್ನು ಧೃತಿಗೆಡಿಸಿದೆ. ಹೀಗಾಗಿ ಜನತೆ ಹೊಸಹೊಸ ಉದ್ಯೋಗಗಳಲ್ಲಿ ತೊಡಗಿಸಿಕೊಂಡು ಬದಲಾದ ಪರಿಸ್ಥಿತಿಯಲ್ಲಿ ಸಾಮಾಜಿಕ-ಆರ್ಥಿಕ ಪರಿಸ್ಥಿತಿಯನ್ನು ಸುಧಾರಣೆ ಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ.

ಸರಕಾರಿ ಕೆಲಸದಲ್ಲಿ ಉದ್ಯೊಗ ದೊರಕಿಸಿಕೊಳ್ಳುವುದು ಕಷ್ಟದ ಕೆಲಸವೆಂದು ತಿಳಿದು, ಅದು ಕನಸಿನ ಮಾತು ಎಂದು ತಮ್ಮ ಕರ್ತವ್ಯ ನಿಷ್ಠೆಯಲ್ಲಿ ನಿರತರಾಗಿ ದುಡಿಯುತ್ತೇವೆ ಎನ್ನುತ್ತಾರೆ. ಹೊಟ್ಟೆ ಪಾಡಿಗಾಗಿ ಅನೇಕ ಉದ್ಯೋಗಗಳ ಬೆನ್ನು ಹತ್ತಬೇಕಾಗಿದೆ. ಹೀಗೆ ಉಪಯುಕ್ತವಾದ ಸಮಾಜದಿಂದ ಉಪಯೋಗ ಪಡೆದು ಕೊಳ್ಳುತ್ತಿದ್ದಾರೆ. ಜೀವಿಸಲು ಬೇಕಾದ ಆದಾಯ ತರುವ ಯಾವುದೇ ಉದ್ಯೋಗವಾದರೂ ಸರಿಯೇ ಅದರಲ್ಲಿ ತೊಡಗಿಸಿಕೊಂಡು ದುಡಿಯುವ ಹಂತದಲ್ಲಿರುವುದು ಬಕೀಟು ರಿಪೇರಿಗೆ ಮೂಲ ಪ್ರೇರಣೆ. ಆಹಾರದ ಮಾರ್ಗವಾಗಿ ಕಂಡುಕೊಂಡ ಬಕೀಟು ರಿಪೇರಿ ಉದ್ಯೋಗ ಶ್ರಮವನ್ನು ಅವಲಂಬಿಸಿ ದುಡಿಯುವಂತಹುದಾಗಿದೆ. ಮಾನವನ ಶ್ರಮವನ್ನು ಅವಲಂಬಿಸಿಕೊಂಡು ಬದಲಾದ ಪರಿಸ್ಥಿತಿಯಲ್ಲಿ ದುಡಿಯುತ್ತಿರುವ ಬಕೀಟು ರಿಪೇರಿಯ ಉದ್ಯೋಗದಲ್ಲಿ ದಿನವೊಂದಕ್ಕೆ ೫೦ ರಿಂದ ೧೦೦ ರೂ. ವರೆಗೂ ಗಳಿಸುತ್ತಿದ್ದಾರೆ.

ಪ್ರಸಕ್ತ ಸಮಯದಲ್ಲಿ ಬಂಡವಾಳದ ಅವಶ್ಯಕತೆ ಇರುವುದರಿಂದ ಅಂತಹ ಬಂಡವಾಳ ಪಡೆಯಲು ವಾಮನ ಮಾರ್ಗಗಳು ಅನುಸರಿಸುವ ಬದಲಾಗಿ ಈ ವೃತ್ತಿಯೇ ಹೆಚ್ಚು ಸೂಕ್ತ ಎನ್ನುತ್ತಾರೆ. ಶ್ರಮದ ಅವಲಂಬನೆ ಮತ್ತು ಕೌಶಲ್ಯದಿಂದ ಆರಂಭಿಸಿರುವ ಬಕೀಟು ರಿಪೇರಿಯು, ಉದ್ಯೋಗವನ್ನು ನೀಡುವುದಲ್ಲದೆ ಅನುಭೋಗದ ಕ್ರಿಯೆಯಲ್ಲಿ ಸ್ವಲ್ಪಮಟ್ಟಿಗೆ ಸಹಾಯವಾಗುತ್ತಿದೆ. ದಿನವೊಂದರಲ್ಲಿ ಗಳಿಸುವ ಆದಾಯವು ತಮ್ಮತಮ್ಮ ಅನುಭೋಗಕ್ಕೆ ಖರ್ಚು ಮಾಡಿಕೊಳ್ಳಲು ಮತ್ತು ಆಹಾರದ ಮೂಲವಾಗಿ ಪಡೆಯುವ ಗಳಿಕೆಗೆ ಮಾತ್ರವಾಗಿದೆ. ಕಾಲೋನಿಯಲ್ಲಿ ಬಕೀಟು ರಿಪೇರಿಯಲ್ಲಿ ತೊಡಗಿಸಿಕೊಂಡ ಕುಟುಂಬಗಳ ಸಂಖ್ಯೆ. ಪ್ರತಿಯೊಂದು ಕುಟುಂಬದಿಂದ ಒಬ್ಬರು ಉದ್ಯೋಗವನ್ನು ಅವಲಂಬಿಸಿ ದುಡಿಯಲು ಬೆಳಗ್ಗೆ ೮ ಗಂಟೆಗೆ ಕಾಲೋನಿಯನ್ನು ತ್ಯಜಿಸಿದರೆ ಸಂಜೆ ೫ ಗಂಟೆಗೆ ಮರಳಿ ಬರುವುದು. ಬಕೀಟು ರಿಪೇರಿ ಕೆಲಸ ಮಾಡುವ ಸಮಯದಲ್ಲಿ ತಮ್ಮ ಹೆಂಡತಿಯನ್ನು ವ್ಯಾಪಾರದ ಸಲುವಾಗಿ ಕರೆದೊಯ್ಯುತ್ತಾರೆ. ಜೊತೆಯಾಗಿ ಹೋಗುವ ಗಂಡ-ಹೆಂಡತಿಯರು ಎರಡು ವೃತ್ತಿಗಳನ್ನು ಒಂದೇ ಪ್ರದೇಶದಲ್ಲಿ, ಒಂದೇ ಬೀದಿಯಲ್ಲಿ ಮಾಡುವರು. ಮದ್ಯಾನ ಮತ್ತು ಸಂಜೆ ಜೊತೆಯಾಗಿ ಕಲಿತು ಮರಳಿ ಬರುವರು. ಇಬ್ಬರು ಗಳಿಸಿದ ಹಣದಿಂದ ಮನೆಯಲ್ಲಿರುವ ಮಕ್ಕಳಿಗೆ ಬೇಕರಿ ತಿಂಡಿಗಳನ್ನು ಕೊಂಡು ತರುವರು. ಇನ್ನುಳಿದ ಹಣದಲ್ಲಿ ಕುಟುಂಬ ನಿರ್ವಹಣೆಗೆ ಮತ್ತು ಕಾಲೋನಿಯಲ್ಲಿ ಸಾರಾಯಿ ಕುಡಿಯಲು ಬಳಸುತ್ತಾರೆ.

ಬಕೀಟು ರಿಪೇರಿಯಲ್ಲಿ ದುಡಿಯುವ ಕುಟುಂಬಗಳು ಸಾಮಾನ್ಯವಾಗಿ ನಗರಗಳಿಂದ ಹೆಚ್ಚು ಪ್ರಭಾವಿತರಾಗಿದ್ದಾರೆ. ಕುಟುಂಬ ಸದಸ್ಯರ ಸಂಖ್ಯೆ ಕಡಿಮೆ ಇರುವ ಕುಟುಂಬವೇ ಬಕೀಟು ರಿಪೇರಿಯಲ್ಲಿ ದುಡಿಯುವವರು ಪುರುಷರ ವಯಸ್ಸು ೩೦ ರಿಂದ ೪೫ ವರ್ಷದ ಅಂತರದವರಾಗಿದ್ದಾರೆ. ಪರಂಪಾರಾಗತ ವೃತ್ತಿಗಳು ತೊರೆದ ನಂತರ ಅಲವಂಬಿಸಿದ ಹೊಸ ವೃತ್ತಿಗಳಲ್ಲಿ ಬಕೀಟು ರಿಪೇರಿಯು ಒಂದಾಗಿದೆ. ಆದರೆ ಗಳಿಸುವ ಆದಾಯದ ಮಟ್ಟ ಮಾತ್ರ ಕಡಿಮೆ. ಇಂಥ ಪ್ರಯತ್ನಗಳು ಇಂದು ಬೇಕಾಗಿವೆ. ಆರ್ಥಿಕ ಪ್ರಗತಿಯ ಸಾಧನೆಗೆ ಬೇಕಾಗುವ ಸಂದರ್ಭದಲ್ಲಿ ಅಗತ್ಯವೂ ಹೌದು.

## ೪. ವ್ಯವಸಾಯ

ಹಕ್ಕಿಪಿಕ್ಕಿಯರು ಸುಮಾರು ೩೫೦ ಎಕರೆ ಭೂಮಿಯನ್ನು ಹೊಂದಿರುವ ಕಾಲೋನಿಯ ಮೇಲೆ ಅನೇಕ ಪ್ಲಾಂಟ್‌ರುಗಳ ಕಣ್ಣು ಬಿದ್ದಿದೆ. ಈ ಕಾಲೋನಿಯಲ್ಲಿ ಸುಮಾರು ೪೧೨ ಜನರು ವಾಸಿಸುತ್ತಿದ್ದಾರೆ. ಇವರಲ್ಲಿ ಪುರಷರು ೨೦೨ ಮತ್ತು ಮಹಿಳೆಯರು ೨೧೦ ವಾಸಿಸುತ್ತಿದ್ದು ಗ್ರಾಮೀಣ ಪ್ರದೇಶದ ಸಮುದಾಯದಂತೆ ಶೇಕಡಾ ೭೦ ತಮ್ಮನ್ನು ತೊಡಗಿಸಿಕೊಂಡು ಜೀವಿಸುತ್ತಿದ್ದಾರೆ. ಇವರುಗಳ ಪ್ರಧಾನವಾದ ಕಸಬು ಇತ್ತೀಚಿನ ದಿನಗಳಲ್ಲಿ ಅಂದರೆ ೧೯೭೨ರ ನಂತರದ ದಿನಗಳಲ್ಲಿ ವ್ಯವಸಾಯವೇ ಆಗಿದೆ. ಬನ್ನೇರುಘಟ್ಟದ ಹಕ್ಕಿಪಿಕ್ಕಿ ಕಾಲೋನಿಯು ವಿಸ್ತಾರವಾದ ಚಪ್ಪಟೆ ಭೂಮಿ, ಪಶ್ಚಿಮ ತುದಿಯಲ್ಲಿ ಬೆಟ್ಟದ ಸಾಲುಗಳಿಂದ ಕೂಡಿರುವ ಗುಡ್ಡ, ಅರಣ್ಯ ಪ್ರದೇಶಗಳಿವೆ. ಇವುಗಳ ಮಧ್ಯೆ ಹಕ್ಕಿಪಿಕ್ಕಿಯರ ವ್ಯವಸಾಯದ ಭೂಮಿ ಇದೆ. ಈ ನಿಸರ್ಗದ ಭೂಮಿಯು ಉತ್ತಮ ಮಟ್ಟದೆಂದು ಜೀವಿಸುವುದಕ್ಕಾಗುವುದಿಲ್ಲ. ಕಲ್ಲು,

ಹಳ್ಳ, ದಿಬ್ಬಗಳಿಂದ ಕೂಡಿವೆ. ಆದ್ದರಿಂದ ಎತ್ತುಗಳು ಉಳುಮೆ ಮಾಡಲು ಬಹು ಕಷ್ಟದ ಕೆಲಸವಾಗಿದೆ.

ವ್ಯವಸಾಯ ಮಾಡುವ ಭೂಮಿಯ ಮಣ್ಣು ಬಹಳ ಗಟ್ಟಿಯಾಗಿದೆ. ವರ್ಷದಲ್ಲಿ ಎರಡು ಭಾರಿಕುಂಟೆಯನ್ನು ಒಡೆಯಬೇಕಾಗುತ್ತದೆ. ಹೀಗಾಗಿ; ಈ ನೆಲದಲ್ಲಿ ಗೊಬ್ಬರ ಇಲ್ಲದೆ ರಾಗಿಯನ್ನು ಬೆಳೆಯಬಹುದು. ಆದ್ದರಿಂದಲೇ ಈ ಭೂಮಿ ರಾಗಿ ಬೆಳೆಯಲು ತಕ್ಕನೆಲವೆಂದು ಗುರುತಿಸಬಹುದು. ಸುತ್ತಲಿನ ಹಲವು ಹಳ್ಳಿಗಳ ರೈತರು ಬೆಳೆಯುತ್ತಿರುವ ಪ್ರಮುಖ ಉತ್ಪನ್ನವು ಸಹ ರಾಗಿಯಾಗಿದೆ. ಮರುಳು ಮಿಶ್ರಿತ ಮಣ್ಣು, ಕಪ್ಪು ಮಿಶ್ರಿತ ಬೂದು ಬಣ್ಣವನ್ನ ಹೊಂದಿದೆ. ವ್ಯವಸಾಯಕ್ಕೆ ಮಳೆಯ ನೀರನ್ನೇ ಅವಲಂಬಿಸಿ ಬೆಳೆಯುವ ವ್ಯವಸಾಯಗಾರರಾಗಿದ್ದಾರೆ. ಆರಂಭದಲ್ಲಿ ಆಧುನಿಕ ವ್ಯವಸಾಯ ತಜ್ಞರು ೧೯೬೭ರಲ್ಲಿ ಕಾಲೋನಿಯ ಭೂಮಿಯಲ್ಲಿ ಜಲವನ್ನು ಪರೀಕ್ಷಿಸಿದ್ದಾರೆ. ನೀರಿನ ಮೂಲವಾಗಿ ಹಲವು ಬೋರ್‌ವೆಲ್‌ಗಳು ಹಾಕಿದ್ದರೂ ನೀರು ದೊರೆತಿಲ್ಲ. ಸುತ್ತಲೂ ಬೆಟ್ಟಗಳಿಂದ ಕೂಡಿರುವುದರಿಂದ ಬೆಟ್ಟಗುಡ್ಡಗಳಲ್ಲಿ ಬೀಳುವ ಮಳೆನೀರನ್ನು ಕಲ್ಲುಗಳ ಮಧ್ಯೆ ಹಾಯ್ದು ಸುಲಭವಾಗಿ ಬಸಿಯುದಂತೆ ಒಡ್ಡುಗಳನ್ನು ನಿರ್ಮಿಸಿದ್ದಾರೆ. ಈ ಒಡ್ಡುಗಳು ಸಾಕಾಗದ ಕಾರಣ ಎರೆಡು ಕೆರೆಗಳನ್ನು ನಿರ್ಮಿಸಿ ನೀರನ್ನು ಶೇಖರಿಸುವಂತೆ ಮಾಡಲಾಗಿದೆ. ಈ ನೀರಿನ ಸಹಾಯವು ವ್ಯವಸಾಯಕ್ಕೆ ಅನುಕೂಲವಾಗಿದೆ. ಇದರಿಂದ ಹಕ್ಕಿಪಿಕ್ಕಿಯರು ವ್ಯವಸಾಯ ಪ್ರಾರಂಭೀಸಿ ದುಡಿಯುವವರಾಗಿದ್ದಾರೆ.

**ಕಾಲೋನಿಯ ವ್ಯವಸಾಯ ವೈಶಿಷ್ಟ್ಯಗಳು**

ಅಲೆಮಾರಿಗಳಾದ ಹಕ್ಕಿಪಿಕ್ಕಿಯರಿಗೆ ಭೂಮಿಯನ್ನು ಸರಕಾರ ಒದಗಿಸಿದ ನಂತರ ವ್ಯವಸಾಯಕ್ಕೆ ಮಾರ್ಗದರ್ಶನ ನೀಡಿದವರುಗಳಲ್ಲಿ ವಿದೇಶಿ ಮಹಿಳಾ ಸೇವಾ ಸಂಘದ ಕಾರ್ಯಕರ್ತರು. ಇವರುಗಳ ಮಾರ್ಗದರ್ಶದಲ್ಲಿ ಹೆಚ್ಚೆಂದರೆ ಶೇಕಡಾ ೬೦ ರಷ್ಟು ಭೂಭಾಗವು ವ್ಯವಸಾಯಕ್ಕೆ ಬಳಕೆಯಾಗುವಂತೆ ಮಾಡಿದ್ದರು. ಲಭ್ಯವಿದ್ದ ಭೂಮಿಯಲ್ಲಿ ಶೇಕಡಾ ೩೦ ರಷ್ಟು ಭೂಭಾಗ ಸಾಗುವಳಿ ಮಾಡದೇ ಹಾಗೆಯೇ ವ್ಯರ್ಥವಾಗುತ್ತಿತ್ತು. ಶೇಕಡಾ ೧೦ ರಷ್ಟ ಭೂಭಾಗ ಕಲ್ಲುಬಂಡೆಗಳಿಂದ ಕೂಡಿವೆ. ಕಾಲೋನಿಯನ್ನು ಐದು ವರ್ಷಗಳ ಕಾಲದ ವರೆಗೆ ಅಭಿವೃದ್ಧಿಯ ಮಾರ್ಗದರ್ಶನ ನೀಡಲು ದತ್ತು ತೆಗೆದುಕೊಂಡು ವ್ಯವಸಾಯದಲ್ಲಿ ದುಡಿಯುವಂತೆ ಮಾಡಿದರು.

೧೯೬೫ ರಿಂದ ೧೯೮೦ ರವರೆಗೆ ವ್ಯವಸಾಯದಲ್ಲಿ ವಿಶೇಷ ಬೆಳೆಗಳನ್ನು ಬೆಳೆಯುತ್ತಿದ್ದರು. ಪ್ರತಿ ಕುಟುಂಬವು ೨೦ ರಿಂದ ೩೦ ಚೀಲ ರಾಗಿಯನ್ನು ಶೇಖರಿಸುತ್ತಿದ್ದರು. ಇಂತಹ ವ್ಯವಸಾಯ ಪದ್ಧತಿ ಇಂದು ನಾಶದ ಅಂಚಿನಲ್ಲಿದೆ. ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಿದ್ದ ವಿಧಾನವು ಮಾಯವಾಗಿದೆ. ಪ್ರಮುಖ ವಾಣಿಜ್ಯ ಬೆಳೆಗಳಾದ ಸೂರ್ಯಕಾಂತಿ, ಆಲೂಗಡ್ಡೆ ಮುಂತಾದ ಬೆಳೆಗಳು ಬೆಳೆದ ಭೂಮಿಯಲ್ಲಿ ಇಂದು ಬರೀ ರಾಗಿ ಬೆಳೆಯಲು ಹಿಂಜರಿಯುವಂತೆ ಹಾಗಿದೆ. ಅಲ್ಲಲ್ಲಿ ಕೆಲವು ಜನರು ರಾಗಿ ಬೆಳೆಯುತ್ತಿದ್ದರೂ, ಅದು ಕೈಗೆ ಸಿಗುವುದು ಅದೃಷ್ಟವೇ ಆಗಿದೆ.

ಪ್ರಸ್ತುತ ವ್ಯವಸಾಯದಲ್ಲಿ ತೊಡಗಿಸಿಕೊಂಡವರ ಸಂಖ್ಯೆ ಕೊಷ್ಟಕದಲ್ಲಿದೆ.

**ವ್ಯವಸಾಯದಲ್ಲಿ ತೊಡಗಿಸಿಕೊಂಡ ಕಾಲೋನಿಯ ಕುಟುಂಬಗಳು**

| ಕ್ರಂ.ಸಂ | ವಿವರ | ಸಂಖ್ಯೆ |
|---|---|---|
| ೧ | ಭೂಮಿಯು ಹೊಂದಿರುವ ಕುಟುಂಬಗಳು | ೮೨ |
| ೨ | ವ್ಯವಸಾಯದಲ್ಲಿ ನಿರತ ಕುಟುಂಬಗಳು | ೨೧ |
| ೩ | ಭೂಮಿ ಇಲ್ಲದ ಕುಟುಂಬಗಳು | ೧೯ |
| ೪ | ಗೇಣಿಗೆ ಕೊಟ್ಟಿರುವ ಕುಟುಂಬಗಳು | ೬೧ |

ಮೇಲಿನ ಕೊಷ್ಟಕದಲ್ಲಿ ತೋರಿಸಲಾಗಿರುವಂತೆ ವ್ಯವಸಾಯದಲ್ಲಿ ತೊಡಗಿಸಿಕೊಂಡವರ ಕುಟುಂಬಗಳು ಬಹಳಷ್ಟು ಕಡಿಮೆಯಾದರೂ ಗೇಣಿಗೆ ಕೊಟ್ಟಿರುವುದೇ ಹೆಚ್ಚು. ಹಂಚಿಕೆಯಾದ ಭೂಮಿಯಲ್ಲಿ ಶೇಕಡಾ ೪೦ ಮಾತ್ರ ವ್ಯವಸಾಯಕ್ಕೆ ಅಳವಡಿಸಿಕೊಂಡಿದ್ದಾರೆ. ಉಳಿದ ಭೂಮಿಯಲ್ಲಿ ಅರಣ್ಯದವರು ಮತ್ತು ಸುತ್ತಲಿನ ಭೂಮಾಲಿಕರು ಒತ್ತುವರಿ ಮಾಡಿಕೊಂಡು ವ್ಯವಸಾಯ ಮಾಡುತ್ತಿದ್ದಾರೆ.

ತಮ್ಮ ತಮ್ಮ ಭೂಮಿಯಲ್ಲಿ ವ್ಯವಸಾಯಗಾರರಾಗಿ ದುಡಿಯಲು ಅನೇಕ ಸಮಸ್ಯೆಗಳಿಂದ ಕೂಡಿದ್ದಾರೆ. ಹಕ್ಕಿಪಿಕ್ಕಿಯರು ಮುಖ್ಯವಾಗಿ ಹೆಚ್ಚು ಶ್ರಮವನ್ನು ವ್ಯಯಿಸಬೇಕಾಗಿದೆ. ಜೊತೆಗೆ ಬಂಡವಾಳದ ಕೊರತೆ ಇದೆ. ಪ್ರತಿಯೊಂದು ಕುಟುಂಬದ ಮೂರು ಎಕರೆ ಭೂಮಿಯನ್ನು ಉಳುಮೆ ಮಾಡಲು ಟ್ರ್ಯಾಕ್ಟರ್ ಬೇಕು. ಒಂದು ಗಂಟೆಯ ಅವಧಿಗೆ ೩೦೦ ರೂ ಬಾಡಿಗೆ ನೀಡಬೇಕು. ಬಿತ್ತನೇ ಮಾಡಲು ಬಿತ್ತನೆ ಬೀಜಗಳು ಎಲ್ಲವೂ ದೊರೆಯುವುದು ಕಷ್ಟದ ಕೆಲಸವಾಗಿದೆ. ವ್ಯವಸಾಯದ ಸಮಯದಲ್ಲಿ ದುಡಿಯಲು ಕೂಲಿ ಜನರು ಬೇಕು. ಕೂಲಿ ನೀಡಲು ಹಣಕ್ಕೆ ಬಡ್ಡಿದಾರರ ನೆರವು ಕೇಳಬೇಕು. ಹೀಗೆ ಖರ್ಚು ಮಾಡಿ, ಮಾಡಿದ ವ್ಯವಸಾಯದಲ್ಲಿ ಇತ್ತೀಚಿನ ದಿನಗಳಲ್ಲಿ ಆನೆಗಳ ಕಾಟಗಳಿಂದ ಬೆಳೆದ ಬೆಳೆಗಳನ್ನು ಸ್ವಲ್ಪವೂ ಉಳಿಸದೇ ತಿಂದು ಹಾಕುತ್ತವೆ. ಇದರಿಂದ ವ್ಯವಸಾಯವನ್ನು ತ್ಯಜಿಸುವಂತೆ ಮಾಡಿದೆ.

ಹಕ್ಕಿಪಿಕ್ಕಿಯರ ಸಂಘಟನೆಯ ಪ್ರಭಲವಾಗಿಲ್ಲ. ಇವರುಗಳಲ್ಲಿಯೇ ಕಿತ್ತಾಟ ಜಗಳಗಳು ಸಾಮಾನ್ಯವಾಗಿವೆ. ಸರಕಾರದಿಂದ ನೀಡಿದ ಭೂಮಿಯ ಪ್ರತಿಕುಟುಂಬಕ್ಕೆ ೪ ಎಕರೆ ಆದರೆ ಪ್ರಸ್ತುತದಲ್ಲಿ ಇದು ೩ ಎಕರೆ ಎಂದು ಅವರುಗಳೇ ನಿರ್ಣಯಿಸಿಕೊಂಡಿದ್ದಾರೆ. ಇಂದು ಜನಸಂಖ್ಯೆ ಮತ್ತು ಕುಟುಂಬಗಳು ಹೆಚ್ಚಾದಂತೆ ಸಾಮಾನ್ಯವಾದ ಕ್ರಿಯೆಯಾಗಿದೆ. ಭೂಮಿಯ ಬಗ್ಗೆ ಯಾವುದೇ ಆಧಾರಗಳು ಸಹ ಇಲ್ಲ. ಸರಕಾರದಿಂದ ನೀಡಿರುವ ಪಟ್ಟ ಮಾತ್ರ ಇವರುಗಳ ಬಳಿ ಇರುವುದು. ಕಂದಾಯ ಅಧಿಕಾರಿಗಳು ಇವರುಗಳ ಕಂದಾಯವನ್ನು ಸಹ ವಸೂಲು ಮಾಡುವುದಿಲ್ಲ. ಸುಮಾರು ೨೫ ವರ್ಷಗಳ ಹಿಂದೆ ಇದೇ ಭೂಮಿಯಲ್ಲಿ ವಾಣಿಜ್ಯ ಬೆಳೆಗಳಾದ ಸೂರ್ಯಕಾಂತಿ, ಆಲುಗಡ್ಡೆ, ಟಮೋಟ, ಮೆಣಸಿನಕಾಯಿ, ಅಲಸಂದಿ, ತೊಗರಿ, ಶೇಂಗಾ, ಭತ್ತ, ರಾಗಿ ಬೆಳೆಯುತ್ತಿದ್ದ ವ್ಯವಸಾಯಗಾರರು ಸುಮಾರು ೧೨ ವರ್ಷಗಳಿಂದ ಯಾವುದೇ ಬೆಳೆಗಳು ಹೆಚ್ಚಾಗಿ ಕಂಡು ಬರದಂತಾಗಿವೆ. ಇತ್ತೀಚಿನ ದಿನಗಳು ವ್ಯವಸಾಯಕ್ಕೆ ಮಾರಕವಾಗಿವೆ. ಅರಣ್ಯ

ರೂಪಿಸಿದ ಹೊಸ ನಿಯಮಗಳು ರಾಷ್ಟ್ರೀಯ ಪಾರ್ಕ ಆನೆಗಳು ಭಯ ಹುಟ್ಟಿಸುತ್ತಿವೆ. ಹೀಗಾಗಿ ವ್ಯವಸಾಯ ಮಾಯವಾಗುತ್ತಿದೆ. ಕಾಲೊನಿಯ ನಿವಾಸಿಗಳು ಹೇಳುವಂತೆ 'ಊರುಕಟ್ಟಿ ೧೫ ಬೆಳೆ ಮಾಡಿದೆವು. ಆನೆ ಇರಲಿಲ್ಲ. ತುಂಬಾ ಕಾಡಿತ್ತು. ಸುಮಾರು ೩೦ ವರ್ಷ ವ್ಯವಸಾಯ ಮಾಡಿಕೊಂಡು ಜೀವನ ಮಾಡುತ್ತಿದ್ದೀವಿ. ಆವಾಗ ಮನೆ ತುಂಬಾ ರಾಗಿ, ಹುರಳಿ, ಅವರೆ ಇತ್ತು. ಇದಕ್ಕೆ ನಮಗೆ ಸಹಾಯ ಮಾಡಿದೋರು ಐಗನ್ ಜರ್ಮನಿ ನಿಂದ ಬಂದಿದ್ದರು. ಇವಾಗ ಪಾರ್ಕ ಮಾಡಿ ೧೨ ವರ್ಷ ಆಯಿತು. ಅಲ್ಲಿಂದ ಬೆಳೆಗಳು ಇಲ್ಲ. ಮುದಕರು ಬೇಡಿಕೊಂಡು ತಿನ್ನುತ್ತಿದ್ದೀವಿ. ಪಾರ್ಕನವರು ತೊಂದರೆ ಮಾಡುತ್ತಾರೆ. ನಮ್ಮದು ಭೂಮಿ ಎಂದು ಭಯ ಹುಟ್ಟಿಸುವುದು ಮಾಡುತ್ತಾರೆ. ನಮ್ಮನ ಮೊದಲಿನಂಗೆ ವ್ಯವಸಾಯ ಮಾಡಿಕೊಂಡು ಜೀವನ ಮಾಡಲು ಬಿಡಿ ಅಂತ ಹೇಳಿ ಸ್ವಾಮಿ ಸರಕಾರದೊಂದಿಗೆ' ಎನ್ನುತ್ತಾರೆ.

### ವ್ಯವಸಾಯ ವರ್ಗೀಕರಣ

ಹಕ್ಕಿಪಿಕ್ಕಿಯರು ಮಾಡುವ ವ್ಯವಸಾಯವು ಇಂದು ನೀರಾವರಿ ರಹಿತವಾದದ್ದೇ. ಹೀಗಾಗಿ ವ್ಯವಸಾಯದ ವರ್ಗೀಕರಣವನ್ನು ನೀರಿನ ಆಸರೆ ಮತ್ತು ಮಣ್ಣಿನ ಗುಣಲಕ್ಷಣಗಳನ್ನು ವರ್ಗೀಕರಿಸಿಯೇ ನಿರ್ಧರಿಸಲಾಗಿದೆ. ಭಾಗಶಃ ಹಕ್ಕಿಪಿಕ್ಕಿಯರ ವ್ಯವಸಾಯದ ಮಾದರಿಯು ಖುಷ್ಕಿಯಾಗಿದೆ. ವ್ಯವಸಾಯ ಪದ್ಧತಿಯಲ್ಲಿ ಸಂಪ್ರದಾಯಗಳು ಇಲ್ಲದಿದ್ದರೂ ಹಕ್ಕಿಪಿಕ್ಕಿಯರು ಇಂದು ಸುತ್ತಲ ಸಮಾಜದ ವಿವಿಧ ರೀತಿಯ ಸಂಪ್ರದಾಯಗಳಿಂದ ಭೂಮಿ ಪೂಜೆ ಮಾಡುವವರಾಗಿದ್ದಾರೆ.

ವ್ಯವಸಾಯವು ಖುಷ್ಕಿಯಾಗಿರುವುದರಿಂದ ಮಳೆಯನ್ನೇ ಅವಲಂಬಿಸಿದೆ. ಬೆಳೆಯುವ ಬೆಳೆಗಳು, ಕ್ರಮಗಳು, ಬಿತ್ತನೆಯ ನಂತರೆ ಮಧ್ಯ ಬೇಸಾಯ, ಕೊಯ್ಲು, ಒಕ್ಕಲು ಎಲ್ಲವೂ ಭಿನ್ನವಾಗಿವೆ. ಪ್ರಮುಖ ಬೆಳೆಯುವ ಬೆಳೆಗಳು ಸಹ ಆಹಾರ ಉತ್ಪಾದನೆಯ ಮೂಲವಾಗಿರುವಂತಹುಗಳೇ ಆಗಿವೆ. ವ್ಯವಸಾಯ ಮಾಡಬೇಕಾದರೆ ಬೆಟ್ಟಗುಡ್ಡಗಳ ನಡುವಿನ ಭೂಮಿಯನ್ನು ಮೊದಲು ಹದ ಮಾಡಿಕೊಳ್ಳಬೇಕಾಗುತ್ತದೆ. ಭೂಮಿಯಲ್ಲಿರುವ ಸಣ್ಣಸಣ್ಣ ಗಿಡಗಂಟೆಗಳನ್ನು ಬುಡದ ಸಮೇತ ಅಗೆದು ತೆಗೆದು ಹಾಕಬೇಕು. ಭೂಮಿಯ ಗುಣಮಟ್ಟ, ಮಳೆ ನೀರಿನ ಪ್ರಮಾಣವನ್ನು ಅರಿತು ನಾಟಿ ಮಾಡಬೇಕಾಗುತ್ತದೆ. ಇತ್ತೀಚಿನ ದಿನಗಳಲ್ಲಿ ಹಕ್ಕಿಪಿಕ್ಕಿಯರು ಹುರುಳಿಯನ್ನು ಬಿತ್ತನೆ ಮಾಡುವುದು ಕಂಡುಬರುತ್ತದೆ. ಕುಟುಂಬಗಳು ರಾಗಿಯನ್ನು ಮತ್ತು ಹುರುಳಿಯನ್ನು ಬೆಳೆಯುತ್ತಿದ್ದಾರೆ. ವ್ಯವಸಾಯ ಮಾಡಬೇಕಾದರೆ ಹೆಚ್ಚು ಬಂಡವಾಳದ ಅವಶ್ಯಕತೆ ಇದೆ ಎನ್ನುತ್ತಾರೆ.

### ಹಕ್ಕಿಪಿಕ್ಕಿಯರ ವ್ಯವಸಾಯ ಪದ್ಧತಿ

ವಿಶೇಷವಾಗಿ ವ್ಯವಸಾಯ ಪದ್ಧತಿಗಳಲ್ಲಿ ಪ್ರದೇಶದಿಂದ ಪ್ರದೇಶಕ್ಕೆ ಹಲವಾರು ವಿಭಿನ್ನತೆಗಳು ಕಂಡುಬರುವುದು ಸಾಮಾನ್ಯವಾಗಿವೆ. ಅದೆ ರೀತಿಯಲ್ಲಿ ಬೆಂಗಳೂರು ಜಿಲ್ಲೆಯ ಪರಿಸರದಂತೆ ವ್ಯವಸಾಯ ಪದ್ಧತಿಯನ್ನು ಅನುಸರಿಸುತ್ತಿರುವ ಹಕ್ಕಿಪಿಕ್ಕಿಯರು ಇಡೀ ವರ್ಷದಲ್ಲಿ ಒಂದೇ ಬಾರಿ ವ್ಯವಸಾಯ

ಮಾಡುವವರಾಗಿದ್ದಾರೆ. ವ್ಯವಸಾಯ ಮಾಡಬೇಕಾದರೆ ಹರಸಾಹಸಗಳನ್ನೇ ಮಾಡಬೇಕಾದೀತು. ಹಕ್ಕಿಪಿಕ್ಕಿಯರ ಭೂಮಿ, ಒಣಭೂಮಿ ಇದರಿಂದ ಹೊಲಗಳ ರೀತಿಯಲ್ಲಿಯೇ ಬೇಸಾಯ ಕ್ರಮಗಳನ್ನು ಕೈಗೊಳ್ಳುವುದು, ಭೂಸಾರದ ಲೆಕ್ಕ ಹಾಕುತ್ತಾ ರಾಗಿ, ಹುರಳಿ, ಜೋಳ, ಅವರೆ ಹಾಕುವರು. ಇವರುಗಳು ನೆಲದ ಸೂಕ್ಷ್ಮತೆಯನ್ನು ತಿಳಿಯದಿದ್ದರೂ ಪರಿಸರದಲ್ಲಿನಂತೆ ವ್ಯವಸಾಯಗಾರರಾಗಿ ದುಡಿಯುತ್ತಿದ್ದಾರೆ.

ಸಾಮಾನ್ಯವಾಗಿ ಯುಗಾದಿಯ ನಂತರ ಬರುವ ಮಳೆಯನ್ನು ಆಶ್ರಯಿಸಿ ಹೊಲಗಳನ್ನು ಉಳುಮೆ ಮಾಡಿಕೊಂಡು ಬಿತ್ತನೆ ಸಿದ್ದ ಮಾಡಿಕೊಳ್ಳುತ್ತಾರೆ. ಉಳುಮೆಗೆ ಟ್ರಾಕ್ಟರ್‌ಗಳನ್ನು ಬಾಡಿಗೆಗೆ ಪಡೆಯುತ್ತಾರೆ. ಗೊಬ್ಬರವನ್ನು ಅಂಗಡಿಯಿಂದಲೇ ತರಬೇಕಾಗಿದೆ. ಸುತ್ತಲಿನ ಸಮುದಾಯಗಳ ಜನರು ಬಳಸುವ ತಿಪ್ಪೆ ಗೊಬ್ಬರ ಇವರುಗಳಲ್ಲಿ ಕಂಡುಬರುವುದಿಲ್ಲ. ಬಿತ್ತನೆ ಬೀಜ, ಕಾಳುಗಳು ಪಕ್ಕದ ಹಳ್ಳಿಗಳ ವ್ಯವಸಾಯಗಾರರಿಂದ ಪಡೆಯುತ್ತಾರೆ. ಹೊಂದಿರುವ ಎಲ್ಲಾ ಭೂಮಿಯಲ್ಲಿ ವ್ಯವಸಾಯ ಮಾಡುವುದಿಲ್ಲ. ಪ್ರತಿಯೊಂದು ವ್ಯವಸಾಯ ಕುಟುಂಬವು ವ್ಯವಸಾಯದ ಪರಿಕರಗಳ ವಸ್ತುಗಳಿಗೆ ಇನ್ನೊಬ್ಬರನ್ನು ಆಶ್ರಯಿಸಿಕೊಂಡು ಪಡೆಯುವವರಾಗಿದ್ದಾರೆ. ಇಂದು ಬದಲಾದ ಸಮಾಜದಂತೆ ವ್ಯವಸಾಯ ಪದ್ಧತಿಯನ್ನು ಬದಲಾಯಿಸಿಕೊಂಡಿದ್ದಾರೆ. ವ್ಯವಸಾಯ ಪ್ರಾರಂಭದಲ್ಲಿ ಪೂಜೆ ನಂತರ ಬೆಳೆಗಳು ಬೆಳೆದ ನಂತರ ಕಣ ಮಾಡುವುದು ಬಹುತೇಕ ಹಕ್ಕಿಪಿಕ್ಕಿಯರಿಗೆ ಸಂಪ್ರದಾಯವಾಗಿದೆ.

### ೫. ಸರಕಾರದ ಕೆಲಸ

ಸರಕಾರದ ಬುಡಕಟ್ಟು ಮಿಸಲಾತಿಯನ್ನು ಪಡೆದಿರುವ ಹಕ್ಕಿಪಿಕ್ಕಿ ಸಮುದಾಯವು ಅದನ್ನು ಬಳಸಿಕೊಂಡವರಲ್ಲಿ ಕಾಲೋನಿಯಜನರು ಬಹಳ ಕಡಿಮೆ, ಇದಕ್ಕೆ ಮುಖ್ಯಕಾರಣ ಶಿಕ್ಷಣದ ಕೊರತೆ. ಆದರೂ ಸರಕಾರದ ಕೆಲಸದಲ್ಲಿ ತೊಡಗಿಸಿಕೊಂಡ ಕಾಲೋನಿಯ ಜನರು ಬೆರಳಣಿಕೆಯಷ್ಟು. ಸರಕಾರದ ಉದ್ಯೋಗದಲ್ಲಿರುವವರ ಕುಟುಂಬ ಸಂಪ್ರದಾಯ ಜೀವನ ಪದ್ಧತಿ ಸಾಕಷ್ಟು ಮೂಲರೂಪದಲ್ಲೇ ಉಳಿದಿದೆ. ಸಾಂಸ್ಕೃತಿಕ ಸಂಪ್ರದಾಯಗಳನ್ನು ಪಾಲಿಸುತ್ತಾ ಉತ್ತಮ ಮಟ್ಟದ ಜೀವನ ವಿಧಾನ ರೂಪಿಸಿಕೊಂಡಿದ್ದಾರೆ. ಕಾಲೋನಿಯಲ್ಲಿ ಸರಕಾರದ ಉದ್ಯೋಗದಲ್ಲಿರುವ ಜನರ ಸಂಖ್ಯೆ ಐದು. ಇವು ಆರ್ಥಿಕ ವ್ಯವಸ್ಥೆಗೆ ವಿಶೇಷವಾದ ಮಹತ್ವ ನೀಡಿದ ಕುಟುಂಬಗಳಾಗಿವೆ. ಸರಕಾರದ ಕೆಲಸದಲ್ಲಿ ದುಡಿಯುವವರು ಹೆಚ್ಚಾಗಿ 'ಡಿ' ದರ್ಜೆಯನೌಕರರೇ ಹೆಚ್ಚು. ಬ್ಯಾಂಕ್, ಮಿಲಿಟರಿ, ಆಫೀಸು, ಹಾಸ್ಟಲ್, ಸಮಾಜ ಕಲ್ಯಾಣ ಇಲಾಖೆಯಲ್ಲಿ ೪ನೇ ದರ್ಜೆ ನೌಕರರಾಗಿದ್ದಾರೆ. ಪುರುಷರು ೪ ಜನ, ಮಹಿಳೆಯರು ಒಬ್ಬರು. ಕಾಲೋನಿಗೆ ವಿದ್ಯುತ್ ಸಂಪರ್ಕದ ವ್ಯವಸ್ಥೆ ಇನ್ನು ಒದಗಿಸಿಲ್ಲವಾದರೂ ಇವರುಗಳು ಮುಖ್ಯ ಕಂಬಗಳಿಂದ ವಿದ್ಯುತ್ ಸಂಪರ್ಕ ಪಡೆದಿದ್ದಾರೆ. ಇದಕ್ಕೆ ಯಾವುದೇ ದಾಖಲಾತಿಗಳು ಇಲ್ಲ. ಹಾಗೆಯೇ ಇವರುಗಳ ಮಕ್ಕಳು ಉತ್ತಮ ಶಿಕ್ಷಣವಂತರಾಗುತ್ತಿದ್ದಾರೆ. ಸರಕಾರದ ಕೆಲಸದಲ್ಲಿನ ಪುರುಷರ ಹೆಂಡತಿಯರು ವ್ಯಾಪಾರದ ಸಲುವಾಗಿ ಮಾರಾಟಕ್ಕೆ ಹೋಗುತ್ತಿದ್ದಾರೆ. ಸರಕಾರಿ ಕೆಲಸದ ಸಂಬಳ ಸಾಲದೆನ್ನುವ ಹಕ್ಕಿಪಿಕ್ಕಿಯರು ವ್ಯವಸ್ಥಿತ ಮನೆ, ಕೊಠಡಿಗಳು, ಮಂಚ, ಫ್ಯಾನ್ ಎಲ್ಲವೂ ಹೊಂದಿರುವಂಥಾ

ಮನೆಗಳೇ ಆಗಿವೆ. ಇವರು ತಮ್ಮ ಮನೆಗಳನ್ನು ಬದಲಾದ ಸಾಮಾಜಿಕ-ಆರ್ಥಿಕ ಪರಿಸರಕ್ಕೆ ತಕ್ಕಂತೆ ಬದಲಾಯಿಸಿಕೊಂಡುದ್ದಾರೆ. ಹೀಗೆ ಬದಲಾದ ಪರಿಸ್ಥಿತಿಯಲ್ಲಿ ಬದುಕುವ ಕಲೆಯನ್ನು ಕರಗತ ಮಾಡಿಕೊಂಡಿದ್ದಾರೆ.

ಸರಕಾರದ ವ್ಯವಸ್ಥೆಯಲ್ಲಿನ ವೃತ್ತಿಯು ಇವರುಗಳ ಕುಟುಂಬದ ವ್ಯವಸ್ಥೆಯನ್ನು ಬದಲಾಯಿಸಿದೆ. ಆದ್ದರಿಂದ ಕಾಲೋನಿಯಲ್ಲಿ ರಾಜಕೀಯ ನಾಯಕರಂತೆ ಗುರುತಿಸಿಕೊಳ್ಳುವ ಒಂದು ನಿಶ್ಚಿತ ರಾಜಕೀಯ ಸರಹದ್ದು ಹೊಂದಿರುವ ಗುಂಪಾಗಿದೆ. ಸರಕಾರ ಕೆಲಸದವರಿಂದ ಪ್ರತಿವರ್ಷ ತಮ್ಮ ಕುಟುಂಬದಲ್ಲೇ ವಾರ್ಷಿಕ ಆಚರಣೆಗಳು ಹಬ್ಬಗಳು ಸಂಪ್ರದಾಯದಂತೆ ಮಾಡುವವರಾಗಿದ್ದಾರೆ.

ಸರಕಾರದಿಂದ ಗಳಿಸುವ ಆದಾಯವನ್ನು ಇವರುಗಳು ಪರಿಗಣಿಸುವುದಿಲ್ಲ. ಸರಕಾರದ ಕೆಲಸ ಸಾಕು ಎನ್ನುತ್ತಾರೆ. ಗಳಿಸುವ ಸಂಬಳವು ೩೮೦೦ ದಿಂದ ೬೬೦೦ ರೂಪಾಯಿಗಳವರೆಗೆ ಮಾತ್ರ. ಒಟ್ಟಿನಲ್ಲಿ ಬದಲಾದ ಪರಿಸ್ಥಿತಿಯಲ್ಲಿ ಆರ್ಥಿಕ ಚಟುವಟಿಕೆಯನ್ನು ನಿರ್ವಹಿಸಲು ಸರಕಾರದ ಕೆಲಸವು ಮಹತ್ವವಾದ ಪಾತ್ರ ವಹಿಸಿರುವುದು ಇಲ್ಲಿ ಕಾಣಬಹುದು. ತಮ್ಮದೇ ಆದ ಜೀವನ ವಿಧಾನವನ್ನು ರೂಪಿಸಿಕೊಂಡು ಸ್ವಾಭಿಮಾನ ಮತ್ತು ಆತ್ಮಶಕ್ತಿಯನ್ನು ಹೆಚ್ಚಿಸಿಕೊಳ್ಳುವಂತೆ ಮಾಡಿದೆ. ಇದರಿಂದ ಈ ಕುಟುಂಬಗಳು ಸಾಕಷ್ಟು ಉತ್ತಮ ಎನ್ನಬಹುದು. ಆದರೆ ಅಭಿವೃದ್ಧಿಗೆ ಹೋಲಿಸಿದರೆ ಏನೂ ಸಾಲದಾಗಿದೆ. ಕಾಲೋನಿಯ ಇತರ ಜನರಿಗೆ ಹೋಲಿಸಿದರೆ ಉತ್ತಮ ಎನ್ನಬಹುದು.

### ೬. ಬಂಡವಾಳದ ಮೂಲ

ಬಂಡವಾಳದ ಕೊರತೆಯು ಆರ್ಥಿಕಾಭಿವೃದ್ಧಿಗೆ ತಡೆವೊಡ್ಡುತ್ತದೆ. ಬಂಡವಾಳ ಸಂಚಯನವು ಉಳಿತಾಯದಿಂದ ದೂರವೇ ಕೊಂಡಯ್ಯುತ್ತದೆ. ಅಭಿವೃದ್ಧಿಯ ಪಥದಲ್ಲಿ ಸಾಗಲು ಮುಖ್ಯವಾದ ಆಯುಧವೇ ಬಂಡವಾಳವಾಗಿದೆ. ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಜೀನನದಲ್ಲಿ ಮಹತ್ತರ ಬದಲಾವಣೆ ಸಾಧಿಸಲು ಪ್ರಗತಿಪಥದಲ್ಲಿ ಸಾಗಲು ಬಂಡವಾಳದ ಸಮಸ್ಯೆಯು ಸಮಯದಾಯವನ್ನು ಕಾಡುತ್ತಿದೆ. ಹಕ್ಕಿಪಿಕ್ಕಿಯರನ್ನು ಅಭಿವೃದ್ಧಿಯ ಕಡೆಗೆ ಸಾಗಿಸಲು ಇರುವ ದೊಡ್ಡ ಸಮಸ್ಯೆಯಾಗಿದೆ. ಹಕ್ಕಿಪಿಕ್ಕಿಯರ ನಾಗರಿಕ ಪ್ರಜ್ಞೆ, ಪ್ರತಿಭೆ ಮತ್ತು ಸುಪ್ತಶಕ್ತಿಯನ್ನು ಹೊರಹಾಕಲು ಮತ್ತು ಮಾನವ ಶ್ರಮದ ಬಳಕೆಗೆ ಬಂಡವಾಳದ ಅವಶ್ಯಕತೆ ಮುಖ್ಯವಾಗಿದೆ. ಸ್ವ ಉದ್ಯೋಗವಾದ ವ್ಯಾಪಾರ, ಗುಡಿಕೈಗಾರಿಕೆಯಲ್ಲಿ ತೊಡಗಿಸಿಕೊಳ್ಳಲು ಹಲವಾರು ಮೂಲಗಳಿಂದ ಬಂಡವಾಳ ಪಡೆಯುತ್ತಿದ್ದಾರೆ.

ಹೆಚ್ಚು ಕಡಿಮೆ ಬೆಲೆಯ ವಸ್ತುಗಳನ್ನು ತಂದು ಆಧುನಿಕ ತಂತ್ರಜ್ಞಾನದ ಜನರು ಮತ್ತು ವಿಜ್ಞಾನ ಮೆಚ್ಚುವಂತೆ ಮಾರಾಟ ಮಾಡುತ್ತಿದ್ದಾರೆ. ಗುಡಿಕೈಗಾರಿಕೆಯಲ್ಲಿ ಬಂಡವಾಳ ದೊರೆತರೆ ಜೀವನಮಟ್ಟ ಏರಿಕೆ ಮತ್ತು ಉತ್ಪಾದನೆಯ ಮಟ್ಟವನ್ನು ಏರಿಸಲು ಅನುಕೂಲವಾಗುತ್ತದೆ. ಈ ಕೆಳಗಿನ ಮೂಲಗಳಿಂದ ಹಕ್ಕಿಪಿಕ್ಕಿಯರು ಸಾಲ ಪಡೆಯುತ್ತಾರೆ.

೧. ಗ್ರಾಮೀಣ ಪ್ರದೇಶದ ಶ್ರೀಮಂತ ರೈತ (ಭೂಮಾಲಿಕ ವರ್ಗ) ಕುಟುಂಬ

೨. ಕಾಲೋನಿಯ ಪಕ್ಕದ ಸಮುದಾಯದ ರಾಜಕೀಯ ನಾಯಕರುಗಳಿಂದ

೩. ಬನ್ನೇರುಘಟ್ಟದ ಲೇವಾದೇವಿಗಾರರಿಂದ

೪. ಕಾಲೋನಿಯಲ್ಲಿನ ಹಕ್ಕಿಪಿಕ್ಕಿ ಮಹಿಳೆಯರಿಂದ

ಗ್ರಾಮೀಣ ಪ್ರದೇಶದಲ್ಲಿನ ಶ್ರೀಮಂತ ಭೂಮಾಲಿಕ ವರ್ಗದ ಕುಟುಂಬಗಳಿಂದ ಭೂಮಿಯನ್ನು ಅವರುಗಳಿಗೆ ಗೇಣಿಗೆ ನೀಡಿ ಸಾಲ ಪಡೆಯುವುದು ಹಕ್ಕಿಪಿಕ್ಕಿಯರಿಗೆ ರೂಢಿಯಾಗಿದೆ. ಈ ರೀತಿಯಿಂದ ಪಡೆಯುವ ಬಂಡವಾಳವನ್ನು ಹಕ್ಕಿಪಿಕ್ಕಿಯರು ಬಡ್ಡಿಯ ಜೊತೆಗೆ ತೀರಿಸಬೇಕಾದ ಸಂಗತಿ ಮತ್ತು ಕಾಲದ ಮಿತಿಯ ಕಷ್ಟಕ್ಕೆ ಸಿಲುಕಿಸುತ್ತದೆ. ಬಂಡವಾಳದಾರರು ಒದಗಿಸುವ ಬಂಡವಾಳಕ್ಕೆ ಬಡ್ಡಿಯು ಶೇಕಡಾ ೧೦೦ ಕ್ಕೆ ೧೦ ಇರುತ್ತದೆ. ಹೀಗಾಗಿ ಬಡ್ಡಿಯು ತೀರಿಸುವಿಕೆಯಿಂದ ಬಂದ ಆದಾಯದಲ್ಲಿ ಹೆಚ್ಚು ಬಂಡವಾಳದಾರನಿಗೆ ದೊರೆಯುತ್ತದೆ.

ಕಾಲೋನಿಯ ಪಕ್ಕದ ಸಮುದಾಯಗಳ ರಾಜಕೀಯ ನಾಯಕರುಗಳು ಹಕ್ಕಿಪಿಕ್ಕಿಯರಿಗೆ ಸಾಲ ನೀಡುತ್ತಾರೆ. ಸಾಮಾನ್ಯವಾಗಿ ಯಾವುದೇ ಆಧಾರವಿಲ್ಲದೇ ಬಂಡವಾಳವನ್ನು ಒದಗಿಸುವರು. ಈ ರೀತಿಯಿಂದ ಹಕ್ಕಿಪಿಕ್ಕಿ ಜನರ ಮೇಲೆ ಹಿಡಿತ ಸಾಧಿಸಿ ತಮ್ಮ ರಾಜಕೀಯವನ್ನು ಮಾಡುವಂತವರಾಗಿದ್ದಾರೆ. ಇವರು ನೀಡುವ ಬಂಡವಾಳಕ್ಕೆ ಹೆಚ್ಚಿನ ರಾಜಕೀಯವನ್ನು ಮಾಡುವಂತರಾಗಿದ್ದಾರೆ. ಅಲ್ಲದೆ ಬಂಡವಾಳಕ್ಕೆ ಹೆಚ್ಚಿನ ಬಡ್ಡಿ ವಿಧಿಸುವುದಲ್ಲದೆ ಹಕ್ಕಿಪಿಕ್ಕಿಯರು ಗಳಿಸಿದ ಆದಾಯದಲ್ಲಿ ಶೇಕಡಾ ೩೦ ಕಬಳಿಸುವಂತರಾಗಿದ್ದಾರೆ. ಹಕ್ಕಿಪಿಕ್ಕಿಯರು ಗಳಿಸಿದ ಆದಾಯದದಲ್ಲಿ ಬಡ್ಡಿಯ ರೂಪದಲ್ಲಿ ಶೇ ೧೦ ಮತ್ತು ಕಾಲೋನಿಯಲ್ಲಿ ಜನರು ಸೇವಿಸಲು ಸೇಂದಿ, ಸಾರಾಯಿ ಅಂಗಡಿ ತೆರೆದು ಸಾಲ ನೀಡುವುದು ಶೇ೨೦ ಹಣ ಪೋಲು ಮಾಡುವಂತಾಗಿದೆ. ಹಿಗಾಗಿ ಈ ನಾಯಕರುಗಳು ಶೇ ೩೦ ಆದಾಯ ಹಕ್ಕಿಪಿಕ್ಕಿಯರಿಂದ ಗಳಿಸುತ್ತಾರೆ.

ಬನ್ನೇರುಘಟ್ಟದ ಹಣದ ಲೇವಾದೇವಿಗಾರರು ಕಾಲೋನಿಯ ಜನರಿಗೆ ವಾರದ ಕಂತಿನ ಬಡ್ಡಿಯನ್ನು ನೀಡುತ್ತಿದ್ದಾರೆ. ನೀಡುವ ಸಾಲದಲ್ಲಿಯೇ ಬಡ್ಡಿಯನ್ನು ಮುರಿದು ನೀಡುತ್ತಾರೆ. ನಂತರ ಪ್ರತಿವಾರ ಬಂಡವಾಳ ಮತ್ತು ಬಡ್ಡಿಯನ್ನು ಪಡೆಯುತ್ತಾರೆ. ಇದು ಹಿಂಸಿಸಲು ಮತ್ತೊಂದು ಮಾರ್ಗವಾಗಿದೆ.

ಇನ್ನು ಕಾಲೋನಿಯ ಮಹಿಳೆಯರು ನೀಡುವ ಬಂಡವಾಳವು ಅಲ್ಪ ಪ್ರಮಾಣದ್ದಾಗಿದೆ. ೧೦೦ ರಿಂದ ೫೦೦ ರೂಪಾಯಿಗಳವರೆಗಿನ ಬಂಡವಾಳ ನೀಡುವ ಮಹಿಳೆಯರು ವ್ಯಾಪಾರದಲ್ಲಿ ತೊಡಗಿರುವವರೇ ಹೆಚ್ಚು. ಮಹಿಳೆಯರು ನೀಡುವ ಬಂಡವಾಳವು ಮಹಿಳೆಯರಿಗೆ ವ್ಯಾಪಾರದ ಸಲುವಾಗಿಯೇ ನೀಡುತ್ತಾರೆ. ಮಹಿಳೆಯರಿಂದ ಬಂಡವಾಳ ಪಡೆಯಬೇಕಾದರೆ ಅವರುಗಳ ಜೊತೆಯಲ್ಲಿಯೇ ಇದ್ದು ಅವರುಗಳಿಗೆ ಹೋಟಲ್ ತಿಂಡಿ, ಕಾಫಿ ತಿನ್ನಿಸಿ ಕುಡಿಸಬೇಕು. ಅಂತಹ ಸೇವೆಮಾಡುವವರಿಗೆ ಸಾಲ ನೀಡುತ್ತಾರೆ. ಹೀಗೆ ನೀಡುವ ಹಣದ ಮೇಲೆ ವಾರದ ಬಡ್ಡಿಯನ್ನು ಹಾಕುತ್ತಾರೆ. ಕಾಲೋನಿಯಲ್ಲಿ ವ್ಯಾಪಾರಕ್ಕಾಗಿ ಬಂಡವಾಳ ಒದಗಿಸುವ ಕುಟುಂಬಗಳು ಏಳು. ಹೀಗಾಗಿ ಇಂತಹ ಕುಟುಂಬಗಳು ಸಾಕಷ್ಟು ಜನಪ್ರಿಯವಾಗಿವೆ. ಹೀಗೆ ಮಹಿಳೆಯರು ನೀಡುವ ಬಂಡವಾಳವನ್ನು ವ್ಯಾಪಾರದಿಂದಲೇ ಕ್ರೋಢೀಕರಿಸಿದ್ದಾರೆ. ಈ ಮೇಲಿನ ಎಲ್ಲಾ

ಮೂಲಗಳಿಂದ ಬಂಡವಾಳ ಪಡೆದ ಹಕ್ಕಿಪಿಕ್ಕಿಯುರು ತಮ್ಮ ಜೀವನ ಮಟ್ಟ ಮತ್ತು ಆದಾಯದ ಮಟ್ಟ ಏರಿಸಿಕೊಳ್ಳುವುದರಲ್ಲಿ ಹಿಂದುಳಿದಿದ್ದಾರೆ ಬಂಡವಾಳಿಗರ ಶೋಷಣೆಯೇ ಇದಕ್ಕೆ ಮೂಲ ಕಾರಣವಾಗಿದೆ.

**ಕುಟುಂಬ ಮತ್ತು ಆದಾಯದಮಟ್ಟ**

ಆರ್ಥಿಕ ಸ್ಥಿತಿಯ ಮೇಲೆ ಪರಿಣಾಮ ಬೀರುವ ಕುಟುಂಬದ ಸದಸ್ಯರ ಸಂಖ್ಯೆ ಆದಾಯಗಳಿಕೆಯ ಮೂಲವೆನ್ನಲಾಗಿದೆ. ಇದರಿಂದ ಕುಟುಂಬದಲ್ಲಿರುವ ಸದಸ್ಯರ ಸಂಖ್ಯೆ ಮತ್ತು ದುಡಿಯುವವರ ಸಂಖ್ಯೆಯಿಂದ ಅಭಿವೃದ್ಧಿಯನ್ನು ಗುರುತಿಸಬಹುದು. ಮಾನವನ ಶ್ರಮ ಸಂಪತ್ತಿಗೆ ಹೆಚ್ಚಿನ ಬೆಲೆ ಇರುವುದರಿಂದ ಮಾನವನು ಸಂಪನ್ಮೂಲವೆಂದು ಗುರುತಿಸಲಾಗಿದೆ. ಆರ್ಥಿಕಾಭಿವೃದ್ಧಿಯನ್ನು ಪರಿಗಣಿಸುವಾಗ ಜನಸಂಖ್ಯೆ ಗಣನೆ ಅತಿಮುಖ್ಯವಾಗಿದೆ. ಮಾನವೀಯ ಘಟಕವಾದ ಶ್ರಮವು ಮಾನವರಿಂದಲೇ ದೊರೆಯುವುದರಿಂದ ಕುಟುಂಬಗಳ ಆದಾಯದಲ್ಲಿ ಜನಸಂಖ್ಯೆಯನ್ನು ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ಈ ರೀತಿಯಿಂದ ಹೆಚ್ಚಿನ ದುಡಿಯುವ ಜನಸಂಖ್ಯೆ ಹೊಂದಿದ ಕುಟುಂಬ ಉತ್ತಮ ಮಟ್ಟದ ಆದಾಯ ಗಳಿಸುತ್ತದೆ.

ಕುಟುಂಬದ ಗಾತ್ರದಲ್ಲಿನ ಜನಸಂಖ್ಯೆ ಹೆಚ್ಚಿರುವ ಸಮಯದಲ್ಲಿ ಅವರುಗಳ ಉತ್ಪಾದಕತೆ ಮತ್ತು ಆರ್ಥಿಕತೆಗೆ ಉಪಯೋಗಕ್ಕೆ ಬರುವವರಾಗಿದ್ದಾರೆ. ಆ ಕುಟುಂಬದ ಆದಾಯ ಮತ್ತು ಗುಣಮಟ್ಟದಲ್ಲಿ ಹೆಚ್ಚಿನ ಬೆಳವಣಿಗೆಯನ್ನು ಗುರುತಿಸಬಹುದಾಗಿದೆ. ಹೀಗಾಗಿ ಕುಟುಂಬದ ಗಾತ್ರವನ್ನು ಆದಾಯದ ಜೊತೆಗೆ ಕಲ್ಪಿಸುವುದು ಅರ್ಥಶಾಸ್ತ್ರಜ್ಞರ ಅಭಿಪ್ರಾಯವಾಗಿದೆ. ಆರೋಗ್ಯವಂತರಾದ, ಧೃಡಕಾಯರಾದ ಜನರು ರಾಷ್ಟ್ರದ ಸಂಪತ್ತು ಎಂಬಂತೆ ಪರಿಗಣಿಸಿರುವಾಗ ಹಕ್ಕಿಪಿಕ್ಕಿಯರ ಮಾನವ ಶ್ರಮ ಶಕ್ತಿಯನ್ನು ಪರಿಗಣಿಸಿಯೇ ಆದಾಯ ಮಟ್ಟವನ್ನು ಗುರುತಿಸಲಾಗಿದೆ. ಕುಟುಂಬದಲ್ಲಿ ಅತಿಹೆಚ್ಚು ಜನರನ್ನು ಹೊಂದಿರುವ ಕುಟುಂಬಗಳ ಸಂಖ್ಯೆ ೨೫ ಇವೆ. ಅತಿ ಕಡಿಮೆ ಮಟ್ಟದ ಜನರೆಂದರೆ ೫ ಜನ ಸದಸ್ಯರು ಇರುವ ಮನೆ ಒಂದು ಕುಟುಂಬ ಮತ್ತು ಕನಿಷ್ಟ ೩ ಜನ ದುಡಿಯುವರಾಗಿದ್ದಾರೆ. ಕಾಲೋನಿಯಲ್ಲಿ ಅತಿ ಹೆಚ್ಚಿನ ಜನಸಂಖ್ಯೆಯನ್ನು ಹೊಂದಿರುವ ಕುಟುಂಬದ ಸದಸ್ಯರ ಸಂಖ್ಯೆ ೯ ಇದೆ. ೯ ಜನ ಸದಸ್ಯರುಗಳಿಂದ ಕೂಡಿರುವ ಕುಟುಂಬದಲ್ಲಿ ಕನಿಷ್ಟ ೫ ಜನ ದುಡಿಯುವವರಾಗಿದ್ದಾರೆ. ಹೀಗಾಗಿ ಇಂತಹ ಕುಟುಂಬಗಳು ಆದಾಯದ ಮಟ್ಟದಲ್ಲಿ ಉತ್ತಮ ಮಟ್ಟದ ಗಳಿಕೆಯಿಂದ ಕೂಡಿದ್ದರೂ ಸಹ ಬದುಕುತ್ತಿರುವ ರೀತಿ ಮಾತ್ರ ಕಳಪೆ ಮಟ್ಟದಿಂದ ಕೂಡಿರುವುದು.

ಕಾಲೋನಿಯ ಕುಟುಂಬಗಳಲ್ಲಿನ ಆದಾಯ ಮಟ್ಟವನ್ನು ವಾರ್ಷಿಕ ಆದಾಯದ ಮಟ್ಟದಿಂದ ಗುರುತಿಸಬೇಕಾಗಿದೆ. ಇಂತಹ ವಾರ್ಷಿಕ ಆದಾಯವು ಮುಖ್ಯವಾಗಿ ಕುಟುಂಬದ ನಿರ್ವಹಣೆ ಮತ್ತು ಆರ್ಥಿಕ ವ್ಯವಸ್ಥೆಯನ್ನು ಪ್ರತಿನಿಧಿಸುತ್ತದೆ. ವರ್ಷದಲ್ಲಿನ ಎಲ್ಲಾ ಮೂಲಗಳಿಂದ ಗಳಿಸುವ ಆದಾಯವು ಹಕ್ಕಿಪಿಕ್ಕಿಯರ ಸ್ಥಿತಿಗತಿಯನ್ನು ಪ್ರತಿನಿಧಿಸುತ್ತದೆ.

ವಾರ್ಷಿಕ ಆದಾಯ ರೂಪಾಯಿಗಳಲ್ಲಿ

ಭೂತಾನಹಳ್ಳಿ ಕಾಲೋನಿಯ ೧೦೨ ಕುಟುಂಬಗಳ ವಾರ್ಷಿಕ ಆದಾಯ ರೂ.ಗಳಲ್ಲಿ

| ಕ್ರ.ಸಂ | ಅ,ಕಡಿಮೆ | ಕಡಿಮೆ | ಮಧ್ಯಮ | ಉತ್ತಮ | ಹೆಚ್ಚು | ಕನಿಷ್ಟ |
|---|---|---|---|---|---|---|
| ೧ | ೨೦೦೦ | ೨೦೦೧-೩೦೦೦<br>ಸಂ.% | ೩೦೦೧-೪೦೦೦<br>ಸಂ.% | ೪೦೦೧-೫೦೦೦<br>ಸಂ.% | ೫೦೦೧-೬೦೦೧<br>ಸಂ.% | ಆದಾಯ |
| | ೨೨ | ೪೭ | ೧೮ | ೧೩ | ೨ | ೧೮೦೦ |

ಮೇಲಿನ ಕೊಷ್ಟಕದಲ್ಲಿರುವಂತೆ ಕನಿಷ್ಟ ಮಟ್ಟದ ವಾರ್ಷಿಕ ಆದಾಯ ಮತ್ತು ಗರಿಷ್ಟ ವಾರ್ಷಿಕ ಆದಾಯ ಕೊಷ್ಟಕದಲ್ಲಿ ತೋರಿಸುವಂತೆ ಇದೆ. ವಾರ್ಷಿಕ ಆದಾಯ ೬೩೦೦ ರೂಪಾಯಿ ಹಕ್ಕಿಪಿಕ್ಕಿಯರ ಕಾಲೋನಿಯಲ್ಲಿದೆ. ಇಂತಹ ಕುಟುಂಬಗಳು ವ್ಯವಸಾಯ, ಕೂಲಿ, ಗುಡಿಕೈಗಾರಿಕೆಯಲ್ಲಿ ದುಡಿಯುವ ಕುಟುಂಬಗಳಾಗಿವೆ.

## ೭. ಆದಾಯ ಮತ್ತು ಅನುಭೋಗ

ಹಕ್ಕಿಪಿಕ್ಕಿಯರ ಆದಾಯ ಇಂದು ಒಂದೇ ತೆರನಾಗಿಲ್ಲ. ಇಂದಿನ ಬದುಕಿನ ಅನೇಕ ಯಾತನೆಗಳು ಸಾಮಾನ್ಯವಾಗಿವೆ. ಕಾಲೋನಿಯನ್ನು ಅವಲೋಕಿಸಿದಾಗ ಆದಾಯದಮಟ್ಟ ಮತ್ತು ಭೂಮಿ ಹೊಂದಿರುವವರ ವ್ಯವಸಾಯದ ಆದಾಯ ಕುಟುಂಬಕ್ಕೆ ಸಾಕಷ್ಟು ಉತ್ತೇಜನ ನೀಡುತ್ತಿದೆ. ವ್ಯವಸಾಯದ ಮುಖ್ಯ ಉತ್ಪಾದನೆಯಿಂದ ಹಕ್ಕಿಪಿಕ್ಕಿಯರ ಕುಟುಂಬದ ಆರ್ಥಿಕತೆ ಉತ್ತಮಗೊಂಡಿಲ್ಲ. ಆದರೂ ಸಹ ಅವರ ಅನುಭೋಗದಲ್ಲಿ ವ್ಯವಸಾಯ ಪಾತ್ರವಹಿಸುತ್ತಿದೆ. ವ್ಯವಸಾಯ ಮತ್ತು ಗುಡಿಕೈಗಾರಿಕೆಯು ಮುಖ್ಯವಾಗಿ ಕುಟುಂಬದ ಗಾತ್ರವನ್ನು ಅವಲಂಬಿಸಿದೆ. ಕುಟುಂಬದ ಸದಸ್ಯರ ಸಂಖ್ಯೆಯು ದೈನಂದಿನ ಬದುಕಿನಲ್ಲಿ ಸಾಕಷ್ಟು ಬದಲಾವಣೆ ತರಬಲ್ಲದಾಗಿದೆ. ಪ್ರತಿಯೊಂದು ಕುಟುಂಬದಲ್ಲೂ ಮಕ್ಕಳು ಮತ್ತು ಹಿರಿಯ ವಯಸ್ಸಿನ ಪೋಷಕರನ್ನು ಕಾಣಬಹುದು. ಇವರುಗಳು ಸಹ ವಿವಿಧ ರಂಗಗಳಲ್ಲಿ ತೊಡಗಿಸಿಕೊಂಡು ಆದಾಯಗಳಿಸುತ್ತಿದ್ದಾರೆ. ಒಟ್ಟಾರೆ ದೊಡ್ಡ ಕುಟುಂಬವು ವ್ಯವಸಾಯವಲ್ಲದೆ ಇತರೆ ವೃತ್ತಿಗಳಲ್ಲೂ ತೊಡಗಿಸಿಕೊಂಡಿದ್ದಾರೆ. ಹೀಗಾಗಿ ಅವರು ಗಳಿಸುವ ಆದಾಯ ಉತ್ತಮ ಜೀವನಕ್ಕೆ ಅನುಕುಲಕರವಾಗುವ ರೀತಿಯಲ್ಲಿ ಇದ್ದರೂ ಅನುಭೋಗದಲ್ಲಿ, ತಿನ್ನುವುದು ಮತ್ತು ಕುಡಿಯುವುದರಲ್ಲಿಯೇ ತೀರಿ ಹೋಗುತ್ತಿವೆ. ಹೀಗೆ ಗಳಿಸುವ ಆದಾಯದಲ್ಲಿ ವ್ಯವಸಾಯದ ಪಾತ್ರವೂ ಮಹತ್ವವಾಗಿದೆ. ವ್ಯವಸಾಯದ ಕುಟುಂಬಗಳು ಬದಲಾದ ವ್ಯವಸ್ಥೆಯಲ್ಲಿ ತಮ್ಮ ಹಳೆಯ ಪದ್ಧತಿಗಳನ್ನು ಸಾಕಷ್ಟು ಬದಲಿಸಿಕೊಂಡು ಹೊಸ ಹೊಸ ವಿಧಾನದತ್ತ ನಡೆಯುತ್ತಿವೆ. ಅನುಭೋಗದಲ್ಲಿ ಹೆಚ್ಚಿನ ಬೆಳಣಿಗೆಯ ಬೇಕು ಬೇಡಗಳು ಉತ್ತಮವಾದರೂ ಕುಡಿತದ ಚಟ ಇನ್ನೂ ಬಿಡದೇ ಇರುವರು. ಆದ್ದರಿಂದ ಆದಾಯದಲ್ಲಿ ಶೇಕಡಾ ೩೦ ಕುಡಿತಕ್ಕೆ ಖರ್ಚು ಮಾಡುತ್ತಿದ್ದಾರೆ.

ಪ್ರತಿಯೊಂದು ಕುಟುಂಬವು ಸಹ ತನ್ನದೇ ಆದ ವೃತ್ತಿಯಲ್ಲಿ ಪುರುಷ, ಮಹಿಳೆ ಎನ್ನದೆ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಪುರುಷರು ದಿನವೊಂದಕ್ಕೆ ೭೦ ರಿಂದ ೮೦ ರೂಪಾಯಿ ಆದಾಯ ಗಳಿಸಿದರೆ, ಮಹಿಳೆಯು ೧೦೦ ರಿಂದ ೧೫೦ ರೂ ವ್ಯಾಪಾರದಲ್ಲಿ ಗಳಿಸುತ್ತಿದ್ದಾಳೆ. ಗಳಿಸಿದ ಹಣದಲ್ಲಿ ಅಷ್ಟೇ ಪ್ರಮಾಣದ ಖರ್ಚುಗಳು ಸೇರಿಕೊಂಡಿರುವುದು. ತಮ್ಮ ಬೇಡಿಕೆಗೆ ಅನುಗುಣವಾಗಿ ಖರ್ಚು ಮಾಡುತ್ತಾ ಬಂದ ಆದಾಯವೆಲ್ಲಾ ಬರಿದು ಮಾಡಿಕೊಂಡು ಕೊನೆಗೆ ಸಾಲದಲ್ಲಿ ಸಿಲುಕುತ್ತಿದ್ದಾರೆ. ಹೀಗಾಗಿ ಕಾಲೋನಿಯ ಜನರಲ್ಲಿ ಉಳಿತಾಯದ ಕಲ್ಪನೆಯೇ ಮೂಡಿಲ್ಲ. ಕೆಲವೊಂದು ಕುಟುಂಬಗಳು ಸರಕಾರದ ಉದ್ಯೋಗದಲ್ಲಿರುವವರು ಉಳಿತಾಯದ ಅಂಚಿನಲ್ಲಿ ನಿಂತು ತಾವು ಗಳಿಸುವ ಆದಾಯದಲ್ಲಿ ಅರ್ಧದಷ್ಟು ಬಂಡವಾಳ ರೂಪದಲ್ಲಿ ಬಡ್ಡಿ ಸರಿಯಿದೆ ಸಾರ್ ನೀಡುತ್ತಿದ್ದಾರೆ. ಇಂತಹ ಕುಟುಂಬಗಳ ಅನುಭೋಗವು ಸೀಮಿತವಾಗಿದೆ. ಇವರುಗಳ ಕುಟುಂಬದಲ್ಲಿನ ಸದಸ್ಯರ ಸಂಖ್ಯೆಯು ಹೆಚ್ಚಿದೆ. ಇವರು ದುಡಿಮೆಯು ಹೊಟ್ಟೆ ಬಟ್ಟೆಯ ಮೂಲವಾಗಿಯೇ ಇರುವ ಕುಟುಂಬಗಳೇ ಅಧಿಕ. ಇಂತಹ ಕುಟುಂಬಗಳಲ್ಲಿ ಖಾಸಗೀ ಮತ್ತು ಸಾರ್ವಜನಿಕವೆಂಬ ವರ್ಗೀಕರಣವು ಅಸಾಧ್ಯವಾಗಿದೆ. ಏಕೆಂದರೆ ದುಡಿಯುವ ದುಡಿಮೆ ಒಟ್ಬಾರೆ ಆದಾಯ ಬದುಕಿನಲ್ಲಿ ಹೊಟ್ಟೆಗಾಗಿ ದುಡಿಯಲೇಬೇಕಾದ ಪರಿಸ್ಥಿತಿ. ಇದರಿಂದಲೇ ಇಂದು ಹಕ್ಕಿಪಿಕ್ಕಿಯರಿಗೆ ಮುಂದಾಲೋಚನೆ ಇಲ್ಲವಾಗಿದೆ ಎಂದು ಉಹಿಸಬಹುದು. ಗಳಿಸುವ ಆದಾಯದಲ್ಲಿ ಅಷ್ಟೇ ಮಟ್ಟದ ಖರ್ಚು ಸಹ ಅನಿವಾರ್ಯವಾಗಿದೆ.

ಹಕ್ಕಿಪಿಕ್ಕಿಯರ ಆದಾಯದ ಮಟ್ಟವನ್ನು ತೊಡಗಿಸಿಕೊಂಡ ವೃತ್ತಿಗಳ ಮೂಲಕ ಗಳಿಸುವ ಆದಾಯದಿಂದ ಗುರುತಿಸಲಾಗಿದೆ. ಈ ಕೆಳಗಿನ ಕೊಷ್ಟಕ ವಿವಿಧ ವೃತ್ತಿಗಳಲ್ಲಿ ಗಳಿಸುವ ಆದಾಯವನ್ನು ಗುರುತಿಸಲಾಗಿದೆ.

ಆದಾಯ ಗಳಿಕೆಯ ವಿವಿಧ ಮೂಲಗಳು

| ಕ್ರ.ಸಂ | ವೃತ್ತಿಗಳು | ಪುರುಷರ ಗಳಿಕೆ ರೂ.ಗಳಲ್ಲಿ | ಮಹಿಳೆಯರ ಗಳಿಕೆ ರೂ.ಗಳಲ್ಲಿ |
|---|---|---|---|
| ೧ | ಗುಡಿ ಕೈಗಾರಿಕೆ | ೧೦೦ | ೬೦ |
| ೨ | ವ್ಯಾಪಾರ | ೬೦ | ೧೦೦ |
| ೩ | ವ್ಯವಸಾಯ | ೬೦ | ೪೫ |
| ೪ | ಕೂಲಿ | ೮೦ | ೬೦ |
| ೫ | ಸ್ವಂತ ಕೆಲಸ | ೫೦ | |

ಮೇಲಿನ ಪಟ್ಟಿಯಲ್ಲಿ ದಿನವೊಂದಕ್ಕೆ ವಿವಿಧ ವೃತ್ತಿಗಳಲ್ಲಿ ಪುರುಷ ಮತ್ತು ಮಹಿಳೆಯರು ಗಳಿಸುವ ಆದಾಯವನ್ನು ತೋರಿಸಲಾಗಿದೆ. ಹೀಗೆ ವಿವಿಧ ವೃತ್ತಿಯಲ್ಲಿ ದಿನವಲ್ಲಿ ಗಳಿಸುವ ಆದಾಯವನ್ನು ಅಷ್ಟೇ ಪ್ರಮಾಣದಲ್ಲಿ ಸಹ ಮಾಡುತ್ತಿದ್ದಾರೆ.

ಗುಡಿಕೈಗಾರಿಕೆಯಲ್ಲಿ ದುಡಿಯುವ ಪ್ರತಿಯೊಬ್ಬ ಪುರುಷನು ದಿನವೊಂದಕ್ಕೆ ಊಟ, ತಿಂಡಿ, ಕಾಫಿ ಮತ್ತು ನಗರದಲ್ಲಿ ವಿಶೇಷವಾಗಿ ಶೇಕಡಾ ೩೦ ರಷ್ಟು ಖರ್ಚು ಮಾಡಿದರೆ ಸಾರಿಗೆ ವ್ಯವಸ್ಥೆಗೆ ಶೇಕಡಾ೨೦

ಖರ್ಚು ಮಾಡುತ್ತಿದ್ದಾನೆ. ಉಳಿದ ಶೇಕಡಾ ೫೦ ಕುಟುಂಬ ನಿರ್ವಹಣೆಗೆ ಬೇಕಾದ ಅಗತ್ಯಗಳಿಗೆ ಸ್ಪಂದಿಸುತ್ತಿದ್ದಾನೆ. ಗೃಹ ಕೈಗಾರಿಕೆಯಲ್ಲಿ ತೊಡಗಿಸಿಕೊಂಡ ಬಂಡವಾಳಕ್ಕೆ ಪ್ರತಿಫಲವಾಗಿ ಬಡ್ಡಿಯನ್ನು ಸೇರಿಸಿ ನೀಡುತ್ತಿದ್ದಾನೆ. ಉಳಿಯುವ ಅಲ್ಪ ಪ್ರಮಾಣದ ಹಣವನ್ನು ತನ್ನ ಸ್ವಬೇಡಿಕೆಗೆ ಖರ್ಚು ಮಾಡುತ್ತಿದ್ದಾರೆ. ಹೀಗಾಗಿ ಗಳಿಸಿದ ಆದಾಯ ಸಾಲದೆ ಮತ್ತೆ ಸಾಲದಲ್ಲಿ ಮುಳುಗುತ್ತಿದ್ದಾನೆ. ವ್ಯವಸ್ಥಿತವಾದ ಖರ್ಚಿನ ಮಾರ್ಗಗಳು ಇಲ್ಲದೆ ಇರುವುದು ಇವರು ತಮ್ಮನ್ನು ತಾವೇ ಶೋಷಿಸಿಕೊಳ್ಳುವಂತೆ ಆಗಿದೆ. ಆದ್ದರಿಂದಲೇ ಆರ್ಥಿಕ ಸ್ಥಿತಿಯ ಏರುಪೇರು ಹಕ್ಕಿಪಿಕ್ಕಿಯರಲ್ಲಿ ಸಾಮಾನ್ಯವಾಗಿದೆ. ಉದ್ಯೋಗದ ಕ್ಷೇತ್ರದಲ್ಲಿ ಗಳಿಸುವ ಆದಾಯಕ್ಕಿಂತ ಹೆಚ್ಚು ಖರ್ಚು ಬಯಸುತ್ತಿರುವ ಇವರು ಆರ್ಥಿಕೋತ್ಪಾದನೆಯು ಸಹ ಕೊರತೆಯಿಂದಲೇ ಕೂಡಿದೆ. ಮಹಿಳೆಯರು ಅಧಿಕ ಸಂಖ್ಯೆಯಲ್ಲಿಯೇ ದುಡಿಯುತ್ತಿರುವುದರಿಂದಲೇ ಇವರ ಆರ್ಥಿಕ ಸಬಲತೆಗೆ ಕಾರಣವಾಗಿದೆ. ಮಹಿಳೆಯರು ದುಡಿಯುವ ವಿವಿಧ ವೃತ್ತಿಗಳಾದ ವ್ಯಾಪಾರ, ಸ್ವಯಂ ಉದ್ಯೋಗ, ಗೃಹಕೈಗಾರಿಕೆ ಕೂಲಿಯಲ್ಲಿ ನಿರತರಾದವರು ಪಡೆಯುವ ಆದಾಯ ಹೆಚ್ಚಿನ ತಾರತಮ್ಯವಿಲ್ಲದೆ ಗೃಹ ಸಂಬಂಧಿ ವೆಚ್ಚದಲ್ಲಿ ಹೆಚ್ಚಿನ ಪಾಲು ವಹಿಸಿಕೊಂಡಿದ್ದಾಳೆ.

ವಾರ್ಷಿಕ ಆದಾಯದ ಸರಾಸರಿಯಲ್ಲಿ ೧೮೦೦ ಕನಿಷ್ಟ ಮಟ್ಟದ ಆದಾಯವಾದರೆ, ಗರಿಷ್ಟ ಮಟ್ಟದ ಆದಾಯ ೬೩೦೦ ಆಗಿದೆ. ಒಂದು ವರ್ಷದ ಅವಧಿಯಲ್ಲಿ ಪ್ರತಿಯೊಂದು ಕುಟುಂಬದ ಆದಾಯದ ಸರಾಸರಿ ಮಟ್ಟವನ್ನು ಗುರುತಿಸಲಾಗಿದೆ. ಹೀಗೆ ಆದಾಯದ ಮಟ್ಟವು ಹಕ್ಕಿಪಿಕ್ಕಿಯರ ಜೀವನ ಮಟ್ಟವನ್ನು ಕಂಡು ಹಿಡಿಯಬಹುದಾಗಿದೆ. ಹೀಗಾಗಿ ಆದಾಯ ಮಟ್ಟವನ್ನು ಗುರುತಿಸುವಾಗ ಹಕ್ಕಿಪಿಕ್ಕಿಯರ ಉತ್ಪಾದನಾ ಪದ್ಧತಿ, ವೆಚ್ಚದ ವರಮಾನದಿಂದ ವಿವಿಧ ಮೂಲಗಳು ಕಂಡುಕೊಳ್ಳಲಾಗಿದೆ.

ಉತ್ಪಾದನಾ ಪದ್ಧತಿಯಲ್ಲಿ ಒಂದು ವರ್ಷದವಲ್ಲಿ ಉತ್ಪಾದಿಸಿದ ವಸ್ತುಗಳ ಮೌಲ್ಯವನ್ನು ಗಣನೆಗೆ ತೆಗೆದುಕೊಂಡು ಉತ್ಪಾದಿಸಲು ತೊಡಗಿಸಿದ ಬಂಡವಾಳ ಖರ್ಚು ಕಳೆದರೆ ನಂತರ ಉಳಿಯುವ ಮೌಲ್ಯ ಆದಾಯ ಎಂದು ಗುರುತಿಸುವಲ್ಲಿ ಉತ್ಪಾದನಾ ಪದ್ಧತಿಯನ್ನು ಗಣನೆಗೆ ತೆಗೆದುಕೊಳ್ಳಬೇಕಾಗಿದೆ. ಆದ್ದರಿಂದಲೇ ಆದಾಯ ಮತ್ತು ಉತ್ಪಾದನಾ ಪ್ರಮಾಣದ ವರಮಾನದಲ್ಲಿ ಆರ್ಥಿಕ ಚಟುವಟಿಕೆಗಳಿಂದ ದೊರೆಯುವ ಅಂಕಿ-ಅಂಶಗಳಿಂದ ಸುಲಭ ರೀತಿಯಲ್ಲಿ ವರಮಾನವನ್ನು ಕಂಡು ಹಿಡಿಯಲಾಗಿದೆ.

**ಆದಾಯದ ಕ್ಷೇತ್ರಧಾರಿತ ಗಳಿಕೆಗಳು**

| | | |
|---|---|---|
| ೧. ವ್ಯಾಪಾರ | ೨೪ | % |
| ೨. ವ್ಯವಸಾಯ | ೧೮ | % |
| ೩. ಗುಡಿಕೈಗಾರಿಕೆ | ೨೯ | % |
| ೪. ಬಕೀಟು ರಿಪೇರಿ | ೦೬ | % |
| ೪. ಕೂಲಿ | ೧೫ | % |
| ೫. ಸರಕಾರದ ಕೆಲಸ | ೦೩ | % |
| ೬. ಇತರೆ | ೦೫ | % |
| ಒಟ್ಟು | ೧೦೦ | |



**ಅನುಭೋಗಕ್ಕೆ ಖರ್ಚು ಮಾಡುವ ವಿವಿಧ ಮೂಲಗಳು (ಸರಾಸರಿ)**

೧. ಬಂಡವಾಳ ರೂಪದಲ್ಲಿ ೨೫ %
೨. ಬಡ್ಡಿಗಾಗಿ ೧೦ %
೩. ವ್ಯಾಪಾರದ ಉದ್ದೇಶಕ್ಕೆ ೧೫ %
೪. ಮನೆಖರ್ಚು ೩೦ %
೫. ಕುಡಿತಕ್ಕೆ ೧೫ %
೬. ಸಾರಿಗೆಗೆ ೧೨ %
೭. ಇತರೆ ೦೮ %
ಒಟ್ಟು ೧೧೫ %




ಈ ಮೇಲಿನ ಅಂಕಿ-ಅಂಶಗಳ ಸರಾಸರಿ ಹಕ್ಕಿಪಿಕ್ಕಿಯರ ಪ್ರತಿಯೊಂದು ಕುಟುಂಬದ ಸದಸ್ಯರು ದುಡಿತದ ಆಧಾರದ ಮೇಲೆ ಗುರುತಿಸಲಾಗಿದೆ. ಇವರುಗಳ ಆದಾಯದ ಮಟ್ಟ ಮತ್ತು ಖರ್ಚುಗಳ ಮೊತ್ತವನ್ನು ಕ್ಷೇತ್ರಕಾರ್ಯದಲ್ಲಿ ಪ್ರತ್ಯೇಕ ಕೋಡ್ ಶೀಟ್ ಅಳವಡಿಸಿಕೊಂಡು ಪಡೆಯಲಾಗಿದೆ. ಹೀಗಾಗಿ ಆದಾಯ ಸರಾಸರಿ ಶೇಕಡಾ ೧೦೦ ರಷ್ಟು. ಆದರೆ ಖರ್ಚಿನ ಬಾಬ್ತಿನಲ್ಲಿ ಶೇ ೧೧೫% ಖರ್ಚು ಮಾಡುತ್ತಿದ್ದಾರೆ. ಇಲ್ಲವೆ ಶೇ ೧೫% ಹೆಚ್ಚುವರಿ ಖರ್ಚು ಮಾಡುತ್ತಿರುವ ಹಕ್ಕಿಪಿಕ್ಕಿಯರು ಮತ್ತೆ ಸಾಲದ ಮೊರೆ ಹೋಗಿದ್ದಾರೆ. ಹಾಗಾಗಿ ಆದಾಯದ ಮಟ್ಟಕ್ಕಿಂತಲೂ ಹೆಚ್ಚು ಅನುಭೋಗ ಹೊಂದಿರುವ ಹಕ್ಕಿಪಿಕ್ಕಿಯರು ಉತ್ಪಾದನಾ ವಿಧಾನದಲ್ಲಿ ಬಂಡವಾಳ ಮತ್ತು ಬಡ್ಡಿ, ಕುಡಿತವನ್ನು ತಡೆಹಿಡಿದರೆ ಅಥವಾ ಕಡಿಮೆ ಮಾಡಿದರೆ, ಬಂಡವಾಳವನ್ನು ಸರಕಾರವು ಒದಗಿಸಿದರೆ ಉತ್ತಮ ಜೀವನವನ್ನು ರೂಪಿಸಿಕೊಳ್ಳಬಹುದು.

ಒಟ್ಟಾರೆ ಹಕ್ಕಿಪಿಕ್ಕಿಯರು ಅವಲಂಬಿಸಿ ದುಡಿಯುತ್ತಿರುವ ವೃತ್ತಿಗಳು ಇಂದು ಋತುಮಾನವನ್ನು ಪರಿಗಣಿಸಿಯೇ ಇವೆ. ಅದನ್ನು ಕೊಷ್ಟಕದಿಂದ ಈ ರೀತಿ ನೋಡಬಹುದು.

**ಪ್ರಮುಖ ವೃತ್ತಿಗಳು ಮತ್ತು ಅವಲಂಬಿತ ತಿಂಗಳು, ಪ್ರಮಾಣ**

| ಸಂಖ್ಯೆ | ತೊಡಗಿರುವ ಪ್ರತಿ | ತಿಂಗಳುಗಳು | | | | | | | | | | | | % |
|---|---|---|---|---|---|---|---|---|---|---|---|---|---|---|
| | | J | F | M | A | M | J | J | A | S | O | N | D | |
| ೧ | ವ್ಯವಸಾಯ | | | | | | | | | | | | | ೧೫ % |
| ೨ | ವ್ಯವಸಾಯ ಕೂಲಿ | | | | | | | | | | | | | ೨೦ % |
| ೩ | ದಿನ ಕೂಲಿ | | | | | | | | | | | | | ೨೫ % |
| ೪ | ಗುಡಿ ಕೈಗಾರಿಕೆ | | | | | | | | | | | | | ೨೮ % |
| ೫ | ವ್ಯಾಪಾರ | | | | | | | | | | | | | ೩೦ % |

ವರ್ಷದ ಪ್ರತಿ ತಿಂಗಳು ವಿವಿಧ ಬಗೆಯ ಹಲವು ವೃತ್ತಿಗಳಲ್ಲಿ ತೊಡಗಿಸಿಕೊಳ್ಳುವಂತೆ ಮಾಡಿದೆ. ಆದ್ದರಿಂದಲೇಹಕ್ಕಿಪಿಕ್ಕಿಯರು ವರ್ಷದಲ್ಲಿ ಹಲವಾರು ವೃತ್ತಿಗಳಲ್ಲಿ ತೊಡಗಿಸಿಕೊಂಡು ಅಲೆಯುವವರಾಗಿದ್ದಾರೆ. ಇದರಿಂದ ಕಾಲೋನಿಯನ್ನು ಕೆಲವು ಕುಟುಂಬಗಳು ತ್ಯಜಿಸಿ ನಾಲ್ಕರಿಂದ ಆರು ತಿಂಗಳು ಕಳೆದರೂ ತಮ್ಮ ಸ್ವಂತ ಮನೆಗೆ ಯಾರು ಬಂದಿರುವುದಿಲ್ಲ. ಹೀಗಾಗಿ ಇಂತಹ ಮನೆಗಳು ಮುರಿಯುವ ಹಂತ ತಲುಪಿವೆ.



# ಸಮಾರೋಪ

ಅಧ್ಯಯನದ ಆರಂಭದಲ್ಲಿ ಹೇಳಿರುವಂತೆ ಈ ಪ್ರಬಂಧವು ಅಲೆಮಾರಿ ಬುಡಕಟ್ಟು ಸಮುದಾಯವಾದ ಹಕ್ಕಿಪಿಕ್ಕಿಯರ ಆರ್ಥಿಕ ಸ್ಥಿತಿಗತಿಯನ್ನು ಕುರಿತದ್ದು. "ಬದಲಾಗುತ್ತಿರುವ ಸಮಾಜದಲ್ಲಿ ಹಕ್ಕಿಪಕ್ಕಿ ಸಮುದಾಯದ ಆರ್ಥಿಕ ಸ್ಥಿತಿ" (ಒಂದು ಕಾಲೋನಿಯ ವಿಶಿಷ್ಟ ಅಧ್ಯಯನ) ಎನ್ನುವ ಶೀರ್ಷಿಕೆಯಡಿಯಲ್ಲಿ ಹಕ್ಕಿಪಿಕ್ಕಿಯರ ವರ್ತಮಾನದ ಆರ್ಥಿಕ ಚಟುವಟಿಕೆಗಳನ್ನು ಅಧ್ಯಯನಕ್ಕೊಳಪಡಿಸಲಾಗಿದೆ. ಸಮುದಾಯದ ಜನರ ಜೀವನ ವಿಧಾನದಲ್ಲಿ ಬಹು ಮುಖ್ಯವಾದ ಪಾತ್ರವಹಿಸುವ ಆರ್ಥಿಕ ವ್ಯವಸ್ಥೆಯು ಪ್ರಗತಿ ಹೊಂದಿದಂತೆ ತನ್ನ ಬಾಹ್ಯ ರೂಪಗಳನ್ನು ಬದಲಾಯಿಸಿಕೊಳ್ಳುತ್ತದೆ. ಆದ್ದರಿಂದಲೇ ಬದಲಾದ ಸಮಾಜದೊಂದಿಗೆ ಹಕ್ಕಿಪಿಕ್ಕಿಯರು ಗುರುತಿಸಿಕೊಂಡ ಜೀವನ ವಿಧಾನದ ರೂಪರೇಷಗಳನ್ನು ಬದಲಾಯಿಸಿಕೊಂಡು ಸಮಾಜದೊಂದಿಗೆ ಹೊಂದಿಕೊಂಡ ಸ್ಥಿರವಾದ ಜೀವನ ಶೈಲಿಯನ್ನು ತಿಳಿಯುವುದು ಇಲ್ಲಿನ ಮುಖ್ಯ ಉದ್ದೇಶ.

ಹಕ್ಕಿಪಿಕ್ಕಿಯರು ಭೂತಾನಹಳ್ಳಿ ಕಾಲೋನಿಯಲ್ಲಿ ೩೦ ವರ್ಷಗಳ ಸ್ಥಿರ ಜೀವನ ಕಂಡರೂ ಕಾಲೋನಿ ಜನರ ಬದುಕು ತೀವ್ರವಾಗಿ ಬದಲಾಗಿದೆಯೆಂದು ಹೇಳಲು ಸಾಧ್ಯವಿಲ್ಲ. ಆದರೂ ಸಹ ಒಂದು ಸ್ವಯಂಪೂರ್ಣ ಗ್ರಾಮವಾಗಿ ರೂಪಗೊಳ್ಳುವಲ್ಲಿ ವಿಫಲವಾಗಿದೆ. ಸಾಮಾಜಿಕ ಬದಲಾವಣೆಯು ಜನರ ಅಸಂಬದ್ಧ ನಡವಳಿಕೆಗಳನ್ನು ಮತ್ತು ಮೂಢ ಸಂಪ್ರದಾಯಗಳನ್ನು ಬದಲಾಯಿಸಿ ಜನರ ಆರ್ಥಿಕಾಭಿವೃದ್ಧಿಗೆ ಪೂರಕವಾಗುವ ಮನಸ್ಥಿತಿಯ ಕಡೆಗೆ ಮುಖ ಮಾಡಿದ್ದರೂ, ಮೂಲಭೂತ ಸೌಲಭ್ಯಗಳ ಕೊರತೆಯಿಂದಾಗಿ ಇವರ ಸಾಮಾಜಿಕ ಸ್ಥಿತಿಗತಿ ಬಹಳ ಹಿಂದುಳಿದಿದೆ. ದುಡಿಯುವ ವಿವಿಧ ವೃತ್ತಿಗಳಲ್ಲಿ ತೊಡಗಿಕೊಂಡಿರುವ ಜನರು ಕಡು ಬಡತನದಿಂದ ಕೂಡಿರುವವರೇ ಹೆಚ್ಚು. ಅವರುಗಳಲ್ಲಿ ಸಾಕ್ಷರತೆಯ ಪ್ರಮಾಣವು ಸಹ ಬೆರಳೆಣಿಕೆಯಷ್ಟು ಮಾತ್ರ. ಗಳಿಸುವ ಆದಾಯ ಕುಟುಂಬ ನಿರ್ವಹಣೆಗೂ ಸಾಕಾಗುವುದಿಲ್ಲ.

ಬನ್ನೇರುಘಟ್ಟದ ಪರಿಸರದಲ್ಲಿರುವ ಹಕ್ಕಿಪಕ್ಕಿಯರು ಬಹಳಷ್ಟು ಹಿಂದುಳಿದವರಾಗಿದ್ದಾರೆ. ಆರ್ಥಿಕ ಸಾಮಾಜಿಕ ಬೆಳವಣಿಗೆಗಳು ಹಲವು ಹಂತಗಳಲ್ಲಿಯೇ ನಿಂತಿವೆ. ಕೆಲವು ಕುಟುಂಬಗಳು ಭೂಮಿಯನ್ನೆ ಅವಲಂಬಿಸಿವೆ. ಇದರಿಂದ ದೊರೆಯುವ ಆದಾಯ ಮತ್ತು ಲಾಭಂಶ ಕಡಿಮೆಯೇ. ಕೆಲವು ಬಾರಿ ಆನೆಗಳ ಕಾಟದಿಂದ ಬೆಳೆದ ಬೆಳೆಗಳು ಕೈಗೆ ಸಿಗುವುದಿಲ್ಲ.

ಇಂದು ತಮ್ಮ ಆರ್ಥಿಕ ಸ್ಥಿತಿಯನ್ನು ನಿಭಾಯಿಸಲು ಸುತ್ತಲ ಸಮುದಾಯಗಳೊಂದಿಗೆ ಅನೇಕ ವಿಧವಾದ ವೃತ್ತಿಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಅದೇ ರೀತಿ ಸುತ್ತಲಿನ ಸಮುದಾಯಗಳ ಶ್ರೀಮಂತ ಭೂಮಾಲೀಕರು ಸಾಲದಾತರಾಗಿ ಸಾಲ ನೀಡುತ್ತಿದ್ದಾರೆ. ಇದರಿಂದ ಗುಡಿ ಕೈಗಾರಿಕೆ ಮತ್ತು ವ್ಯಾಪಾರದಲ್ಲಿ ಬಂಡವಾಳದ ಮೂಲವಾಗಿ ಇವರುಗಳನ್ನೆ ಅವಲಂಬಿಸಿರುವವರೇ ಹೆಚ್ಚು. ಬದಲಾದ ಇಂದಿನ ಪರಿಸ್ಥಿತಿಯಂತೆ ಉತ್ಪಾದನಾ ವಿಧಾನಗಳನ್ನು ಬದಲಾಯಿಸಿಕೊಂಡಿದ್ದಾರೆ.

ಸಾಮಾಜಿಕ ವ್ಯವಸ್ಥೆಯ ಹಲವಾರು ಸಂಪ್ರದಾಯಗಳು, ಆಚರಣೆಗಳು, ಹಬ್ಬಗಳು ಇಂದು ಮಾಯಾವಾಗಿವೆ. ಕಾಲೋನಿಯಲ್ಲಿ ಹಬ್ಬಗಳನ್ನು ಎಲ್ಲರೂ ಸೇರಿ ಮಾಡುವುದು ಮರೆತು ಹೋಗಿದೆ. ಸಂಸ್ಕಾರಗಳು ಸುತ್ತಲಿನ ಪರಿಸರದಂತೆ ಬದಲಾಯಿಸಿಕೊಂಡಿದ್ದಾರೆ. ವಿಶೇಷವಾಗಿ ಸಾವು, ಮದುವೆ, ಜನನ, ಇಂತಹ ಹಲವು ಸಂಸ್ಕಾರಗಳು ಬಹುತೇಕ ಬದಲಾವಣೆಗೊಂಡು ಸುತ್ತಲ ಗ್ರಾಮಗಳ ಹಳ್ಳಿಯ ಜನರನ್ನು ಅನುಸರಿಸತೊಡಗಿದ್ದಾರೆ.

ವ್ಯಾಪಾರ, ಗುಡಿಕೈಗಾರಿಕೆ, ಕೂಲಿಯಂತಹ ವಿವಿಧ ವೃತ್ತಿಗಳಲ್ಲಿ ತೊಡಗಿಸಿಕೊಂಡ ಇವರುಗಳು ಆರ್ಥಿಕ ವ್ಯವಸ್ಥೆಯನ್ನು ನಿರ್ವಹಿಸಲು ಬೇಕಾದ ಅಲ್ಪ ಸ್ವಲ್ಪ ಗಳಿಕೆಯ ಮೂಲವಾಗಿ ಇಂದು ಇವುಗಳನ್ನು ನೆಚ್ಚಿಕೊಂಡು ಬದುಕುವ ಪರಿಸ್ಥಿತಿ ಇದೆ. ಸರಕಾರದ ಯೋಜನೆಗಳಾಗಲಿ, ಗ್ರಾಮಪಂಚಾಯತಿಯಾಗಲಿ ಕಾಲೋನಿಯ ಕಡೆಗೆ ಮುಖ ಸಹ ಮಾಡಿಲ್ಲ. ಸರಕಾರದ ಬುಡಕಟ್ಟು ಸಮುದಾಯದ ಮೀಸಲಾತಿ ಹಣವು ಈ ಕಾಲೋನಿಯಲ್ಲಿ ವಿನಿಯೋಗವಾದಿರುವುದು ಕಣ್ಣಿಗೆ ಕಾಣುವ ವಿಷಯವಾಗಿ ಗೋಚರಿಸುತ್ತದೆ. ನಗರಗಳು ಬೆಳವಣಿಗೆಯು ಬೆಳೆಯುತ್ತಿದ್ದರೂ ಕಾಲೋನಿಯಲ್ಲಿ ಮೂಲಭೂತ ಸೌಲಭ್ಯಗಳು ಇನ್ನು ದೊರೆತಿಲ್ಲ. ಶಿಕ್ಷಣಕ್ಕೆ ನೀಡಿರುವ ಆದ್ಯತೆಯನ್ನು ಗಮನಿಸಿದಲ್ಲಿ ತೀರ ಕೆಳಮಟ್ಟದ ಬೆಳವಣಿಗೆ ಕಂಡು ಬರುತ್ತದೆ. ಕಾಲೋನಿಯ ಗಿರಿಜನ ಆಶ್ರಮ ಶಾಲೆಯು ವಸತಿ ಶಾಲೆಯಾಗಿರದೆ ನಿರ್ದಿಷ್ಟ ಸಮಯದಲ್ಲಿ ತೆರೆಯುವಂತದಾಗಿದೆ. ಶಾಲೆಯಲ್ಲಿ ಶಿಕ್ಷಕರು, ಅಡುಗೆಯವರು ಸಹ ಇಲ್ಲದ ಪರಿಸ್ಥಿತಿ ಆಶ್ರಮ ಶಾಲೆಯದ್ದು. ಇದರಿಂದಾಗಿ ಕಾಲೋನಿಯಲ್ಲಿ ಶಿಕ್ಷಣ ಪಡೆದವರ ಸಂಖ್ಯೆಯೇ ವಿರಳವಾಗಿದೆ. ಒಟ್ಟು ಕಾಲೋನಿಯ ಜನಸಂಖ್ಯೆಯಲ್ಲಿ ಪ್ರಾಥಮಿಕ ಶಿಕ್ಷಣ ಪಡೆದವರು ೬೨ ಜನ, ಮಾಧ್ಯಮಿಕ ೨೮, ಸೆಂಕಡರಿ ೮, ಪಿ.ಯು.ಸಿ. ೨ ಜನರು ಮಾತ್ರ. ಹಾಗಾಗಿ ಶಿಕ್ಷಣ ಕ್ಷೇತ್ರದಲ್ಲಿ ಹಿಂದುಳಿದ ಇವರುಗಳ ಬದುಕು ಅನಿಶ್ಚಿತತೆಯಿಂದಲೇ ಕೂಡಿದೆ.

ದಿನ ದಿನಾಲು ಹೊಸ ಹೊಸ ಬದಲಾವಣೆಗಳನ್ನು ಕಾಣುತ್ತಿರುವ ಬಿಸ್ನೇರುಘಟ್ಟದ ಪರಿಸರ ಮತ್ತು ಭೂಪ್ರದೇಶ ಹೆಚ್ಚು ಬದಲಾವಣೆಯಾಗತೊಡಗಿದೆ. ಇದರಿಂದ ಹಕ್ಕಿಪಿಕ್ಕಿಯರ ಭೂಮಿಯ ಮೇಲೆ ಎಲ್ಲರ ಕಣ್ಣು. ಇವರುಗಳನ್ನು ಈ ಪರಿಸರದಿಂದ ಒಕ್ಕಲೆಬ್ಬಿಸುವ ಪ್ರಯತ್ನಗಳು ನಡೆದಿವೆ. ಅರಣ್ಯಾಧಿಕಾರಿಗಳು ಇವರನ್ನು ದಿನನಿತ್ಯ ಮಾನಸಿಕವಾಗಿ, ಮತ್ತು ದೈಹಿಕವಾಗಿ ಹಿಂಸಿಸಿ ಶಿಕ್ಷಿಸುತ್ತಿರುವುದು ಕಾಣಬರುತ್ತದೆ. ಕಾಲೋನಿಯ ಆರಂಭದಲ್ಲಿ ಅಂದಿನ ರಾಜ್ಯಪಾಲರಾದ ರಾಚಯ್ಯನವರು ವಿವಿಧ ಇಲಾಖೆಗಳ ಸಮನ್ವಯದಿಂದಲೇ ಭೂಮಿಯನ್ನು ನೀಡಿದ್ದರು. ಆದರೆ ಪ್ರಸ್ತುತದ ಸರ್ವಾಧಿಕಾರಿಗಳಾದ ಬಿಳಿ ಆನೆಗಳು ಐ.ಎ.ಎಸ್. ಮತ್ತು ಐ.ಎಫ್.ಎಸ್‌ನ ಅಧಿಕಾರಿಗಳು ಈ ಜನರನ್ನು ಭೂಮಿಯಿಂದ ಬೇರೆ ಕಡೆಗೆ ಸಾಗಿಸುವ ಪ್ರಯತ್ನಗಳನ್ನು ನಡೆಸಿದ್ದಾರೆ. ಅರಣ್ಯ ಇಲಾಖೆಯ ಒತ್ತುವರಿ ಕಾರ್ಯದಿಂದ ಅನೇಕ ಕುಟುಂಬಗಳು ವ್ಯವಸಾಯಕ್ಕೆ ತಮ್ಮ ಜಮೀನಿನ ಕಡೆಗೆ ತಲೆ ಹಾಕದಂತೆ ಮಾಡಿದ್ದಾರೆ.

ಕಾಲೋನಿಯಲ್ಲಿ ಒಟ್ಟು ಜನಸಂಖ್ಯೆಯಲ್ಲಿ ದುಡಿಯುವ ದುಡಿಮೆಗಾರರು ವಿವಿಧ ವರ್ಗಗಳಲ್ಲಿ ವಿವಿಧ ವೃತ್ತಿಗಳನ್ನು ಅವಲಂಬಿಸಿದ್ದಾರೆ. ಸುಮಾರು ಅರ್ಧದಷ್ಟು ಕುಟುಂಬಗಳು ವ್ಯವಸಾಯವನ್ನು ಕೈ ಬಿಟ್ಟಿದ್ದಾರೆ. ಹೀಗಾಗಿ ಇವರುಗಳ ಬಡತನವನ್ನು ಗುರುತಿಸಲು ಇದಕ್ಕಿಂತ ಉತ್ತಮ ಮಾನದಂಡ ಮತ್ತ್ಯಾವುದು ಬೇಕಿಲ್ಲ. ಕಾಲೋನಿಯಲ್ಲಿ ದುಡಿಯುವ ಜನರ ಲಿಂಗಾನುಪಾತದಲ್ಲಿನ ಸ್ವರೂಪವು ಅಭಿವೃದ್ಧಿಯ ಪಾತ್ರದ ಬಗ್ಗೆ ಒಳನೋಟವನ್ನು ಒದಗಿಸುತ್ತದೆ. ಇಲ್ಲಿ ಮಹಿಳೆಯರೇ ಹೆಚ್ಚು ದುಡಿಮೆಯಲ್ಲಿ ಪಾಲ್ಗೊಂಡವರರಾಗಿದ್ದಾರೆ.

ಈ ಅಧ್ಯಯಯಿಂದ ಕಂಡು ಬಂದ ತಥ್ಯವೆಂದರೆ ಕಾಲೋನಿಯಲ್ಲಿನ ಕುಟುಂಬಗಳ ಆರ್ಥಿಕ ಶಕ್ತಿಯ ಕೇಂದ್ರ ಬಿಂದು ಮಹಿಳೆಯಾಗಿದ್ದಾಳೆ. ದುಡಿಮೆಗಾರರ ವರ್ಗದಲ್ಲಿ ಕಣ್ಣಿಗೆ ಕಾಣುವಂತೆ ೧/೩ ಕ್ಕಿಂತ ಅಧಿಕ ಭಾಗದ ಮಹಿಳೆಯರು ಕಂಡು ಬರುತ್ತಾರೆ. ಇವರುಗಳ ಅಭಿವೃದ್ಧಿಯ ಕುರಿತು ಚರ್ಚಿಸುವರೆಲ್ಲಾ ಮೊದಲು ಮಹಿಳಾ ದುಡಿಮೆಗಾರರನ್ನು ಗಮನದಲ್ಲಿಟ್ಟುಕೊಳ್ಳಬೇಕಾಗುತ್ತದೆ. ಮಹಳೆಯರ ಅಭಿವೃದ್ಧಿಗೆ ವಿಶೇಷವಾದ ಕ್ರಮಗಳನ್ನು ರೂಪಿಸಬೇಕಾಗುತ್ತದೆ. ಕಾಲೋನಿಯಲ್ಲಿ ಮೊದಲು ನಡೆಯಬೇಕಾದ ಕೆಲಸವೆಂದರೆ ಶೈಕ್ಷಣಿಕ ಕಾರ್ಯಕ್ರಮಗಳು, ಹಾಗೂ ಆಶ್ರಮ ಶಾಲೆಯಲ್ಲಿನ ವ್ಯವಸ್ಥೆ ಹೆಚ್ಚು ಬದಲಾಗಿ ಬಲಗೊಳ್ಳಬೇಕು. ವಿಶೇಷವಾಗಿ ಕಾಲೋನಿಯಲ್ಲಿ ರೂಪಿತವಾದ ಉಪಾಧ್ಯಾಯರ ವಸತಿ ಗೃಹಗಳಲ್ಲಿ ಉಪಾಧ್ಯಾಯರು ತಂಗುವಂತೆ ಮಾಡಬೇಕು. ಗುಡಿಕೈಗಾರಿಕೆಯಲ್ಲಿ ತೊಡಗಿಸಿಕೊಂಡವರಲ್ಲಿ ಉಳಿತಾಯದ ಕಲ್ಪನೆ ಮೂಡಿಸಿ, ಸ್ವಸಹಾಯ ಗುಂಪುಗಳಾಗಿ ಅವರುಗಳಲ್ಲಿಯೇ ಹಣಕಾಸಿನ ವಿಷಯಗಳ ಬಗ್ಗೆ ಹಾಗೂ ಬ್ಯಾಂಕುಗಳ ಬಗ್ಗೆ ಹೆಚ್ಚಿನ ತಿಳುವಳಿಕೆ ನೀಡಬೇಕಾಗಿದೆ.

ಎಲ್ಲಿಯವರೆಗೆ ಕಾಲೋನಿಯಲ್ಲಿ ಕೃಷಿಯೇತರ ಚಟುವಟಿಕೆಗಳನ್ನು ಬೆಳೆಸಲು ಸಹಾಯ ಮಾಡುವುದಿಲ್ಲವೋ, ಅಲ್ಲಿಯವರೆಗೂ ಈ ಜನರ ಅಭಿವದ್ಧಿ ಕಾಣಲು ಸಾಧ್ಯವಿಲ್ಲ. ಈಗಿರುವ

ಮಾಹಿತಿಯ ಪ್ರಕಾರ ಕಾಲೋನಿಯಲ್ಲಿ ಬಡತನ ಮತ್ತು ಸಾಲದ ಪ್ರಮಾಣದ ಕುಟುಂಬಗಳೇ ಹೆಚ್ಚಿನವುಗಳು.

## ಅಧ್ಯಯನದಿಂದ ಕಂಡು ಬಂದ ಬಹುಮುಖ್ಯ ತಥ್ಯಗಳು

೧. ಹಕ್ಕಿಪಿಕ್ಕಿರ ಕಾಲೋನಿಯು ಇನ್ನು ಒಂದು ಸ್ವಯಂ ಪೂರ್ಣ ಗ್ರಾಮವಾಗಿ ರೂಪಿತವಾಗುವಲ್ಲಿ ವಿಫಲವಾಗಿದೆ. ಕಾಲೋನಿಯಲ್ಲಿ ಮೂಲಭೂತ ಸೌಲಭ್ಯಗಳು ಕಂಡು ಬರುವುದಿಲ್ಲ.

೨. ಅಲೆಮಾರಿ ಬದುಕು ಸಂಪೂರ್ಣ ಇಲ್ಲವಾಗಿಲ್ಲ, ಆದರೂ ಸ್ವಲ್ಪಮಟ್ಟಿಗೆ ಸ್ಥಿರ ಜೀವನ ಮಾಡುವವರಾಗಿದ್ದಾರೆ. ವ್ಯಾಪಾರದ ಉದ್ದೇಶದಿಂದ ಹಲವು ಕುಟುಂಬಗಳು ೪ ತಿಂಗಳು ಕಾಲ ಕಾಲೋನಿಯನ್ನು ತ್ಯಜಿಸುತ್ತವೆ. ಇದರಿಂದ ಕಾಲೋನಿಯಲ್ಲಿನ ಮನೆಗಳು ಮುರಿಯುವ ಹಂತ ತಲುಪಿವೆ.

೩. ಅರಣ್ಯಕ್ಕೆ ಹೊಂದಿಕೊಂಡಂತೆ ಇರುವ ಕಾಲೋನಿಯು ಬೆಟ್ಟದ ಇಳಿಜಾರಿನಿಂದ ಕೂಡಿದೆ. ಇದರಿಂದ ವನ್ಯ ಮೃಗಗಳ ಭಯ, ಅವುಗಳಿಂದ ವ್ಯವಸಾಯದಲ್ಲಿ ಅಪಾರ ಹಾನಿಯಾದ ಸನ್ನಿವೇಶಗಳು ಕಂಡು ಬರುತ್ತದೆ. ಹಲವು ಬಾರಿ ಆನೆಗಳ ಕಾಟದಿಂದ ಪ್ರಾಣ ಹಾನಿ ಆಗಿರುವುದು ಕಾಣಬಹುದಾಗಿದೆ.

೪. ವಿವಿಧ ವೃತ್ತಿಗಳಲ್ಲಿ ತೊಡಗಿಸಿ ಕೊಂಡವರಲ್ಲಿ ಮಹಿಳೆಯರೇ ಹೆಚ್ಚು. ಮಹಿಳೆಯರ ಪಾತ್ರ ಅಷ್ಟೇ ಮುಖ್ಯವಾಗಿದೆ. ಮಹಿಳೆಯರು ಬಂಡವಾಳದ ಮೂಲಕ್ಕೆ ಸಾಕಷ್ಟು ಅಲೆದಾಟದಲ್ಲಿ ತೊಡಗಿ, ಗಳಿಸುವ ಆದಾಯದಲ್ಲಿಶೇ ೫೦ರಷ್ಟು ಆದಾಯ ಬಂಡವಾಳ ಮತ್ತು ಬಡ್ಡಿಯ ರೂಪದಲ್ಲಿ ಪರಭಾರೆ ಮಾಡುತ್ತಿದ್ದಾರೆ.

೫. ಜನರ ಆದಾಯ ಮತ್ತು ಉಳಿತಾಯ ಸಾಕಷ್ಟು ಇಲ್ಲದಿರುವುದರಿಂದ ಬಂಡವಾಳದ ಕೊರತೆ ಹೆಚ್ಚಲು ಕಾರಣವಾಗಿದೆ.

೬. ಸಾರಿಗೆ ವ್ಯವಸ್ಥೆಯಿಂದಾಗಿ ವಿಭಿನ್ನ ಅಭಿರುಚಿ, ಭಾಷೆ, ಸಂಸ್ಕೃತಿ ಮತ್ತು ಜಾತಿಗಳ ಜನರ ಮಿಲನ ಸಾಧ್ಯವಾಗಿ ಈ ಜನರಲ್ಲಿ ಬದಲಾವಣೆಗಳಾಗುತ್ತಿವೆ. ಈ ವ್ಯವಸ್ಥೆಯಿಂದ ಮೂಢ ನಂಬಿಕೆ ಸಂಪ್ರದಾಯಗಳು ಮಾಯವಾಗಿ ಸಾಮಾಜಿಕ ಸಮಾನತೆಯ ಕಡೆಗೆ ನಡೆಯುತ್ತಿದ್ದಾರೆ.

೭. ಕಾಲೋನಿಯಲ್ಲಿ ಸರಕಾರಿ ಕಟ್ಟಡಗಳಾದ ಉಗ್ರಾಣ, ಉಪಾಧ್ಯಾಯರ ವಸತಿ ಗೃಹಗಳು ಖಾಲಿ ಇದ್ದು, ಯಾರು ವಾಸಿಸದೆ ಮುರಿದು ಬೀಳುವ ಹಂತದಲ್ಲಿವೆ.

೮. ಗುಡಿಕೈಗಾರಿಕೆ ಮತ್ತು ವ್ಯಾಪಾರದಲ್ಲಿ ತೊಡಗಿಸಿಕೊಂಡ ಮಹಿಳೆಯರಲ್ಲಿ ಅನಕ್ಷರಸ್ಥರು ಹೆಚ್ಚಾಗಿದ್ದಾರೆ.ಅವರುಗಳಲ್ಲಿ ಸ್ವಂತಿಕೆ ಇಲ್ಲದಾಗಿದೆ. ಬೇರೆಯವರ ಮಾತು ಕೇಳಿಕೊಂಡು ತಮ್ಮ ತಮ್ಮಲ್ಲಿಯೇ ಒಳ ಜಗಳಗಳನ್ನು ಮಾಡಿಕೊಳ್ಳುವವರಾಗಿದ್ದಾರೆ.

೯. ಕಾಲೋನಿಯಲ್ಲಿ ಯಾವುದೇ ಅಂಗಡಿ ಮುಗ್ಗಟ್ಟು ಕಂಡುಬರುವುದಿಲ್ಲ. ಆದರೆ ಸಾರಾಯಿ ಅಂಗಡಿ ದಿನವೊಂದಕ್ಕೆ ೮೦೦ ರಿಂದ ೧೦೦೦ರೂಗಳ ಲಾಭಗಳಿಸುತ್ತಿದೆ.

೧೦. ನಗರಿಕರಣದಿಂದ ಹಕ್ಕಿಪಿಕ್ಕಿಯರ ಭೂಮಿಯ ಪಕ್ಕದ ಭೂಪ್ರದೇಶವು ಔದ್ಯಮಿಕ ವಲಯವಾಗಿ ರೂಪುಗೊಳ್ಳುತ್ತಿದೆ. ಇದರಿಂದ ಹಕ್ಕಿಪಿಕ್ಕಿಯರ ಭೂಮಿಯ ಮೇಲೆ ಅನೇಕರ ಕಣ್ಣು.

೧೧. ಶ್ರೀಮಂತ ಭೂಮಾಲೀಕರು ಹಕ್ಕಿಪಿಕ್ಕಿಯರ ಭೂಮಿಯನ್ನು ಒತ್ತುವರಿ ಮಾಡಿಕೊಂಡು ಬೇಲಿ ಹಾಕಿಕೊಂಡು ೨೦ ರಿಂದ ೩೦ ಎಕರೆ ಭೂಮಿಯನ್ನು ಒಬ್ಬಬ್ಬ ರೈತರು ತಮ್ಮ ಆಸ್ತಿಯಾಗಿ ಪರಿವರ್ತಿಸಿಕೊಂಡಿದ್ದಾರೆ.

೧೨. ವಸತಿ ಸಮಸ್ಯೆ ಕಾಲೋನಿಯಲ್ಲಿ ಕಂಡು ಬರುತ್ತದೆ. ಟೆಂಟ್ ಮನೆಗಳು, ಗುಡಿಸಲುಗಳು ಹೆಚ್ಚಿನ ಪ್ರಮಾಣದಲ್ಲಿವೆ.

೧೩. ಅರಣ್ಯ ಇಲಾಖೆಯವರು ಹಕ್ಕಿಪಿಕ್ಕಿಯರ ಭೂಮಿಯನ್ನು ಒತ್ತುವರಿ ಮಾಡಿಕೊಂಡು, ಅರಣ್ಯಕ್ಕೆ ಸೇರಿಸಿಕೊಂಡುಕಲ್ಲಿನ ಕಟ್ಟಡ ಮತ್ತು ವಿದ್ಯುತ್ ಬೇಲಿಯನ್ನು ಹಾಕಿಕೊಂಡಿದ್ದಾರೆ.

೧೪. ಗಿರಿಜನ ಆಶ್ರಮ ಶಾಲೆಯು ವಿದ್ಯಾರ್ಥಿನಿಲಯದ ಮಾದರಿಯಲ್ಲಿ. ಸರಕಾರದ ಪತ್ರಗಳಲ್ಲಿ ವಿದ್ಯಾರ್ಥಿನಿಲಯವಾಗಿದೆ. ಆಶ್ರಮ ಶಾಲೆಯು ದಿನನಿತ್ಯ ಬೆಳಿಗ್ಗೆ ೯.೩೦ಕ್ಕೆ ತೆರೆದು, ಸಂಜೆ ೬ ಗಂಟೆಗೆ ಮುಚ್ಚುತ್ತಿದ್ದಾರೆ. ಆಶ್ರಮ ಶಾಲೆಯ ವಿದ್ಯಾರ್ಥಿಗಳು ವಾಸಿಸಲುಬೇಕಾದ ಸೌಲಭ್ಯಗಳನ್ನು ಒದಗಿಸಿಲ್ಲ. ಶಾಲೆಯಲ್ಲಿ ನೀಡುವ ಆಹಾರ ಪದಾರ್ಥಗಳು ಕಳಪೆ ಗುಣಮಟ್ಟದಿಂದಲೇ ಕೂಡಿವೆ.

೧೫. ಆಶ್ರಮ ಶಾಲೆಯಲ್ಲಿ ಉಪಾಧ್ಯಾಯರು ಮತ್ತು ಅಡುಗೆ ಮಾಡುವವರು ಯಾರು ಇಲ್ಲದೆ ಇರುವುದು ಕಂಡು ಬರುತ್ತದೆ.

೧೬. ಆಶ್ರಮ ಶಾಲೆಯಲ್ಲಿನ ಮಕ್ಕಳಿಗೆ ಪಾಠ ಹೇಳಿಕೊಡುವವರು ಯಾರು ಇಲ್ಲದೆ ಇರುವುದರಿಂದ ಮಕ್ಕಳಲ್ಲಿ ಪಾಠಗಳ ತಿಳುವಳಿಕೆ ಮತ್ತು ಜ್ಞಾನವೇ ಇಲ್ಲವಾಗಿದೆ. ಶಾಲೆಯ ಮೇಲ್ವಿಚಾರಕರು ಊಟದ ಸಮಯಕ್ಕೆ ೨೦ ರಿಂದ ೩೦ ಜನರನ್ನು ಕರೆದು ಊಟ ಹಾಕಿ ಮತ್ತೆ ಮರಳಿ ಮನೆಗೆ ಕಳುಹಿಸುತ್ತಿದ್ದಾರೆ.

೧೭. ನೆಪ ಮಾತ್ರಕ್ಕೆ ಅಂಗನವಾಡಿ ಇದ್ದು, ಮೇಲ್ವಿಚಾರಕರು ಮತ್ತು ಮಕ್ಕಳು ಶಾಲೆಯಲ್ಲಿ ಕಂಡು ಬರುವುದೇ ಇಲ್ಲ.

೧೮. ಕಾಲೋನಿಯಲ್ಲಿ ೨೨ ಜನ (ವಯಸ್ಸಾದ) ವಿಧವೆಯರು ಕಂಡು ಬರುತ್ತಾರೆ. ಅವರುಗಳಿಗೆ ಸರಕಾರಿ ವಿಧವಾ ವೇತನ ಯಾವುದು ದೊರೆಯದ ಕಾರಣ ಭಿಕ್ಷಾ ವೃತ್ತಿಯನ್ನು ಮಾಡುತ್ತಿದ್ದಾರೆ.

೧೯. ಕಾಲೋನಿಯಲ್ಲಿ ಮನೆಗಳಿಗೆ ವಿದ್ಯುತ್ ಸಂಪರ್ಕವನ್ನು ಒದಗಿಸಿಲ್ಲವಾದರೂ ೩೭ ರೇಡಿಯೋ, ಮತ್ತು ೮ ಕುಟುಂಬದಲ್ಲಿ ಟಿ.ವಿ. ಕಂಡು ಬರುತ್ತದೆ. ಇಂತಹ ಮನೆಗಳಲ್ಲಿ ಬ್ಯಾಟರಿ ಚಾಲಿತ ವಿದ್ಯುತ್ ಸಂಪರ್ಕ ಹೊಂದಿರುವುದು ಕಂಡು ಬರುತ್ತದೆ.

## ಸಮಸ್ಯೆಗಳು

೧. ಕಾಲೋನಿಯ ಆರಂಭವಾಗಿ ೫೦ ವರ್ಷಗಳು ಉರಳಿದರೂ ಇನ್ನು ಒಂದು ಗ್ರಾಮವಾಗಿ ರೂಪಿತವಾಗುವಲ್ಲಿ ವಿಫಲವಾಗಿದೆ. ಕಾಲೋನಿಯಲ್ಲಿ ದೀಪದ ವ್ಯವಸ್ಥೆ ಸಹ ಇಲ್ಲವಾಗಿದೆ. ಮನೆಗಳಿಗೆ ವಿದ್ಯುತ್ ಸಂಪರ್ಕವೇ ಇಲ್ಲ. ಹೀಗಾಗಿ ಕಾಲೋನಿಯ ಜನರು ವಿದ್ಯುತ್ ಸೌಲಭ್ಯದಿಂದ ವಂಚಿತರಾಗಿದ್ದಾರೆ.

೨. ವ್ಯವಸ್ಥಿತವಾದ ರಸ್ತೆಗಳಿಲ್ಲ. ಚರಂಡಿ ವ್ಯವಸ್ಥೆ ಇಲ್ಲದೆ ಶುಚಿತ್ವವೂ ಇಲ್ಲವಾಗಿದೆ.

೩. ಅರಣ್ಯ ಸಮೀಪವಿರುವುದರಿಂದ ಆನೆಗಳ ಕಾಟ ಹೆಚ್ಚು.

೪. ಭೂಮಿಯ ಹಂಚಿಕೆಯಲ್ಲಿ ಮೂಲಭೂತ ದೋಷಗಳಿವೆ.

೫. ಮೂಲಭೂತ ಸೌಲಭ್ಯಗಳ ಕೊರತೆ ಎದ್ದು ಕಾಣುತ್ತದೆ.

೬. ಗ್ರಾಮ ಪಂಚಾಯತಿಯ ಮೀಸಲು ಹಣದಲ್ಲಿನ ಸೌಲಭ್ಯಗಳು ಕಾಲೋನಿಯ ಕಡೆಗೆ ಮುಖ ಸಹ ಮಾಡಿಲ್ಲ.

೭. ಆರೋಗ್ಯ ಕೇಂದ್ರವಿಲ್ಲ.

೮. ಪಡಿತರ ಚೀಟಿಯ ದಿನಸಿ (ಧಾನ್ಯ) ತರುವುದಕ್ಕಾಗಿ ೧.೫ ಕಿ.ಮಿ. ದೂರ ಪ್ರತ್ಯೇಕ ಹಳ್ಳಿಗೆ ಬರಬೇಕು.

೯. ಕಾಲೋನಿಯಲ್ಲಿ ಅಂಗಡಿಗಳು ಸಹ ಇಲ್ಲ.

೧೦. ಜನರು ಒಂದೆಡೆ ಸೇರಲು ಸಮುದಾಯ ಭವನವಿಲ್ಲ.

೧೧. ಬಹುತೇಕ ಕುಟುಂಬಗಳು ಟಿನ್, ಗುಡಿಸಲುಗಳಲ್ಲಿವೆ. ಆದ್ದರಿಂದ ಕಾಲೋನಿಯಲ್ಲಿ ವಸತಿ ಸಮಸ್ಯೆ ಇದೆ.

೧೨. ಅರಣ್ಯ ಇಲಾಖೆಯವರು ಮತ್ತು ಶ್ರೀಮಂತ ಭೂಮಾಲೀಕರು ಹಕ್ಕಿಪಿಕ್ಕಿಯರ ಭೂಮಿಯನ್ನು ಒತ್ತುವರಿ ಮಾಡಿಕೊಂಡು ವ್ಯವಸಾಯ ಮಾಡುತ್ತಿದ್ದಾರೆ.

೧೩. ಸಾಗುವಳಿ ಪತ್ರ ದೊರಕಿಸಿ ಕೊಡದೆ ಇರುವುದು ಮುಖ್ಯವಾದ ಸಮಸ್ಯೆಯಾಗಿದೆ.

೧೪. ಆಶ್ರಮ ಶಾಲೆಯಲ್ಲಿ ಪಾಠ ಹೇಳಿಕೊಡಲು ಯಾರು ಇಲ್ಲದೆ ಇರುವುದರಿಂದ ಮಕ್ಕಳು ಏನೂ ಕಲಿಯವಂತ ಸ್ಥಿತಿಯಲಿಲ್ಲ.

## ಸಲಹೆಗಳು

ಸಂಶೋಧನಾ ವಿದ್ಯಾರ್ಥಿಯಾದ ನಾನು ಬದಲಾಗುತ್ತಿರುವ ಸಮಾಜದಲ್ಲಿ ಹಕ್ಕಿಪಿಕ್ಕಿ ಸಮುದಾಯದ 'ಆರ್ಥಿಕ ಸ್ಥಿತಿಗತಿ' ಎಂಬ ವಿಷಯವನ್ನು ತೆಗೆದುಕೊಂಡು ಸಂಶೋಧನೆ ಮಾಡಿದಾಗ ಹಲವಾರು ಸಮಸ್ಯೆಗಳನ್ನು ಗುರುತಿಸಿದ್ದೇನೆ. ಆ ಸಮಸ್ಯೆಗಳನ್ನು ಬಗೆ ಪರಿಸುವ ಕೆಲವು ಸಲಹೆಗಳನ್ನು ನೀಡಲು ಇಚ್ಛಿಸುತ್ತೇನೆ. ಈ ಸಲಹೆಯಿಂದ ಕಾಲೋನಿಯ ಜನರ ಜೀವನ ವಿಧಾನದಲ್ಲಿ ಹಲವು ವಿಧವಲ್ಲಿ ಸಹಕಾರಿಯಾಗಬಹುದು. ಒಟ್ಟಿನಲ್ಲಿ ಕಾಲೋನಿಯ ಜನರ ಸ್ಥಿತಿಯನ್ನು ಉತ್ತಮಪಡಿಸುವತ್ತಾ ಕ್ರಮಗಳೇನಾದರೂ ಕೈಗೊಂಡಲ್ಲಿ ಈ ಸಲಹೆಗಳನ್ನು ಗಣನೆಗೆ ತೆಗೆದುಕೊಳ್ಳಬಹದು.

ಶಿಕ್ಷಣದಿಂದ ವಂಚಿತರಾದ ಹಕ್ಕಿಪಿಕ್ಕಿ ಕಾಲೋನಿಯ ಜನರು ಅನಕ್ಷರಸ್ಥರಾಗಿ ಜೀವಿಸುತ್ತಿದ್ದಾರೆ. ಇವರಿಗೆ ಹೊಸ ಬದುಕನ್ನು ನೀಡಬೇಕಾದರೆ ಹಲವಾರು ಸುಧಾರಣೆಗಳು ಕಟ್ಟುನಿಟ್ಟಾಗಿ ಜಾರಿಗೆ ಬರುವಂತೆ ಮಾಡಬೇಕಿದೆ. ಜನರ ದುಃಖಮಯ ಸ್ಥಿತಿ ಹೋಗಿ ಉಲ್ಲಾಸದಿಂದ ಸುಖಮಯವಾದ ಜೀವನಕ್ಕೆ ಅವಕಾಶ ಕಲ್ಪಿಸಲು ಸರ್ಕಾರ ಮುಂದಾಗಬೇಕಿದೆ.

೧. ಕೃಷಿ ಪದ್ಧತಿಯಲ್ಲಿ ಹಲವಾರು ಬದಲಾವಣೆಗಳು ನಡೆಯಬೇಕಿದೆ. ಉಪಕರಣಗಳು, ರಸಗೊಬ್ಬರಗಳು. ಬೀಜಗಳು. ಸಹಕಾರಿ ಕ್ಷೇತ್ರದಿಂದ ಸಾಲದ ರೂಪದಲ್ಲಿ ದೊರೆಯುವಂತೆ ಮಾಡಬೇಕಿದೆ. ನೀರಾವರಿ ಸೌಲಭ್ಯ ಒದಗಿಸಲು ಗಂಗಾಜಲ ಭಾಗ್ಯ ಕಲ್ಯಾಣ ಯೋಜನೆಯಡಿಯಲ್ಲಿ ನೀರಿನ ಸೌಲಭ್ಯ ಒದಗಿಸಿಕೊಡಬೇಕಿದೆ.

೨. ಭೂಮಿಯ ಸಾಗುವಳಿ ಪತ್ರ ಇವರುಗಳಿಗೆ ದೊರೆಯದೆ ಇರುವುದರಿಂದ ಅರಣ್ಯ ಅಧಿಕಾರಿಗಳು ಹಿಂಸೆ ಮಾಡುತ್ತಿದ್ದಾರೆ. ಸಾಗುವಳಿ ಒದಗಿಸಿ ಕೊಟ್ಟಲ್ಲಿ, ಭೂಮಿಯ ಮಾಲೀಕತ್ವದ ಅಧಿಕಾರ ದೊರೆತು ಶೋಷಣೆಯಿಂದ ಪಾರಾಗುತ್ತಾರೆ.

೩. ಕಾಲೋನಿಯ ಜನರ ಭೂ ಪ್ರದೇಶವನ್ನು ಗುರ್ತಿಸಿ, ಸರ್ವೆಮಾಡಿ ಕಂದಾಯ ಇಲಾಖೆ ಅಧಿಕಾರಿಗಳಿಂದ ಭೂ ಪ್ರದೇಶದ ಗಡಿಯನ್ನು ಗುರ್ತಿಸಿ ಕೊಡಬೇಕಾಗಿದೆ. ಇದರಿಂದ ಈ ಜನರ ಭೂಮಿಯು ಅವರುಗಳಿಗೆ ಲಭಿಸುತ್ತದೆ.

೪. ಅರಣ್ಯದ ಪ್ರಾಣಿಗಳಾದ ಆನೆಗಳು ಮತ್ತು ಕಾಡೆಮ್ಮೆಗಳಿಂದ ಬೆಳೆದ ಭೂಮಿಯಲ್ಲಿನ ಬೆಳೆಗಳು ನಾಶವಾಗುತ್ತಿರುವುದು ತಪ್ಪಿಸಬೇಕು.

೫. ವ್ಯವಸಾಯಗಾರರಿಗೆ ಬ್ಯಾಂಕುಗಳಿಂದ ಸಾಲದ ರೂಪದಲ್ಲಿ, ಮತ್ತು ಕಡಿಮೆ ಬಡ್ಡಿ ದರದಲ್ಲಿ ಹಣಕಾಸಿನ ನೆರವು ದೊರೆಯುವಂತೆ ಮಾಡಿಬೇಕಿದೆ.

೬. ವ್ಯಾಪಾರದಲ್ಲಿ ನಿರತ ಮಹಿಳೆಯರಿಗೆ ಐ.ಆರ್.ಡಿ.ಪಿ. ಯೋಜನೆನ್ವಯ ವಿಶೇಷವಾಗಿ ಸಾಲದ ಸೌಲಭ್ಯಗಳು ಬ್ಯಾಂಕುಗಳಿಂದ ದೊರೆಯುವಂತೆ ಮಾಡಿ, ಉಳಿತಾಯದ ಮನೋಭಾವನೆ ಬೆಳೆಸಬೇಕಾಗಿದೆ.

೭. ಕಾಲೋನಿಯಲ್ಲಿ ಸಾರಾಯಿ ಅಂಗಡಿ ಮುಚ್ಚಿಸಬೇಕಾಗಿದೆ. ಇದರಿಂದ ಈ ಜನರು ದುಡಿದ ಹಣವನ್ನ ಇಲ್ಲಿ ಪೋಲು ಮಾಡುವುದು ನಿಲ್ಲುತ್ತದೆ.

೮. ತಾಂತ್ರಿಕ ಮತ್ತು ವೃತ್ತಿಪರ ತರಬೇತಿಯನ್ನು ಕಾಲೋನಿಯ ಜನರಿಗೆ ನೀಡಬೇಕು. ಇದರಿಂದ ವಿವಿಧ ರಂಗಗಳಲ್ಲಿ ದುಡಿಯಲು ಅನುಕೂಲವಾಗುತ್ತದೆ.

೯. ಗ್ರಾಮ ಮಟ್ಟದಲ್ಲಿ ದೊರೆಯುವ ಎಲ್ಲ ಆರೋಗ್ಯ ಹಾಗೂ ನೈರ್ಮಲ್ಯತೆಯನ್ನು ಕಾಲೋನಿಗೆ ಒದಗಿಸಿಕೊಡಬೇಕಾಗಿದೆ.

೧೦. ಕಾಲೋನಿಯಲ್ಲಿ ಮನರಂಜನಾ ಸೌಲಭ್ಯ ಒದಗಿಸಲು ಸಮುದಾಯ ಭವನದ ನಿರ್ಮಾಣ ಹಾಗೂ ಟಿ.ವಿಯನ್ನು ಕಲ್ಪಿಸಿಸುವುದರಿಂದ ಜ್ಞಾನಾರ್ಜನೆಗೆ ಸಹಾಯಕವಾಗುತ್ತದೆ.

೧೧. ಮಹಿಳೆಯರ ವ್ಯಾಪಾರದ ಗುಂಪಿನಲ್ಲಿ ಸ್ವಸಹಾಯ ಗುಂಪು ಮಾಡಿ ವಿವಿಧ ಮಹಿಳಾ ನೇತಾರದಿಂದ ಮಹಿಳೆಯರಿಗೆ ಕಾಲೋನಿಯಲ್ಲಿ ತಯಾರಿಸುವ ಹಲವಾರು ಬಗೆಯ ವಸ್ತುಗಳ ತಯಾರಿಕೆ, ಮಾರಾಟದ ವಿಧಾನವನ್ನು ತಿಳಿಸಬೇಕಾಗಿದೆ.

೧೨. ಆಶ್ರಮ ಶಾಲೆಗೆ ಬಹಳ ಬೇಗನೆ ಸರಕಾರ ಉಪಾಧ್ಯಾಯರನ್ನು ನೇಮಿಸಬೇಕು, ಆ ಉಪಾಧ್ಯಾಯರು ಕಾಲೋನಿಯ ವಸತಿಗೃಹದಲ್ಲಿಯೇ ವಾಸಿಸುವಂತೆ ಮಾಡಬೇಕು. ಇದರಿಂದ ಕಾಲೋನಿಯ ಜನರ ಶಿಕ್ಷಣದ ಬೆಳವಣಿಗೆಗೆ ದಾರಿ ದೀಪವಾಗುತ್ತದೆ.

೧೩. ಆಶ್ರಮ ಶಾಲೆಯ ಮಕ್ಕಳಿಗೆ ವಸತಿ ಸೌಲಭ್ಯವನ್ನು ತುರ್ತಾಗಿ ಒದಗಿಸಿಕೊಡಬೇಕು.



# ಓದಿದ ಪುಸ್ತಕಗಳು


೧. *ಅರ್ಥವಿಚಾರ* ೧೯೬೯: ಮೊ.ಕ. ಗಾಂಧೀ: ಗಾಂಧೀ ಸ್ಮಾರಕ ನಿಧಿ, ಬೆಂ.

೨. *ಅಮಾತ್ಯಸೇನ್ ಅಭಿವೃದ್ಧಿ ಅಧ್ಯಯನಗಳು* ೧೯೯೯: ಟಿ.ಆರ್.ಚಂದ್ರಶೇಖರ್, ಕನ್ನಡ ಸಂಘ ಕ್ರೈಸ್ಟ್ ಕಾಲೇಜು.ಬೆಂ.

೩. *ಆಧುನಿಕ ಭಾರತದ ಆರ್ಥಿಕ ಸಮಸ್ಯೆಗಳು* ೧೯೯೦: ಪ್ರಭಾಕರ ಶಿಶಿಲ: ಕಲಾ ಪ್ರಕಾಶನ, ಬೆಂ.

೪. *ಕರ್ನಾಟಕದ ಹೆಳವರು* ೧೯೯೫: ಡಾ. ಹರಿಲಾಲ್ ಪವಾರ್: ಕನ್ನಡ ಸಾಹಿತ್ಯ ಪರಿಷತ್ತು, ಬೆಂ.

೫. *ಕರ್ನಾಟಕದ ಕಲೆಗಳು* ೧೯೯೩: ಪ್ರೊ. ಕೆ.ರಾಮಾಚಂದ್ರರಾವ್ : ಕ.ಸಾ.ಪ. ಬೆಂ.

೬. *ಕುಟುಂಬ ಖಾಸಗೀ ಆಸ್ತಿ ಹಾಗೂ ರಾಜ್ಯ ಇವುಗಳ ಉಗಮ* ೧೯೮೦: ಕೆ.ಎಲ್ ಗೋಪಾಲಕೃಷ್ಣರಾವ್: ಪ್ರಗತಿ ಪ್ರಕಾಶನ

೭. *ಕರ್ನಾಟಕ ರಾಜ್ಯದ ಆರ್ಥಿಕ ವ್ಯವಸ್ಥೆ* ೧೯೮೯: ಎಸ್.ಎನ್.ನಾಯಕ್: ವಿಜಯ ಪಬ್ಲಿಕೇಷನ್ ಗದಗ್

೮. *ಕರ್ನಾಟಕದಲ್ಲಿ ಭೂಸುಧಾರಣೆ* ೧೯೮೭: ಎಮ್.ಎಸ್.ರಾಜನ್: IBM ಬೆಂ.

೯. *ಕಾಡು ಕಾಂಕ್ರೀಟ್ ಮತ್ತು ಜಾನಪದ* ೧೯೯೫: ಬೋರಲಿಂಗಯ್ಯ: ಅಕ್ಷರ ಪ್ರಕಾಶ ಹೆಗ್ಗೋಡು, ಸಾಗರ

೧೦. *ಗಾಂಧೀಯ ಅರ್ಥಶಾಸ್ತ್ರ* ೧೯೮೩: ಸಾ.ಶಿ. ಮರುಳ ಸಿದ್ದಯ್ಯ: ಪ್ರಸಾದ ಪ್ರಕಟನಾಲಯ.ಬೆಂ.

೧೧. *ಪ್ರಾಚೀನ ಭಾರತದ ಆರ್ಥಿಕ ವ್ಯವಸ್ಥೆ* ೧೯೭೨: ಎನ್.ಜಿ.ಚಂದ್ರಶೇಖರಯ್ಯ: ಪ್ರಸಾರಂಗ, ಬೆಂ.ವಿ.ವಿ.

೧೨. *ನಗರ ಸಮಸ್ಯೆಗಳ ಒಂದು ಅಧ್ಯಯನ* ೧೯೮೦: ಡಾ. ಕೆ.ಎನ್.ವೆಂಕಟರಾಯಪ್ಪ. ಕ.ಅ.ಸಂಸ್ಥೆ. ಮೈ.ವಿ.ವಿ

೧೩. *ಭಾರತೀಯ ಸಾಮಾಜಿಕ ಸಂಸ್ಥೆಗಳು* ೧೯೮೨: ನಂಜಮ್ಮಣ್ಣಿ ಮೈಸೂರು ವಿ.ವಿ.

೧೪. *ಭಾರತದ ಅರ್ಥವ್ಯವಸ್ಥೆಯ ಪರಿಚಯ*: ೧೯೮೯: ಎಸ್.ಎನ್.ಸಿ.ರಾವ್, ವಿಜಯಾ ಪಬ್ಲಿಕೇಷನ್ಸ, ಗದಗ್

೧೫. *ಬದಲಾಗುತ್ತಿರುವ ಭಾರತೀಯ ಗ್ರಾಮ* ೧೯೮೨: ಹೆಚ್.ವಿ.ನಾಗೇಶ್: ಕರ್ನಾಟಕ ವಿ.ವಿ.ಪ್ರಸಾರಂಗ, ಧಾರವಾಡ

೧೬. *ಬುಡಕಟ್ಟು, ಬದುಕಿನ ಸ್ಥಿತ್ಯಂತರಗಳು* ೨೦೦೦: ಎ.ಎಸ್.ಪ್ರಭಾಕರ್: ಪ್ರಸಾರಂಗ ಕನ್ನಡ ವಿ.ವಿ.ಹಂಪಿ

೧೭. *ಬುಡಕಟ್ಟು, ಸಮಾಜ* ೨೦೦೦: ಗಂಗಾಧರ ದೈವಜ್ಞ ಪ್ರಸಾರಂಗ, ಕನ್ನಡ ವಿ.ವಿ.ಹಂಪಿ

೧೮. *ಭಾರತ ಸಂಘ ಜೀವನದಿಂದ ಗುಲಾಮ ಗಿರಿಯವರೆಗೆ* ೧೯೮೩: ಅನಂತಕೃಷ್ಣ ಪೆಜ್ಜಾರ್: ಅಭಿವ್ಯಕ್ತ, ಮಂಗಳೂರು-೨

೧೯. ***ಮಹಿಳೆ ಮತ್ತು ಆರ್ಥಿಕತೆ ಅಭಿವೃದ್ಧಿ*** ೨೦೦೧: ಟಿ.ಆರ್.ಚಂದ್ರಶೇಖರ್, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ

೨೦. ***ವಿವಾಹ ಮತ್ತು ಪೂರ್ವ ಪರೋತ್ತರ*** ೧೯೮೯: ರವಿಬೆಳಗೆರೆ, ನವಕರ್ನಾಟಕ ಪಬ್ಲಿಕೇಷನ್ಸ್, ಬೆಂ.

೨೧. ***ಭಾರತೀಯ ಸಮಾಜ*** ೧೯೯೫: ಡಾ.ಆರ್.ಇಂದಿರಾ: ಕ.ಪು.ಪ್ರಾ. ಬೆಂ.

೨೨. ***ಸಮಾಜವಾದ*** ಲೋಹಿಯಾವಾದಿ ವ್ಯಾಖ್ಯೆ: ವಿಜಯ್

೨೩. ***ಚಿತ್ರದುರ್ಗ ಜಿಲ್ಲೆಯ ವ್ಯವಸಾಯ ಜಾನಪದ*** ೧೯೯೫: ಡಾ. ಎಮ್.ಜಿ.ಈಶ್ವರಪ್ಪ, ಕ.ಸಾ.ಪ. ಬೆಂ.

೨೪. ***ವಾನರಿಂದ ಮಾನವನವರೆಗೆ*** ೨೦೦೦: ಫೆಡರಿಕ್ ಎಂಗಲ್ಸ್: ನವಕರ್ನಾಟಕ, ಪ.ಬೆಂ.

೨೫. ***ತುಳುವರ ಮುಂಬಾಯಿ ವಲಸೆ*** ೧೯೯೪: ಡಾ. ವಿಶ್ವನಾಥ ಕರ್ನಾಡ: ಕನ್ನಡ ವಿಭಾಗ. ಮುಂ.ವಿ.ವಿ

೨೬. *ದಿಕ್ಕು ತಪ್ಪಿದ ಕರ್ನಾಟಕ ಭೂಸುಧಾರಣೆ* ೧೯೮೪: ಕ್ಷೀರಸಾಗರ: ಸಿಯಟ್ಸ್, ಕುಕ್ಸಟನ್ ,ಬೆಂ.

೨೭. ಪಕ್ಕಿಪಿಕ್ಕಿಯರ ಉಪಸಂಸ್ಕೃತಿ ಮಾಲೆ ೧೯೯೬: ರಾಜಪ್ಪ ದಳವಾಯಿ: ಕ.ಸಾ.ಅ.ಬೆಂ.

೨೮. ***ಸೋಲಿಗರು*** ಉಪಸಂಸ್ಕೃತಿ ಮಾಲೆ ೧೯೯೬: ಚಂದ್ರು ಕಾಳೇನಹಳ್ಳಿ: ಕ.ಸಾ.ಅ.ಬೆಂ.

೨೯. ***ಹಗಲುವೇಷಗಾರರು*** ಉಪಸಂಸ್ಕೃತಿ ಮಾಲೆ: ೧೯೯೩: ಯಳನಾಡು ಅಂಜನಪ್ಪ: ಕ.ಸಾ.ಅ.ಬೆಂ.

೩೦. ***ಹೈದರಾಬಾದ್ ಕರ್ನಾಟಕದಲ್ಲಿ ಕೃಷಿ ಕಾರ್ಮಿಕರು*** ೨೦೦೧: ಡಾ.ಶಿವಶರಣಪ್ಪ, ಎಚ್.ಧಾಭಾ ಪ್ರಸಾರಾಂಗ ಗು. ವಿ.ವಿ

೩೧. *ಗಿರಿಜನ ನಾಡಿಗೆ ಪ್ರಯಾಣ* ೧೯೯೯: ಬೋರಲಿಂಗಯ್ಯ: ರಾಗಿಕೊಟ್ಟಿ ಪ್ರಕಾಶ,ಬೆಂ.

೩೨. ***ಆಧುನಿಕ ಸಮಾಜ ಹಾಗು ಕೌಟುಂಬಿಕ ಜೀವನದ ಬದಲಾವಣೆಗಳು***: ೧೯೮೭: ಪ್ರಸಾರಂಗ ಕ.ವಿ.ವಿ.ಧಾ.

೩೩. ***ಕರ್ನಾಟಕ ಬುಡಕಟ್ಟುಗಳು*** ೧೯೯೯: ಸಂಪುಟ: ೧,೨: ಎಚ್.ಜೆ.ಲಕ್ಕಪ್ಪಗೌಡ: ಕರ್ನಾಟಕ ಜನಪದ ಅಕಾಡೆಮಿ.ಬೆಂ.

## ಇಂಗ್ಲೀಷ್ ಪುಸ್ತಕಗಳು

1. Economic Development of Tribal India: 1987: Proffullo Chandra Mahapatro: Assish Publishing House New Delhi-26
2. Tribal Life in India: 1994: Anil Kumar Singh Sarup & Sons, New Delhi
3. Tribal Revolts: 1996: Dr. Brij Kishore Sharma: H.O.D. History Dept, Kota University, Kota
4. Tribal Development and Socio. Cultural Matrix: 1993: S.T.Das, Kanishka Pub.
5. Triabal Society in India: 1997: Pandy, A.K.Mank pub.
6. Tribal Life and fousts: 1994: Davendra Kumar Deep & Deep pubblishing New Delhi
7. Tribal in India the chanchu Selnario: 1998: Dr. S.N. Tripathy: Discover publishing House, New Delhi
8. Social Transformation of Indian Tribals: 1999: R.Singh: Anmol Publishing, New Delhi
9. Economic History of India: 1976: Dutt Ramesh: Vol.1, New Delhi
10. Nehru Tribal and Woman welfare: 1989; M.H. Gavit, H.K. Publishing &

Distrubuters, New Delhi

11. Tribal Ecology & Develeopment: 2000: Renuka pattnaik: Rajat publications, New Delhi-2

12. Report of Commitee on Forest and Tribals in India: 1982: Govt.of India, Ministry of Home affairs

13. Hakkipikkes: Unesco-co-Action: Larence Dsoza S.M.T. Learning Centre, Mangalore

## ವಕ್ತೃಗಳು

| ಕ್ರ.ಸಂ | ಹೆಸರು | ತಂದೆಹೆಸರು | ಲಿಂಗ | ವಯಸ್ಸು | ವೃತ್ತಿ |
|---|---|---|---|---|---|
| ೧ | ಕಾಫಿ | ಮಾರೇಗೌಡ | ಪುರುಷ | ೫೨ | ಕೂಲಿ |
| ೨ | ಗ್ರಾಂರೆಡ್ಡಿ | ಪಾಂಪಲ್ಲಿ | ಪುರುಷ | ೪೦ | ವ್ಯಾಪಾರ |
| ೩ | ಜಯಮ್ಮ | ದೊರೆ | ಮಹಿಳೆ | ೪೭ | ವ್ಯಾಪಾರ |
| ೪ | ಡಿಪೋನ್ | ಚಿನ್ನುಪುಳ್ಳಿ | ಪುರುಷ | ೩೮ | ಗುಡಿಕೈಗಾರಿಕೆ |
| ೫ | ಹರಿ | ರಾಮ್‌ಶೆಟ್ಟಿ | ಪುರುಷ | ೪೦ | ವ್ಯವಸಾಯ |
| ೬ | ಬ್ರಿಟಿಷ್ | ರಾಮ್‌ಶೆಟ್ಟಿ | ಪುರುಷ | ೪೦ | ಕೂಲಿ |
| ೭ | ಜಿಂಕುರಮ್ಮ | ತೆವರಚಂದ್ | ಮಹಿಳೆ | ೫೨ | ಭಿಕ್ಷೆ |
| ೮ | ಪಿಳ್ಳಾರೆಡ್ಡಿ | ಲಾರೆನ್ | ಪುರುಷ | ೩೦ | ವ್ಯವಸಾಯ |
| ೯ | ರಾಣಿ | ಮಲೇಶಿಯಾ (ಗಂ) | ಮಹಿಳೆ | ೨೬ | ವ್ಯಾಪಾರ |
| ೧೦ | ವೆಂಕಟೇಶ್ | ದೊರೆ | ಪುರುಷ | ೩೮ | ವ್ಯಾಪಾರ |
| ೧೧ | ಶ್ರೀನಾಥ್ | ಲಕನ್ | ಪುರುಷ | ೧೮ | ವಿಧ್ಯಾರ್ಥಿ |
| ೧೨ | ಸುನಾರೆಡ್ಡಿ | ಹೋಟೆಲ್ | ಪುರುಷ | ೪೩ | ಬಕೀಟ್ ರಿಪೇರಿ |
| ೧೩ | ವಿದೇಯು | ಆಂಡೇಪುರ್ | ಪುರುಷ | ೨೭ | ಗುಡಿ ಕೈಗಾರಿಕೆ |
| ೧೪ | ಎಂಬಳ್ಳಿ | ಮಾರೇಗೌಡ | ಪುರುಷ | ೪೫ | ಸರ್ಕಾರಿ ನೌಕರ |
| ೧೫ | ಡಿವಿಜನ್ | ಚಿನ್ನಪುಳ್ಳಿ | ಪುರುಷ | ೫೮ | ಸರ್ಕಾರಿ ನಿವೃತ್ತಿ |
| ೧೬ | ಗೇರ್‌ಮಾಳ್ | ಬಸ್ಕೋಪ್ (ಗಂ) | ಮಹಿಳೆ | ೪೭ | ವ್ಯಾಪಾರ |

❖❖❖❖❖



ಭೂತಾನಾಹಳ್ಳಿಯ ಹಕ್ಕಿಸಿಕ್ಕಿ ಕಾಲೋನಿಯ ವಿಹಂಗಮನೋಟ



ಹಕ್ಕಿಪಿಕ್ಕಿ ಸಮುದಾಯದ ಹಿರಿಯ



ಹಕ್ಕಿಪಿಕ್ಕಿ ಸಮುದಾಯದ ಹಿರಿಯ



ಹಕ್ಕಿಪಿಕ್ಕಿ ಸರಕಾರ ಕೊಟ್ಟ ಜಮೀನುಗಳು



ಆಶ್ರಮಶಾಲೆಯ ಕೊಠಡಿ




ಕಾಲೋನಿಯ ಆಶ್ರಮ ಶಾಲೆ



ಗುಡಿ ಕೈಗಾರಿಕೆಯಲ್ಲಿ ನಿರತನಾದ ಯುವಕ



ಕರಕುಶಲ ವಸ್ತುಗಳನ್ನು ಮಾರಾಟ ಮಾಡಲು ಹೊರಟ ವ್ಯಕ್ತಿ



ಮಹಿಳೆ ತನ್ನ ಮಾರಾಟದ ಸಾಮಾಗ್ರಿಗಳ ಜೊತೆಗೆ



ಜೇನು ತುಪ್ಪ ಸಂಗ್ರಹಣೆ



ಬಕೀಟು ರೀಪೇರಿ ಮಾಡುವಾತ



ಮುರಿದು ಬಿದ್ದಿರುವ ಹಕ್ಕಿಪಿಕ್ಕಿ ಮನೆ

